ಪಾಯಣ್ಣವ್ರತಿ ವಿರಚಿತ

# ಸಮ್ಯಕ್ತ್ವ ಕೌಮುದಿ



ಸಂಪಾದಕ

ಎಂ. ಪಿ. ಮಂಜಪ್ಪ ಶೆಟ್ಟಿ





ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ–೪೧೮
ಪ್ರಾಚ್ಯಕಾವ್ಯ ಮಾಲೆ–೮೪

ಪ್ರಧಾನ ಸಂಪಾದಕ
ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ
ಎನ್. ಬಸವಾರಾಧ್ಯ

ಪಾಯಣ್ಣವ್ರತಿ ವಿರಚಿತ

# ಸಮ್ಯಕ್ತ್ವಕೌಮುದಿ

ಪಾಯಣ್ಣವ್ರತಿ ವಿರಚಿತ

# ಸಮ್ಯಕ್ತ್ವಕೌಮುದಿ



ಸಂಪಾದಕ

ಎಂ. ಪಿ. ಮಂಜಪ್ಪ ಶೆಟ್ಟಿ




ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೮೨



# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೭೭ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯು 'ಸಂಪಾದನಾ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ.ಶ. ೧೩೪೨ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಕಾಲನಮೂದಿತ ಹಸ್ತಪ್ರತಿಯಾಗಿರುವ ರನ್ನನ 'ಗದಾಯುದ್ಧ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಪ್ರತಿಮಾಡಲಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನಾ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರಗ್ರಂಥಗಳ ಕವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾದಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು,ಗ್ರಂಥ ಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ-ಶಾಸ್ತ್ರ-ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ-ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯ ವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ

ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕು ಕಂಡು ಪೂಜಾರ್ಹವಾಗಿ, ಹಾಲುಂಡು ಮತ್ತೆ ಕತ್ತಲೆಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ, ಈ ಸಂಸ್ಥೆಯ ಸಂಪಾದನಾ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರ ನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದು ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕಗಳು ನಿರ್ಮಿತವಾಗಿರುವ ಕಡೆಗಳಲ್ಲಿ ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿಯಿಂದ ಬೆಳಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಕಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು ಕೀಟನಿರೋಧಕ ತೈಲ ಲೇಪನ ಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು

ಧೂಮನ ಉಪಚಾರ ನೀಡುವುದು (Fumigation treatment), ಶೀರ ತ್ರುಟಿತ ವಾದ ಹಸ್ತಪ್ರತಿಗಳನ್ನು ಮೈಕ್ರೋಫಿಲ್ಮಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯ ವಾದ ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾ ಸಮರ್ಥರೂ ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥ ವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿ ಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು ; (ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ!), ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣ ವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣ ಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನಾ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ

ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು ಅರ್ಥ ಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯಸಂಶೋಧನಾಲಯದ ಅಂಗವಾಗಿದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯಕಾವ್ಯ ಮಾಲೆ'ಯ ಹೆಸರಿನಲ್ಲಿ ಈಗಾಗಲೇ ೮೩ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೂ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನು ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

'ಸಂಪಾದನಾ ವಿಭಾಗ' ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ಸಮಗೆ ನೆರವಾಗುತ್ತಿದೆ. ಎರಡುಸಾವಿರ ವರ್ಷಗಳ ಸುದೀರ್ಘ ಪರಂಪರೆಯುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನಾ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈಗ ಪ್ರಕಟವಾಗುತ್ತಿರುವ ಪಾಯಣ್ಣವ್ರತಿ ವಿರಚಿತ 'ಸಮ್ಯಕ್ತ್ವಕೌಮುದಿ' ಅಧ್ಯಯನ ಸಂಸ್ಥೆಯ ಪ್ರಾಚ್ಯಕಾವ್ಯಮಾಲೆಯ ೮೪ನೆಯ ಪ್ರಕಟಣೆಯಾಗಿದೆ. ಈ ಕೃತಿಯನ್ನು ಸಂಪಾದನಾ ವಿಭಾಗದ ಉಪನಿರ್ದೇಶಕರಾದ ಶ್ರೀ ಎನ್. ಬಸವಾರಾಧ್ಯರ ನೇತೃತ್ವದಲ್ಲಿ ಸಂಶೋಧನ ಸಹಾಯಕರಾದ ಶ್ರೀ ಎಂ. ಪಿ. ಮಂಜಪ್ಪಶೆಟ್ಟಿ ಅವರು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ಅವರಿಗೂ, ಇದರ ಪ್ರಕಟಣೆಯಲ್ಲಿ ಸಹಕರಿಸಿರುವ ಶ್ರೀ ಎನ್. ಬಸವಾರಾಧ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

ಕನ್ನಡ ಸಾಹಿತ್ಯದಲ್ಲಿ ಪ್ರಮುಖಸ್ಥಾನವನ್ನು ಆಕ್ರಮಿಸಿರುವ ಜೈನಸಾಹಿತ್ಯ ಹಲವಾರು ಸಾರಸ್ವತ ಕೃತಿಗಳನ್ನು ಒದಗಿಸಿದೆ. ವಿವಿಧ ಪ್ರಕಾರಗಳಲ್ಲಿ ಕೃತಿರಚನೆ ಗೈದಿರುವ ಜೈನಕವಿಗಳು ಕಥಾಸಾಹಿತ್ಯಕ್ಕೂ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ವಡ್ಡಾರಾಧನೆಯಿಂದ ಹಿಡಿದು ನೋಂಪಿಯ ಕಥೆಗಳವರೆಗೆ ಹಲವಾರು ಕಥಾಸಾಹಿತ್ಯ ಕೃತಿಗಳು ರಚಿತವಾಗಿವೆ. ಪ್ರಕೃತ ಸಮ್ಯಕ್ತ್ವಕೌಮುದಿ ಈ ಪ್ರಕಾರಕ್ಕೆ ಸೇರಿದುದಾಗಿದೆ.

ಕನ್ನಡದಲ್ಲಿ ಸಮ್ಯಕ್ತ್ವಕೌಮುದಿಯನ್ನು ನಾಲ್ವರು ಬರೆದಂತೆ ಕಂಡುಬರುತ್ತದೆ. ಕ್ರಿ.ಶ. 1492 ರಲ್ಲಿದ್ದ ಚಿಕ್ಕಮಲ್ಲಣ್ಣನ ಸಾಂಗತ್ಯಕೃತಿ, 1508ರಲ್ಲಿದ್ದ ಮೂರನೆಯ ಮಂಗರಸನ ವಾರ್ಧಕ ಷಟ್ಪದಿ ಕಾವ್ಯ, 1600ರಲ್ಲಿದ್ದ ಪಾಯಣ್ಣವ್ರತಿಯ ಪ್ರಕೃತ ಸಾಂಗತ್ಯ ಕೃತಿ. ಕಾಲ ಗೊತ್ತಿಲ್ಲದ ನೀಲಕಂಠ ವಿರಚಿತ ಸಾಂಗತ್ಯ ಕಾವ್ಯ. ಈ ನಾಲ್ಕು ಕೃತಿಗಳಲ್ಲಿ ಮೂರನೆಯ ಮಂಗರಸನ ಸಮ್ಯಕ್ತ್ವಕೌಮುದಿ ಈಗಾಗಲೇ ಅಚ್ಚಾಗಿದೆ. ಪಾಯಣ್ಣವ್ರತಿಯ ಕೃತಿ ಇದೀಗ ತಾನೆ ಪ್ರಕಟವಾಗುತ್ತಿದೆ. ಉಳಿದವುಗಳೆರಡೂ ಇನ್ನೂ ಬೆಳಕು ಕಂಡಿಲ್ಲ.

ಪಾಯಣ್ಣವ್ರತಿಯ ಕಾಲ ಕ್ರಿ.ಶ. ಸು 1600 ಎಂದು ಕರ್ಣಾಟಕ ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಕವಿಯ ಕಾಲ ಕ್ರಿ.ಶ. 1680 ಎಂದು ಈ ಕೃತಿಯ ಸಂಪಾದಕರು ನಿರ್ಧರಿಸಿದ್ದಾರೆ. ಪಾಯಣ್ಣವ್ರತಿ ಎಂಬ ಹೆಸರಿನಿಂದಲೇ ಸೂಚಿತವಾಗುವಂತೆ ಈತ ಜೈನಸಂನ್ಯಾಸವನ್ನು ಸ್ವೀಕರಿಸಿದವನು. ಈತನ ಸ್ಥಳ ಪೆನುಗೊಂಡೆ ಪ್ರಾಂತದ ನಂದಿಯಪುರ. ಈತನ ತಂದೆ ಗುಣಮಣಿ ಚಿಕ್ಕಬೊಮ್ಮಸೆಟ್ಟಿ. ತಾಯಿ ಕೆಂಚಮ್ಮ. ಪಾಯಣ್ಣವ್ರತಿ ಭವ್ಯರಿಗೆ ಧಾರ್ಮಿಕ ಕಥೆಗಳನ್ನು ಬೋಧಿಸುತ್ತ ಬ್ರಹ್ಮಚಾರಿಯಾಗಿಯೇ 55 ವರ್ಷಗಳನ್ನು ಕಳೆದು ಆಮೇಲೆ ಲಕ್ಷ್ಮೀಸೇನ ಮುನಿಗಳಿಂದ ಜಿನದೀಕ್ಷೆಯನ್ನು ಪಡೆದು ಸನ್ಯಾಸಿಯಾದನು. ತರುವಾಯ ಸಮ್ಯಕ್ತ್ವಕೌಮುದಿಯನ್ನು ರಚಿಸಿದನು. ಈತನಿಗೆ ಪಾರಿಶ್ವವರ್ಣಿ ಎಂಬ ಹೆಸರೂ ಇತ್ತು. ಈ ಮುಂದಿನ ಪದ್ಯಗಳು ಈ ಎಲ್ಲ ಅಂಶಗಳನ್ನೂ ವಿವರಿಸುತ್ತವೆ:

ಈ ಪರಿ ಐವತ್ತೈದು ವರುಷವಿರ್ದು
ಪಾಪವ ಕೆಡಿಸಲೆಂದೆನುತ
ಶ್ರೀಪತಿಸುತನ ಗೆಲಿದ ಜಿನದೇವನ
ಸ್ಥಾಪಿಸಿದನು ಹೃದಯದೊಳು ೧೮–೭೯

ಏನೆಂದೆ ಪಾರಿಶ್ವನಾಥನ ಬಸದಿಯೊಳ್
ನಾನು ದೀಕ್ಷೆಯ ಪಡೆದುದುಜಿಂ
ಸಾನುರಾಗದಲಿ ಪಾರಿಶ್ವವರ್ಣಿಗಳೆಂದು
ತಾನಾದುದಂದಭಿಧಾನ ೧೮–೮೩

'ಸಮ್ಯಕ್ತ್ವಕೌಮುದಿ'ಯಲ್ಲಿ 18 ಸಂಧಿಗಳೂ 1989 ಪದ್ಯಗಳೂ ಇವೆ. ಇದು ಒಂದು ಜೈನಕಥಾಸಂಕಲನ. ಚಂಚಲವಾದ ಮನಸ್ಸನ್ನು ಸ್ತಿಮಿತದಲ್ಲಿಟ್ಟು ಕೊಂಡು ಜೈನತತ್ವದಲ್ಲಿ ಅನುರಕ್ತಿಯನ್ನು ಹೊಂದಿದವರ ಚರಿತ್ರೆಗಳನ್ನು ಇಲ್ಲಿ ಸಂಗ್ರಹಿಸಿಕೊಡ ಲಾಗಿದೆ. ಸುಲಭವೂ ಸರಳವೂ ಆದ ಶೈಲಿಯಲ್ಲಿ ಗಹನವೂ ಗಂಭೀರವೂ ಆದ ಧಾರ್ಮಿಕ ವಿಷಯಗಳನ್ನು ನಿರೂಪಿಸುವಲ್ಲಿ ಈ ಕಥಾನಿರೂಪಣವಿಧಾನ ಹೆಚ್ಚು ಪರಿಣಾಮಕಾರಿಯಾಗ ಬಲ್ಲುದು. ಅದುದರಿಂದಲೇ ಈ ಕಾವ್ಯ "ಭವ್ಯಜನ ಚಿತ್ತಕುವಲಯಚಂದ್ರಮ" ಸಜ್ಜನರ ಕರ್ಣಾಭರಣ" "ಮುಕ್ತಿಸತಿಯು ತಾವು" ಇದನ್ನು ಕೇಳಿದವರ ಪಾಪ 'ಹರಣವಾಗುವುದು ಎಂದು ಕವಿ ದೃಢವಾಗಿ ನಂಬಿದ್ದಾನೆ.

ಪಾಯಣ್ಣವ್ರತಿ ತನಗಿಂತ ಹಿಂದೆಯಿದ್ದ ಚಿಕ್ಕಮಲ್ಲಣ್ಣ ಮತ್ತು ಮೂರನೆಯ ಮಂಗ ರಸನ ಸಮ್ಯಕ್ತ್ವಕೌಮುದಿಗಳನ್ನು ಅವಶ್ಯವಾಗಿ ಪರಿಶೀಲಿಸಿದ್ದನೆಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಪಾಯಣ್ಣವ್ರತಿಯ ಶೈಲಿ ಸರಳವೂ ಸುಲಭವೂಆದುದಾ ಗಿದೆ. ಕೆಲವು ವರ್ಣನಾಭಾಗಗಳಲ್ಲಿ ಈತ ತನ್ನ ಪ್ರತಿಭೆ ಪಾಂಡಿತ್ಯಗಳನ್ನು ಪ್ರದರ್ಶಿಸಿ ದ್ದಾನೆ. ಈತನು ವ್ರತಿಯಾದುದರಿಂದ ಯಾವ ಲೌಕಿಕ ಆಶೆ ಆಕಾಂಕ್ಷೆಗಳಿಗೂ ಒಳಗಾಗದೆ ಜನ ಬದುಕಬೇಕೆಂದು ಕೃತಿಯನ್ನು ರಚಿಸಿ ಕೃತಾರ್ಥನಾಗಿದ್ದಾನೆ.

ಸಮ್ಯಕ್ತ್ವಕೌಮುದಿಯ ಉಳಿದೆರಡು ಅಪ್ರಕಟಿತ ಕೃತಿಗಳೂ ಪ್ರಕಟವಾದಲ್ಲಿ ಈ ಸಾಹಿತ್ಯವನ್ನು ಕುರಿತು ವ್ಯಾಸಂಗಮಾಡುವವರಿಗೆ ತುಂಬಾ ಉಪಯೋಗವಾಗುತ್ತದೆ. ಈ ದಿಶೆಯಲ್ಲಿ ಪಾಯಣ್ಣವ್ರತಿಯ ಈ ಸಮಕ್ತ್ವಕೌಮುದಿ ಪ್ರಕಟವಾಗುತ್ತಿರುವುದು ಸಮಯೋಚಿತವಾದುದೆಂದು ಭಾವಿಸುತ್ತೇವೆ. ಈ ಕೃತಿ ಸಹೃದಯರ ಮೆಚ್ಚುಗೆಗೆ ಪಾತ್ರವಾಗಬಹುದೆಂದು ನಂಬಿದ್ದೇವೆ.

ಮೈಸೂರು
ದಿನಾಂಕ : 18-8-1982

ಎನ್. ಬಸವಾರಾಧ್ಯ.
ವಿಭಾಗ ಸಂಪಾದಕ.

# ಪರಿವಿಡಿ

# ಪ್ರಸ್ತಾವನೆ

ಚಿಕ್ಕಮಲ್ಲಣ್ಣ (೧೪೯೨), ಮೂರನೆಯ ಮಂಗರಸ (೧೫೦೯), ಪಾಯಣ್ಣವ್ರತಿ (೧೬೮೦) ಮತ್ತು ನೀಲಕಂಠ[?]—ಈ ನಾಲ್ಕುಜನ ಕವಿಗಳ ಸಮ್ಯಕ್ತ್ವಕೌಮುದಿಗಳು ಕನ್ನಡದಲ್ಲಿ ದೊರೆಯುತ್ತವೆ. ಈ ನಾಲ್ಕೂ ಕಾವ್ಯಗಳು ೧೫ ರಿಂದ ೧೭ ನೆಯ ಶ.ದ ಅಂತರದಲ್ಲಿಯೇ ರಚಿತವಾಗಿವೆ. ಸಂಸ್ಕೃತ ಪ್ರಾಕೃತಗಳಲ್ಲಿ ವಿಶೇಷವಾಗಿರುವ ಈ ವಸ್ತುವನ್ನು ಕನ್ನಡಕ್ಕೆ ಮೊಟ್ಟಮೊದಲು ತಂದ ಕೀರ್ತಿ ಚಿಕ್ಕಮಲ್ಲಣ್ಣನಿಗೆ ಸಲ್ಲುತ್ತದೆ. ಎರಡನೆಯವನು ಮೂರನೆಯ ಮಂಗರಸ, ಮೂರನೆಯವನೇ ಪಾಯಣ್ಣವ್ರತಿ.

ಪಾಯಣ್ಣವರ್ಣಿ, ಪಾಯಣ್ಣಮುನಿ, ಪಾಯಣ್ಣ ಮತ್ತು ಪಾಯಣ್ಣವ್ರತಿ—ಹೀಗೆ ಈ ಹೆಸರಿನ ಕವಿಗಳು ನಾಲ್ಕುಜನ ಇದ್ದಾರೆ. ಇವರಲ್ಲಿ ಒಬ್ಬೊಬ್ಬರೂ ಬೇರೆ ಬೇರೆ. ಇವರು ಕ್ರಮವಾಗಿ 'ಜ್ಞಾನಚಂದ್ರ ಚರಿತೆ (ಸಾಂಗತ್ಯ, ಸು.೧೬೫೯), ಸನತ್ಕುಮಾರ ಚರಿತೆ (ಸಾಂಗತ್ಯ, ೧೬೧೬), ಅಹಿಂಸಾಚರಿತೆ (ಸಾಂಗತ್ಯ—೧೭೪೨) ಮತ್ತು 'ಸಮ್ಯಕ್ತ್ವಕೌಮುದಿ' (ಸಾಂಗತ್ಯ—೧೬೮೦) ಎಂಬ ಕಾವ್ಯಗಳ ಕರ್ತೃಗಳು.

ಪ್ರಸ್ತುತ 'ಸಮ್ಯಕ್ತ್ವಕೌಮುದಿ'ಯನ್ನು ಬರೆದ ಪಾಯಣವ್ರತಿಯು ಜೈನಕವಿ. ಪೆನಗೊಂಡೆದೇಶದ 'ನಂದಿಯಪುರ' ಇವನ ಸ್ಥಳ. ನಯನಮನೋಹರವಾದ ಆ ಊರಿನಲ್ಲಿ ಒಂದು ಸುಪಾರ್ಶ್ವನಾಥನ ಬಸದಿ ; ಅದರ ಸಮೀಪದ ವಾಸಿ ಪಾಯಣ್ಣವ್ರತಿಯ ತಂದೆ. ಅವನ ಹೆಸರು ಗುಣಮಣಿ ಚಿಕ್ಕಬೊಮ್ಮಸೆಟ್ಟಿ* ತಾಯಿ ಕೆಂಚಮ್ಮ. ತಂದೆ ಪಾಪಭೀತನೂ ಪರೋಪಕಾರಿಯೂ ಸುಂದರನೂ ಅಚಲ ಜಿನಭಕ್ತನೂ ಆಗಿದ್ದು ಭವ್ಯರಿಗೆ ಧರ್ಮೋಪದೇಶ ಮಾಡುತ್ತಿದ್ದನು. ತಾಯಿಯೂ ಕವಿಯ ತಂದೆಯಂತೆಯೇ ಸುಂದರಿಯಾಗಿದ್ದು ಸೀತೆ ದ್ರೌಪದಿಯರಂತೆ ನೀತಿಯುತೆಯೂ ಪತಿಭಕ್ತೆಯೂ ಆಗಿದ್ದಳು. ಇವರ ಮಗ ಪಾಯಣ್ಣನೂ ಮನ್ಮಥರೂಪಿ. ಭವ್ಯರಿಗೆ ಧರ್ಮಕಥೆಗಳನ್ನು ಓದಿಹೇಳುವ ಉಪಾಧ್ಯಾಯ. ಬಾಲ್ಯದಲ್ಲಿಯೇ ಭಾರತಿಯ (ಸರಸ್ವತಿಯ) ಪ್ರೀತಿಗೆ ಪಾತ್ರನಾಗಿ ಮೇಲುಕವಿತೆಗಳನ್ನು ಬರೆಯುತ್ತಿದ್ದನು ಹೆಂಗಳ ಮೋಹದ ಜಾಲಕ್ಕೆ ಸಿಲ್ಕದೆ ತನ್ನ ಬಾಳನ್ನು ಸದ್ಧರ್ಮಸೇವೆಯಲ್ಲಿ ಸವೆಸಿದನು. ತಾನು ಮದುವೆಯಾಗದೆ ತನ್ನ ಬಾಳಿನ ಐವತ್ತೈದು ವರ್ಷಗಳ ವರೆಗೆ ಶುದ್ಧಬ್ರಹ್ಮಚಾರಿಯಾಗಿದ್ದು ಅನಂತರ ಲಕ್ಷ್ಮೀಸೇನ ಮುನಿಗಳಿಂದ ದೀಕ್ಷೆ ಪಡೆದು ಸನ್ಯಾಸಿಯಾದನು. ತಾನು ಪೆನಗೊಂಡೆಯ

---

*ಕೆಲವರು ಇವನ ಹೆಸರನ್ನು 'ಗುಣಮಣಿಮ್ಮ ಬಣಜಿಗ ಸೆಟ್ಟಿ' ಎಂದು ಭಾವಿಸಿದ್ದಾರೆ. ನೋಡಿ : ಕರ್ನಾಟಕ ಕವಿಚರಿತ್ರೆ, ಸಂ 2, ಪುಟ : 332, 1919, ಮತ್ತು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. 4 ಭಾಗ 2, ಪುಟ 821.

ಪಾರ್ಶ್ವನಾಥನ ಬಸದಿಯಲ್ಲಿ ದೀಕ್ಷೆ ಪಡೆದುದರಿಂದ ಇವನಿಗೆ 'ಪಾರ್ಶ್ವವರ್ಣಿ' ಎಂಬ ಹೆಸರೂ ಬಂದಿತು. ಅನಂತರ ತನ್ನ ಈ ಕಾವ್ಯವನ್ನು ಬರೆದನು:

ಈ ಪರಿಯೊಳು ದೀಕ್ಷೆಯನಾಂತು ಸಮ್ಯಕ್ತ್ವ
ವ್ಯಾಪಿಸೆ ಮನದೊಳು ಮತ್ತೆ
ಐಪೇಳ್ವೆ ಸಮ್ಯಕ್ತ್ವಕೌಮುದಿ ಚರಿತೆಯ
ನಾ ಪೇಳ್ವೆ ಕನ್ನಡದಿಂದ—೧೮-೮೪

ಇವನು ತನ್ನ ಐವತ್ತೈದನೆಯ ವಯಸ್ಸಿನನಂತರ, ತನಗೆ ಸಮ್ಯಕ್ತ್ವ ವ್ಯಾಪಿಸಿ ದೀಕ್ಷೆಹೊಂದಿದ ನಂತರ ಈ 'ಸಮ್ಯಕ್ತ್ವಕೌಮುದಿ'ಯನ್ನು ಬರೆದುದರಿಂದ ಇದಕ್ಕೊಂದು ಪಕ್ವತೆಯುಂಟಾಗಿದೆ.

ಇನ್ನು ಇವನ ಕಾಲ ಮತ್ತು ಸ್ಥಳದ ಬಗ್ಗೆ ಕೆಲವು ಮಾತುಗಳನ್ನು ಹೇಳಬಹುದು.

ಕಾಲ : ಇವನ ಕಾಲವನ್ನು ಕುರಿತು ಕವಿಚರಿತ್ರೆಕಾರರು ಸು. 1600 ಆಗಿರಬಹುದೆಂದಿದ್ದಾರೆ.[1] ಪಾಯಣ್ಣವ್ರತಿಯ ಬಗ್ಗೆ ಬರೆದ ಲೇಖನವೊಂದರಲ್ಲಿ ಕಮಲಾ ಹಂಪನಾ[2], ಬಿ. ಬಿ. ಮಹೀಶವಾಡಿ[3] ಮುಂತಾದವರೂ ಇವನ್ನೇ ಅನುಮೋದಿಸಿದ್ದಾರೆ. ಆದರೆ ಇವರಾರೂ ಕವಿಯ ಕಾಲವನ್ನು ಸಾಧಾರವಾಗಿ ನಿರ್ಧರಿಸಲಲ್ಲಿ ಹೋಗದೆ ನಿಖರವಾಗಿ ಹೇಳದೆ ಕೈಬಿಟ್ಟಿದ್ದಾರೆ. ಕವಿಚರಿತ್ರೆಕಾರರು ಕವಿಯ ಕಾಲ ಸು. 1600 ಎಂದು ಯಾವ ಆಧಾರದಮೇಲೆ ಹೇಳಿದರೋ ಅದೂ ತಿಳಿಯುವುದಿಲ್ಲ. ಆದರೆ ಕವಿಯ ಕಾಲ ಆದಾಗಿರದೆ ಕ್ರಿ.ಶ. 1680 ಎಂದು ಹೇಳಬಹುದು. ಹೇಗೆಂದರೆ, ಕವಿ ತಾನು ತನ್ನ ನಿಡುಬಾಳಿನ 55 ವರ್ಷಗಳ ವರೆಗೆ ಶುದ್ಧ ಬ್ರಹ್ಮಚಾರಿಯಾಗಿದ್ದು ಅನಂತರ ಪೆನಗೊಂಡೆಯ ಪಾರ್ಶ್ವನಾಥ ಬಸದಿಯಲ್ಲಿ ಲಕ್ಷ್ಮೀಸೇನ ಭಟ್ಟಾರಕರಿಂದ ಯತಿದೀಕ್ಷೆಯನ್ನು ಪಡೆದುದಾಗಿ ಹೇಳಿದ್ದಾನೆ:

ಈ ಪರಿ ಐವತ್ತೈದು ವರುಷವಿರ್ದು
ಪಾಪವ ಕೆಡಿಸಲೆಂದೆನುತ.
ಶ್ರೀಪತಿಸುತನ ಗೆಲಿದ ಜಿನದೇವನ
ಸ್ಥಾಪಿಸಿದನು ಹೃದಯದೊಳು ೧೮-೭೯

---

[1] ಕರ್ನಾಟಕ ಕವಿಚರಿತ್ರೆ, ಪುಟ : 333 [2] ಸಮಗ್ರ ಕನ್ನಡ ಸಾಹಿತ್ಯಚರಿತ್ರೆ, ಸಂ.೪ (೨) ಪುಟ 821, [3] ಸಮಗ್ರ ಕನ್ನಡ ಸಾಹಿತ್ಯಚರಿತ್ರೆ ಸಂ. ೪ (೨) ಪುಟ. 798

ಸೇನಗಣಾಂಬರಭಾನುವೆಂದೆನಿಸಿಹ
ಜ್ಞಾನಿ ಲಕ್ಷ್ಮೀಸೇನ ಮುನಿಗೆ
ಸಾನುರಾಗದಿ ವಂದಿಸಿಯೆನ್ನ ಅಘತತಿ
ಹಾನಿಯಪ್ಪಂತು ಮಾಡೆಂದು ೧೮-೮೧

ದರುಶನ ಜ್ಞಾನ ಚಾರಿತ್ರಂಗಳಿವು ಮೂಱಱಿ
ಧರಿಸಿದಲ್ಲದೆ ಕರ್ಮ ಕೆಡದು
ಪರಮಸುಖವನೀವ ಪಂಚಾಣುವ್ರತಗಳ
ಒರೆದು ಕೊಟ್ಟರು ದೀಕ್ಷೆಯನು ೧೮-೮೨

ಏನೆಂಬೆ ಪಾರಿಶ್ವನಾಥನ ಬಸದಿಯೊಳ್
ನಾನು ದೀಕ್ಷೆಯ ಪಡೆದುದಱಿಂ
ಸಾನುರಾಗದಲಿ ಪಾರಿಶ್ವವರ್ಣಿಗಳೆಂದು
ತಾನಾದುದಂದಭಿದಾನ ೧೮-೮೩

ಎಂದು ಹೇಳಿದ್ದಾನೆ. ಇದರಿಂದ ಇವನು ಲಕ್ಷ್ಮೀಸೇನ ಭಟ್ಟಾರಕರಿಂದ ದೀಕ್ಷೆಯನ್ನು ಪಡೆದನೆಂಬುದು ಸ್ಪಷ್ಟ. ಎಂದರೆ, ಪಾಯಣ್ಣವ್ರತಿಯು ಲಕ್ಷ್ಮೀಸೇನ ಭಟ್ಟಾರಕರ ಶಿಷ್ಯನೆಂದೂ ಅವರ ಸಮಕಾಲೀನನೆಂದೂ ಎಂದ ಹಾಗಾಯಿತು. ಹಾಗಾದರೆ ಲಕ್ಷ್ಮೀಸೇನ ಭಟ್ಟಾರಕರು ಯಾರು ? ಅವರ ಕಾಲವೆಷ್ಟು ? ಎಂಬುದನ್ನು ನಾವು ಬಗೆಹರಿಸಿಕೊಂಡರೆ ನಮ್ಮ ಕವಿಯ ಕಾಲವೂ ಖಚಿತವಾಗುತ್ತದೆ. ಈ ಲಕ್ಷ್ಮೀಸೇನ ಭಟ್ಟಾರಕರು ಕ್ರಿ.ಶ. ೧೬೮೦ರ ಹಿಂದೆ ಮುಂದೆ, ಡಿಳ್ಳಿ, ಕೊಲ್ಲಾಪುರ ಜಿನಕಂಚಿಗಳ ಗೆಂತೂ ಅಂತೆಯೆ ಪೆನುಗೊಂಡೆಗೂ ಸಿಂಹಾಸನಾಧೀಶ್ವರರಾಗಿದ್ದವರು. ಇವರಿಂದಲೆ ಪಾಯಣ್ಣವ್ರತಿಯು ದೀಕ್ಷೆಯನ್ನು ಪಡೆದದ್ದು. ಅಲ್ಲದೆ ಇವರ ಕಾಲ ಕ್ರಿ.ಶ. ೧೬೮೦ ಎಂಬುದು ಕೆಲವು ಶಾಸನಗಳಿಂದಲೂ ತಿಳಿದುಬರುತ್ತದೆ. ನಾಗಮಂಗಲ ತಾಲ್ಲೂಕು ಚೆಳ್ಳೂರಿನ ಬ್ರಹ್ಮಸೂರಪ್ಪನವರಲ್ಲಿದ್ದ ಒಂದು ತಾಮ್ರಶಾಸನದಲ್ಲಿ ಈ ಲಕ್ಷ್ಮೀಸೇನ ಭಟ್ಟಾರಕರು ರತ್ನಗಿರಿ ಎಂಬಲ್ಲಿನ ಜೈನಬಸದಿಯನ್ನು ಜೀರ್ಣೋದ್ಧಾರ ಮಾಡಿದ ಸಂದರ್ಭದಲ್ಲಿ, ಬಸದಿಯಲ್ಲಿ ರಾಜಕಾರ್ಯಗಳು ನಡೆಯುವುದಕ್ಕಾಗಿ ಆಪಿನಹಳ್ಳಿಯನ್ನು ದತ್ತಿಕೊಟ್ಟುದಕ್ಕೆ ಒಂದು ದಾನಶಾಸನವಿದೆ. ಅದು ಹೀಗಿದೆ :

x x x ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ೧೬೦೨ ರವುದ್ರಿ ಸಂ ಭಾದ್ರಪದ ಬ ೧೦ ಲ್ಲು ಡಿಳ್ಳಿ ಕೊಲ್ಲಾಪುರ ಜಿನಕಂಚಿ ಪೆನುಗೊಂಡೆ ಸಿಂಹಾಸನದ ಸಮಂತಭದ್ರ ಸ್ವಾಮಿಗಳ ಶಿಷ್ಯರಾದ ವೀರಸೇನ ಭಟ್ಟಾರಕರವರ ಪ್ರಿಯಶಿಷ್ಯರಾದ ಲಕ್ಷ್ಮೀಸೇನ ಭಟ್ಟಾರಕರವರಿಗೆ ಅ[illegible] ಗೋತ್ರದ ಆಪಸ್ತಂಭಸೂತ್ರದ ಯಾಜುಃಶಾಖಾ

ಧ್ಯಾಯಿಗಳಾದ ಶ್ರೀಮನ್ಮಹಾರಾಜ ಶ್ರೀಹರತಿ ಸುಮೇಟ ರಂಗಪ್ಪರಾಜರವರ ಪೌತ್ರರಾದ ಕೃಷ್ಣಪ್ಪರಾಜರವರ ಪುತ್ರರಾದ ರಾಯಪ್ಪರಾಜರವರು ರತ್ನಗಿರಿ ಬಸ್ತಿದೇವಸ್ಥಾನದಲ್ಲಿ ಯಿಾ ಜಿನೇಶ್ವರಸ್ವಾಮಿ ಪ್ರತಿಷ್ಠಾಕಾಲದಲ್ಲಿ ದಾರಾಗೃಹೀತವಾದಿ ಕೊಟ್ಟ ಭೂದಾನದ ಧರ್ಮಶಾಸನದ ಪಟ್ಟೆ ಕ್ರಮವೆಂತೆಂದರೆ x x x [1]

ಅದೇ ಬೆಳ್ಳೂರಿನ ವಿಮಲನಾಥ ಬಸದಿಯೊಳಗಿನ ವಿಮಲನಾಥನ ಮೂಲವಿಗ್ರಹದ ಪೀಠವಲ್ಲಿರುವ ಸುಮಾರು ಇದೇ ಕಾಲದ ಸಂಸ್ಕೃತ ಶಾಸನದಲ್ಲಿಯೂ ಲಕ್ಷ್ಮೀಸೇನಾಚಾರ್ಯರ ಹೆಸರಿದೆ.[2]

ಅದೇ ಬಸದಿಯ ಪಡಸಾಲೆಯ ಗೋಡೆಯ ಮೇಲಿರುವ ಶಾಸನವು ಇದೇ ಲಕ್ಷ್ಮೀಸೇನ ಭಟ್ಟಾರಕರ ಉಪದೇಶದಂತೆ ಸಕ್ಕರೆಸೆಟ್ಟಿ ಎಂಬವನು ಮೈಸೂರು ದೊರೆ ದೇವರಾಜ ಒಡೆಯರು ದಾನವಾಗಿ ಕೊಟ್ಟ ಭೂಮಿಯ ಮೇಲೆ ವಿಮಲನಾಥನ ಚೈತಾಲಯವನ್ನು ಕಟ್ಟಿಸಿದುದಾಗಿ ಹೇಳುತ್ತದೆ. ಅದು ಹೀಗಿದೆ[3]:

xxx ಶ್ರೀಮತು ಡಿಳ್ಳಿ ಕೊಲ್ಲಾಪುರ ಜಿನಕಂಚಿ ಪೆನುಗೆ ಇಂಡೆ ಸಿಂಹಾಸನಾಧೀಶರಾದ ಲಕ್ಷ್ಮೀಸೇನ ಭಟ್ಟಾರಕರ ಪ್ರತಿಬೋಧದಿಂದ ಶ್ರೀ ಮೈಸೂರ ದೇವರಾಜವೊಡೆಯರು ಧಾರಾದತ್ತವಾಗಿ ಕೊಟ್ಟ ಕ್ಷೇತ್ರದಲ್ಲಿ ಸ್ವಶಿಷ್ಯರಹ ಹುಲಿಕಲ್ಲ ಪದುಮಣಶೆಟ್ಟರ ಸುತರಾದ ದೊಡ್ಡಾದಂಣ ಶೆಟ್ಟರ ಪುತ್ರರಾದ ಸಕ್ಕರೆಶೆಟ್ಟರು ಅಭ್ಯುದಯನಿಶ್ರೇಯಸ ನಿಮಿತ್ತವಾಗಿ ಆಚಂದ್ರಾರ್ಕವಾಗಿ ನಿರ್ಮಾಪಿಸಿದ ವಿಮಲನಾಥನ ಚೈತ್ಯಾಲಯವು ಶ್ರೀ॥

ಈ ಶಾಸನದಲ್ಲಿ ಬರುವ ಮೈಸೂರು ದೇವರಾಜ ಒಡೆಯರು–ಎಂದರೆ ಚಿಕ್ಕದೇವರಾಜ ಒಡೆಯರು. ಅವರು ರಾಜ್ಯವಾಳಿದ ಕಾಲ ೧೬೭೩—೧೭೦೪. ಈ ಆಧಾರವೂ ಸಹ ಕವಿಯ ಕಾಲ ೧೬೮೦ ರ ಹಿಂದೆ ಮುಂದೆ ಎಂದು ಹೇಳುವುದಕ್ಕೆ ಸಾಕ್ಷಿಯಾಗಿದೆ.

ಸ್ಥಳ : ಇವನು ತನ್ನ ಸ್ಥಳದ ಬಗ್ಗೆ ಹೇಳುತ್ತ :

ದೇಶದೊಳಧಿಕ ಪೆನಗೊಂಡೆದೇಶವು
ವಾಸವೇಂದ್ರನ ಪುರದಂತೆ
ಲೇಸಾದಿ ಇರುತಿರ್ದುದು ಮತ್ತೆ ಅದಱ ವಿ
ಲಾಸವನೇನ ಬಣ್ಣಿಸುವೆ ೧೮_೬೫

---

[1] ಎ.ಕ. ಎಂಟು, 1979, ಪುಟ 92-93 [2] ಎ. ಕ. ಎಂಟು 1979, ಪುಟ 91
[3] ಅದೇ ಪುಟ 92



ಧರೆವೆಣ್ಣನಾ ಮುದ್ದುವೊಗದೊಳಗೊಪ್ಪುವ
ಕಳಚೆಲ್ವ ನಾಸಿಕದಂತೆ
ಇರುತಿಹ ನಂದಿಯಪುರದ ಸೊಬಗ ನಾನು
ವಿರಚಿಸುವೆನು ಬಲ್ಲನಿತ

ಎಂದು ಹೇಳಿ, ತನ್ನ ಸ್ಥಳವನ್ನು ವರ್ಣಿಸುತ್ತಾ ಹೋಗುತ್ತಾನೆ. ಇದರಿಂದ ಕವಿಯ ಸ್ಥಳ ಪೆನುಗೊಂಡೆಗೆ ಸೇರಿದ ನಂದಿಯಪುರವೆಂದು ತಿಳಿಯುತ್ತದೆ. ಈ ನಂದಿಯ ಪುರ ಈಗಿನ ಕರ್ನಾಟಕದ ಕೋಲಾರ ಜಿಲ್ಲೆಯ ನಂದಿಗ್ರಾಮವೇ ಆಗಿದೆ, ವಿಜಯ ನಗರದ ಅರಸರ ಆಳ್ವಿಕೆಯಲ್ಲಿ ಈ ನಂದಿಯಪುರ (ನಂದಿಗ್ರಾಮ) ಪೆನುಗೊಂಡೆಯ ಪ್ರಾಂತದಲ್ಲಿತ್ತು. ಈಗ ಪೆನುಗೊಂಡೆ ಆಂಧ್ರದಲ್ಲಿದೆ, ನಂದಿಯಪುರ ಕರ್ನಾಟಕದ ಕೋಲಾರ ಜಿಲ್ಲೆಯಲ್ಲಿದೆ. ಹಿಂದೆ ಇದೊಂದು ಜೈನರ ಪ್ರಸಿದ್ಧ ಯಾತ್ರಾಸ್ಥಳವಾಗಿದ್ದು ಅಲ್ಲಿ ನೂರಾರು ಬಸದಿಗಳಿದ್ದುವು

## ಕಾವ್ಯಸಾರ

ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮಗಧದೇಶವಿದೆ, ಅದರಲ್ಲಿ "ಸುರರಾಜ ನಗರಿಯ ತೇಜಕ್ಕೆ ಮಿಗಿಲೆನಿಪ" ರಾಜಿಸುವ ರಾಜಗೃಹವೆಂಬ ನಗರ, ಅದರ ರಾಜ ಶ್ರೇಣಿಕ. ರಾಣಿ ಚೇಳಿನಿ. ಅವಳು ಸದ್ಗುಣಿ, ರತಿಸಮ ರೂಪವತಿ ; ಭಾರತಿಯಂತೆ ವಿದ್ಯಾವತಿ ಲಕ್ಷ್ಮಿಯಂತೆ ಸೌಭಾಗ್ಯವತಿ. ಅವಳಿಗೆ ಸಮ್ಯಕ್ತ್ವ ಉಂಟಾಗಿರುತ್ತದೆ.

ಒಂದುದಿನ ರಾಜನ ಓಲಗಕ್ಕೆ ಒಬ್ಬ ಚರ ಬಂದು, ವಿಪುಲಾದ್ರಿಯಲ್ಲಿ ವೀರ ಜಿನನ ಸಮವಸರಣ ಬಂದುದನ್ನು ತಿಳಿಸುತ್ತಾನೆ. ಆಗ ಶ್ರೇಣಿಕನು ಚೇಳಿನಿಯೊಂದಿಗೆ ಬಂದು ವೀರಜಿನನಿಗೆ ನಮಿಸಿ ಸ್ತುತಿಸುತ್ತಾನೆ. ಚೇಳಿನಿಯು ಜಿನನನ್ನು ಕುರಿತು " ಪಿಂತೆ ಸಮ್ಯಕ್ತ್ವಸುಜ್ಞಾನದಿ ಸದ್ಗತಿಯಾಂತವರಾರೆಲೆ ಸ್ವಾಮಿ"—ಎಂದು ಪ್ರಶ್ನಿಸಿ, ಸಮ್ಯಕ್ತ್ವ ಹುಟ್ಟುವ ಬಗೆಯನ್ನೂ ಹಾಗೆ ಸಮ್ಯಕ್ತ್ವ ಉಂಟಾದವರ ಕಥೆಗಳನ್ನೂ ಹೇಳುವಂತೆ ಕೇಳುತ್ತಾಳೆ. ಆಗ ಮುನಿಯು ಕಥೆಗಳನ್ನು ಹೇಳುತ್ತಾನೆ.

ಉದಿತೋದಯನ ಕಥೆ : ಮಥುರಾಪುರದ ರಾಜ ಉದಿತೋದಯ. ಮನ್ಮಥ ರೂಪಿ, ಕಲಾನ್ವಿತ, ಪಾಪಭೀತ, ಪರೋಪಕಾರಿ, ವೀರ, ಸತ್ಯಸಂಧ, ತ್ಯಾಗಿ, ಮತ್ತು ಅಭಿಮಾನಿ. ಅವನ ರಾಣಿ ಉದಿತಮಹಾದೇವಿ; ಸಚಿವ ಸುಬುದ್ಧಿ. ರಾಜ ಒಂದು ದಿನ ಒಡ್ಡೋಲಗಗೊಂಡಿರುತ್ತಾನೆ. ಮಾಂಡಲಿಕರು ಮನ್ನೆಯರು ಸಾಮಂತರು ದಂಡನಾಯಕರು ರಾವುತರು ಭಟರು ವಿದ್ವಾಂಸರು ಕವಿಗಳು ಗಾಯಕರು ಹಾಸ್ಯಗಾರರು ರಾಯಭಾರಿ

ಗಳು ಸ್ನೇಹಿತರು ಮುಂತಾದವರು ಸಭೆಯಲ್ಲಿ ಕಿಕ್ಕಿರಿದು ತುಂಬಿರುತ್ತಾರೆ. ಅಂದು ಕಾರ್ತಿಕಪೌರ್ಣಿಮಿಯಾದುದರಿಂದ ರಾಜ ಮಂತ್ರಿಯನ್ನು ಕುರಿತು :

ಇಂದು ಕೌಮುದಿ ಹಬ್ಬ ಬಂದಿದೆ ಹಿಂದಕೆ
ಚೆಂದದಿ ನಮ್ಮ ವಂಶದೊಳು
ಚಂದ್ರಿಕಾಹರಣ ಮಾಡಬೇಕು ನೀನೀಗಲಾ
ನಂದದಿ ಮಾಡಿಸೆಂದುಸುರ್ದ

ಆಗ ಮಂತ್ರಿ ಆ ವ್ಯವಸ್ಥೆ ಮಾಡಿಸುತ್ತಾನೆ

ಪಟ್ಟಣದೊಳಗೊರ್ವ ಸ್ತ್ರೀಯರಿದ್ದರೆ ಮನೆ
ಮುಟ್ಟುಗೀನೆ ಕೊಂಬೆವೆಂದು
ಕಟ್ಟರಸಿನ ಅನುಮತದಿಂದ ಪೇಟೆಯೊಳ್
ಘಟ್ಟಿದರಾಗ ಡಂಗುರವ

ರಾಜಾಜ್ಞೆಯಂತೆ ನಗರದ ಸ್ತ್ರೀಯರೆಲ್ಲ ಪುರದ ಉದ್ಯಾನಕ್ಕೆ ಹೋಗುತ್ತಾರೆ. ರಾಣೀಸಮೇತ ಅರಮನೆಯ ಸ್ತ್ರೀ ಸಮೂಹವೆಲ್ಲಾ ಉದ್ಯಾನವನ್ನು ಸೇರುತ್ತದೆ. ಆದರೆ, ರಾಜನಾದಿಯಾಗಿ ಯಾವ ಗಂಡೂ ಆ ಉತ್ಸವಕ್ಕೆ ಹೋಗುವಂತಿರುವುದಿಲ್ಲ. ಅದೇ ಸಮಯಕ್ಕೆ ಚಂದ್ರೋದಯವಾಗುತ್ತದೆ' ಅರಮನೆಯಲ್ಲಿ ಒಂಟಿಯಾಗಿದ್ದ ರಾಜನಿಗೆ ವಿರಹವೇದನೆಯುಂಟಾಗುತ್ತದೆ. ತಾನು ಮಂತ್ರಿಯನ್ನು ಕರೆದು " ತರುಣಿಯರಿರುತಿಹ ವನಕೆಯ್ದಿ ಜಾತ್ರೆಯ ಪರಿಯ ನೋಡಲುಬೇಕು "—ಎನ್ನುತ್ತಾನೆ. ಆದರೆ ಮಂತ್ರಿ ಅವನ ವಿರಹದಾವಾನಲಕ್ಕೆ ತಣ್ಣೀರೆರಚುತ್ತಾನೆ. ಅವನಿಗೆ ಬುದ್ಧಿ ಹೇಳಿ, ರಾಜಾಜ್ಞೆಯನ್ನು ರಾಜನೇ ಮುರಿದರೆ ಅಪಕೀರ್ತಿ ಬರುವುದೆಂದೂ ಅರಸುತನಕ್ಕೆ ಕೇಡು ಬರುವುದೆಂದೂ ಎಚ್ಚರಿಸಿ. ಹಾಗೆ ಮಾಡಿ ಅಪಕೀರ್ತಿ ಹೊಂದಿದ ಸುಯೋಧನನೆಂಬ ರಾಜನ ಕಥೆ ಹೇಳುತ್ತಾನೆ:

ಸುಯೋಧನನ ಕಥೆ : ಕುರುಜಾಂಗಣದ ರಾಜಧಾನಿ ಹಸ್ತಿನಾಪುರ. ರಾಜ ಸುಯೋಧನ ಕಮಲಾದೇವಿ ರಾಣಿ; ಅವರ ಮಗ ಗುಣಪಾಲ ಪುರುಷೋತ್ತಮ ಮಂತ್ರಿ ಕಪಿಲನೆಂಬುವನು ಪುರೋಹಿತ ಇವರು ದಿನವೂ ರಾಜನಿಗೆ ಅನೀತಿಯನ್ನೇ ಬೋಧಿಸುತ್ತಿರುತ್ತಾರೆ. ಹೀಗಿರುವಾಗ ಒಂದು ದಿನ ಒಬ್ಬ ಚರ ರಾಜನಲ್ಲಿಗೆ ಬಂದು, ಶತ್ರುರಾಜರು ತಮ್ಮ ರಾಜ್ಯವನ್ನು ಲೂಟಿಮಾಡುತ್ತಿರುವುದಾಗಿ ಹೇಳುತ್ತಾನೆ. ಆಗ ರಾಜನು ಸಿಂಹದಂತೆ ಸಿಡಿದೆದ್ದು, ಯಮದಂಡನೆಂಬ ತಳಾರನಿಗೆ ತಾನು ಹಿಂತಿರುಗುವವರೆಗೆ ನಗರವನ್ನು ಪರಿರಕ್ಷಿಸುವ ಹೊಣೆಯನ್ನು ವಹಿಸಿ ಹೋಗುತ್ತಾನೆ. ಶತ್ರುಗಳನ್ನು ಸಂಹರಿಸಿ ತನ್ನ ನಗರಕ್ಕೆ

ಹಿಂತಿರುಗಿ, ತನ್ನ ಗೈರು ಹಾಜರಿಯಲ್ಲಿ ಯಮುದಂಡನು ತಮ್ಮನ್ನು ಹೇಗೆ ನೋಡಿಕೊಳ್ಳುತ್ತಿದ್ದನೆಂದು ಪುರಜನರನ್ನು ಕೇಳುತ್ತಾನೆ. ಆಗ ಅವರು " ನಿನಗಿಂತ ಇಮ್ಮಡಿಯಾಗಿ ತಾ ಯಮುದಂಡ ಮಮತೆಯಿಂದಲಿ ಸಲಹಿದನು" ಎನ್ನುತ್ತಾರೆ. ಜನರ ಈ ಮಾತು ರಾಜನಿಗೆ ಸಂತೋಷದ ಬದಲು ಅವಮಾನವನ್ನುಂಟುಮಾಡುತ್ತದೆ. " ಭೂಪನಿಂದಲಿ ಯಮುದಂಡ ಇಮ್ಮಡಿ !" ಎಂದದ್ದು ಅರಸನಿಗೆ ಯಮುದಂಡನ ಮೇಲೆ ಅಸೂಯೆಯನ್ನುಂಟುಮಾಡುತ್ತದೆ " ಪಾಪಿ ತಳಾರ, ನಾನಳಿದಡೆ ರಾಜ್ಯಕ್ಕೆ ಭೂಪನೆ ! ಇದು ರಾಜದ್ರೋಹ" ವೆಂದೆಣಿಸುತ್ತಾನೆ. ಅವನ ತಲೆ ಹಾರುವಂತೆ ಹೊಯಿಸುವುದಾಗಿ ನಿರ್ಧರಿಸಿ, ಮಂತ್ರಿ ಪುರೋಹಿತರನ್ನು ಕರೆಸಿ ತನ್ನ ನಿರ್ಧಾರವನ್ನು ಅವರಿಗೆ ತಿಳಿಸುತ್ತಾನೆ ಆದರೆ ಅವನನ್ನು ಆ ಕೂಡಲೆ ಕೊಲ್ಲಲು ಮಂತ್ರಿ ಬಿಡುವುದಿಲ್ಲ ನಗರದ ಜನರೆಲ್ಲ ತಳಾರನಿಗೆ ಹಿತರಾಗಿದ್ದಾರೆಂದೂ ಅವನನ್ನು ಹಾಗೆ ಕೊಲ್ಲಬಾರದೆಂದೂ " ಉರ್ವಿಯೊಳಗೆ ತಪ್ಪ ಹೊರಿಸಿ ಕೊಂದಡೆಯುನು ಸರ್ವರ ಮೆಚ್ಚು ಭೂಪೇಂದ್ರ" ಎಂದು ನೀತಿ ಹೇಳಿ, ತಾವು ಮೂವರೂ ರಾತ್ರಿಯಲ್ಲಿ ಭಂಡಾರಕ್ಕೆ ಕನ್ನಹಾಕಿ ಸಮಸ್ತ ಆಭರಣವನ್ನು ತೆಗೆದು ಬಚ್ಚಿಟ್ಟು ಯಮುದಂಡನು ಕಳ್ಳರನ್ನು ಹಿಡಿಯದಿದ್ದರೆ ಅವನನ್ನು ಕೊಲ್ಲಿಸುವುದು ಎಂದು ಉಪಾಯಹೇಳುತ್ತಾನೆ ಅದರಂತೆ ರಾಜ ಮತ್ತು ಮಂತ್ರಿ ಸೇರಿ ಪುರೋಹಿತ ಯಾರೂ ಅರಿಯದಂತೆ ಕೋಶಗೃಹವನ್ನು ಹೊಗುತ್ತಾರೆ. ಆಭರಣವನ್ನು ಕದಿಯುವಾಗ ತಮ್ಮ ಗುರುತುಗಳು ಬೀಳಬಾರದೆಂದು ಯೋಚಿಸಿ, ಕಳವಿಗೆ ಮೊದಲು ತಮ್ಮ ರನ್ನದ ಹಾವುಗೆ ಯಜ್ಞಸೂತ್ರ, ಚಿನ್ನದುಂಗುರಗಳನ್ನು ಒಂದೆಡೆಗೆ ತೆಗೆದಿರಿಸಿ ಆಭರಣಗಳನ್ನು ತೆಗೆದು ಬಚ್ಚಿಡುತ್ತಾರೆ. ಆದರೆ ಹಾವುಗೆ, ಉಂಗುರ ಯಜ್ಞಸೂತ್ರಗಳನ್ನು ಅಲ್ಲಿಯೇ ಮರೆತು ಬಿಟ್ಟುಬರುತ್ತಾರೆ. ಬೆಳಗಾದಮೇಲೆ ಕೋಶಾಗಾರ ಲೂಟಿಯಾದ ಸಮಾಚಾರ ನಗರದಲ್ಲೆಲ್ಲ ಹರಡುತ್ತದೆ. ರಾಜನು ಕಳ್ಳರನ್ನು ಹಿಡಿದುತರಲು ತಳಾರನಿಗೆ ಆಜ್ಞೆ ಮಾಡುತ್ತಾನೆ. ಹಾಗೆ ಹಿಡಿತರಲು ಅವನಿಗೆ ಎಂಟು ದಿನಗಳ ಕಾಲಾವಕಾಶವನ್ನು ಕೊಡುತ್ತಾನೆ. ಆ ರಾಜ್ಯದಲ್ಲಿ ಕಳ್ಳರೇ ಇಲ್ಲದಿದ್ದುದರಿಂದ ತಾನೆಂತು ಕಳ್ಳರನ್ನು ಹಿಡಿಯುವುದೆಂಬ ಸಮಸ್ಯೆಯಾಗುತ್ತದೆ. ತಳಾರನು ತನ್ನ ಅವಸಾನಕಾಲ ಸಮೀಪಿಸಿತೆಂದು ಬಗೆಯುತ್ತಾನೆ. ಆದರೂ ಪ್ರಾಣಭಯದಿಂದಲೇ ಕಳವಾದ ಸ್ಥಳವನ್ನು ಪರೀಕ್ಷಿಸುತ್ತಾನೆ. ಅಲ್ಲಿ ರಾಜ ಮಂತ್ರಿ ಪುರೋಹಿತರು ಮರೆತುಬಿಟ್ಟಿದ್ದ ಉಂಗುರ, ಹಾವುಗೆ ಯಜ್ಞಸೂತ್ರಗಳು ದೊರೆಯುತ್ತವೆ. ಅವನ್ನು ತಂದು ಇವರೇ ಕಳ್ಳರೆಂದು ನಿರ್ಧರಿಸಿ ತನ್ನ ಪ್ರಾಣ ಉಳಿಯಿತೆಂದು ಸಂತಸಗೊಂಡು, ಆ ವಸ್ತುಗಳನ್ನು ತನ್ನ ಮನೆಯಲ್ಲಿಟ್ಟು ಊರೊಳಗೆ ಕಳ್ಳರನ್ನು ಹಿಡಿಯುವ ನಾಟಕ ಆಡುತ್ತಿರುತ್ತಾನೆ. ಸಮಯ ನೋಡಿ ಉಪಾಯದಿಂದ ಅವರ ಕುತಂತ್ರವನ್ನು ಬಯಲಿಗೆಳೆಯಲು ತವಕಿಸುತ್ತಿರುತ್ತಾನೆ. ಆದರೆ ಅರಸನು ಕೊಟ್ಟಿದ್ದ ಎಂಟುದಿನಗಳ ಗಡುವು ಮುಗಿಯುವವರೆಗೂ ಇವನು ಇವನ್ನು ಬಯಲಿಗೆಳೆಯುವುದಿಲ್ಲ. ಅರಸನು ಇವನನ್ನು ಕರೆಸಿ ಕೇಳಿದಾಗಲೆಲ್ಲ ಒಂದೊಂದು ಕಥೆ

ಹೇಳಿ, ಅದನ್ನು ಕೇಳುತ್ತ ತಾನು ಕಳ್ಳನನ್ನು ಹುಡುಕುವುದನ್ನು ಮರೆತುದಾದಿ ಹೇಳ ತೊಡಗುತ್ತಾನೆ. ಇವನು ಹಾಗೆ ಹೇಳಿದ ಎಂಟು ಕಥೆಗಳು ಹೀಗಿವೆ :

ಮುದಿಹಂಸದ ಕಥೆ : ಒಂದು ದೊಡ್ಡಕಾಡು. ಆ ಕಾಡಿನಲ್ಲಿ ಬೆಳೆದಿದ್ದ ಒಂದು ದೊಡ್ಡ ಮರದಲ್ಲಿ ಒಂದು ಮುದಿಹಂಸ ಗೂಡುಕಟ್ಟಿಕೊಂಡು ವಾಸಿಸುತ್ತಿರುತ್ತದೆ. ಅದರ ಜತೆ ಇನ್ನೂ ಅನೇಕ ಹಂಸಗಳಿರುತ್ತವೆ. ಅವನ್ನು ಕಂಡ ಒಬ್ಬ ಬೇಡ “ಇದಱೊಳಗೊಂದೊಂದ ದೊರೆಗಳಿಗಿತ್ತರೆ ಒದಗುವದೆಮಗೆ ಸಂಪದವು”-ಎಂದು ಭಾವಿಸುತ್ತಾನೆ. ಆದರೆ ಆ ಮರವನ್ನು ಹತ್ತುವಂತಿರುವುದಿಲ್ಲ. ಅದಕ್ಕೊಂದು ಉಪಾಯವನ್ನು ಯೋಚಿಸಿ ಮರದ ಬುಡದಲ್ಲಿ ಒಂದು ದೊಡ್ಡ ಬಳ್ಳಿಯ ಬೀಜವನ್ನು ನೆಡುತ್ತಾನೆ. ಬೀಜ ಮೊಳೆತು ಬಳ್ಳಿ ಬೆಳೆದು ಮರವನ್ನು ಹಬ್ಬತೊಡಗುತ್ತದೆ. ಅದನ್ನು ಕಂಡ ಮುದಿಹಂಸ ಇತರ ಹಂಸಗಳನ್ನು ಕುರಿತು “ಈ ಲತೆ ಮೇಲಕೆ ಬಂದರೆ ಬೇಡ ಲೀಲಾಮಾತ್ರದಿ ನಮ್ಮ ಹಿಡಿದು ಕಾಲನ ಪುರವನೆಯ್ದಿಸುವನು. ಆದುದರಿಂದ ನೀವು, ಅದು ಹಬ್ಬುವ ಮೊದಲೆ ಬಳ್ಳಿಯನ್ನು ಕಡಿದುಹಾಕಿರಿ”—ಎಂದು ಎಚ್ಚರಿಸುತ್ತದೆ. ಆದರೆ ಅವು ಅದರ ಮಾತನ್ನು ಕೇಳುವುದಿಲ್ಲ. ಬದಲು “ಬಂದುದು ವೃದ್ಧಾಪ್ಯ ಕಾಲವಾಯಿತು. ನೀನು ಮುಂದೆ ಬಾಳುವ ಬಗೆ ಯಾಕೆ” ಎಂದು ಮುದಿಹಂಸವನ್ನೇ ಹಾಸ್ಯಮಾಡುತ್ತವೆ. ಆದರೆ ಕೆಲವೇ ದಿನಗಳಲ್ಲಿ ಬಳ್ಳಿ ಹಬ್ಬಿ ಬೆಳೆದು ಮರದ ತುದಿಯನ್ನು ಮುಟ್ಟುತ್ತದೆ. ಅದನ್ನು ಕಂಡ ಬೇಡ ಆನಂದದಿಂದ ಮರ ಹತ್ತಿ ಬಲೆಬೀಸುತ್ತಾನೆ. ಹಂಸಗಳೆಲ್ಲ ಬಲೆಗೆ ಬೀಳುತ್ತವೆ. “ಮೊದಲು ಮುದಿಯನ ಮಾತ ಕೇಳದೆ ಕೆಟ್ಟೆವಲ್ಲಾ”—ಎಂದು ಗೋಳಿಡುತ್ತವೆ. ಅದನ್ನು ಕಂಡ ಮುದಿಹಂಸ “ಪುತ್ರರ ಹರಣವಳಿವ ತೆಱನಾಯ್ತೇ” ಎಂದು ಮರುಗಿ, ‘ಬಂದು ಬೇಡನು ನಿಮ್ಮ ಹಿಡಿವಾಗ ನೀವೆಲ್ಲ ಕಂದಿಬಿದ್ದಿರಿ ಸತ್ತ ತೆಱದಿ” ಎಂದು ಒಂದು ಉಪಾಯ ಹೇಳುತ್ತದೆ. ಹಂಸಗಳು ಹಾಗೇ ಮಾಡುತ್ತವೆ. ಮುಂಜಾನೆ ಬಂದ ಬೇಡನಿಗೆ ಸತ್ತಂತೆ ಬಿದ್ದಿದ್ದ ಹಂಸಗಳನ್ನು ಕಂಡು ಸಂತೋಷದ ಬದಲು ದುಃಖವಾಗುತ್ತದೆ. ರಾಜನಿಗೆ ಅವನ್ನು ಕೊಟ್ಟು ಸಂಪತ್ತನ್ನು ಗಳಿಸಬೇಕೆಂದಿದ್ದ ಅವನಿಗೆ ಅತೀವ ದುಃಖವಾಗಿ, ಒಂದೊಂದನ್ನೂ ಬಲೆಯಿಂದ ತೆಗೆದು ಹೊರಹಾಕುತ್ತಾನೆ. ಹಂಸಗಳೆಲ್ಲ ದೂರ ಹಾರಿಹೋಗುತ್ತವೆ. ಮುದಿಹಂಸದ ಉಪದೇಶ ಫಲಿಸುತ್ತದೆ

ಕುಂಬಾರನ ಕಥೆ : ಒಂದೂರಿನಲ್ಲಿ ಒಬ್ಬ ಕುಂಬಾರ ಮಡಕೆ ಮಾಡಿ ಮಾರಿ ಜೀವಿಸುತ್ತಿರುತ್ತಾನೆ. ಅವನು ಒಂದು ದಿನ ಮಣ್ಣನ್ನು ತರುತ್ತಿರುವಾಗ ಬೆನ್ನು ಬಾಗಿ ತೂಗುತ್ತ ಬರುತ್ತಿದ್ದ ಅವನನ್ನು ಊರ ಜನರು ನೋಡಿ “ನಿನಗೆ ಹೀಗಾಗಲು ಕಾರಣವೇನು ?” ಎಂದು ಕೇಳುತ್ತಾರೆ. ಅದಕ್ಕೆ ಅವನು, ತಾನೊಮ್ಮೆ ಒಂದು ಬಿಲದಲ್ಲಿ ಮಣ್ಣು ಅಗೆಯುವಾಗ ಒಂದು ಮಣ್ಣಿನ ಹೆಂಟೆಯು ತನ್ನ ಮೇಲೆ ಬಿದ್ದುದರಿಂದ ಹಾಗಾಯಿತೆಂದು ಹೇಳುತ್ತಾನೆ,

ಹುಲ್ಲೆಯ ಕಥೆ: ಒಮ್ಮೆ ಜಿಂಕೆಯೊಂದು ಕಾಡಿನಲ್ಲಿ ತನ್ನ ಮರಿಗಳೊಂದಿಗೆ ಬರುತ್ತಿರುತ್ತದೆ. ಆಗ ಅದನ್ನು ಬೇಡರ ನಾಯಿಗಳು ಬೆನ್ನಟ್ಟುತ್ತವೆ. ಮುಂದೆ ಕಾಳ್ಗಿಚ್ಚು ಮುಸುಕುತ್ತಿರುತ್ತದೆ. ಆಗ ಜಿಂಕೆ ತಾನು ಬದುಕುಳಿಯುವ ಬಗೆಯನ್ನು ಚಿಂತಿಸುತ್ತಿರುತ್ತದೆ.

ಕನಕನ ಕಥೆ: ಪಾಂಚಾಳ ದೇಶದಲ್ಲಿ ಪರಶಕ್ತಿ ಎಂಬುದು ಒಂದು ನಗರ. ಅದರ ರಾಜ ಕನಕ, ರಾಣಿ ಜಿನದತ್ತೆ. ರಾಜನು ಒಮ್ಮೆ ಶತ್ರುರಾಜರನ್ನು ಸೋಲಿಸಿ ತನ್ನ ಪುರಪ್ರವೇಶ ಮಾಡುವಾಗ ಊರ ಮಾರಿ ಪುರದ ಕೋಟೆಗೋಡೆಯನ್ನು ಕೆಡವಿ ತಳ ಮೇಲು ಮಾಡುತ್ತದೆ. ಇದರಿಂದ ರಾಜನಿಗೆ ಅಪಶಕುನವಾಗುತ್ತದೆ. ಮೂರು ಸಾರಿ ರಾಜನಿಗೆ ಆಶ್ಚರ್ಯವಾಗಿ ಅದಕ್ಕೆ ಕಾರಣವನ್ನು ವಿಚಾರಿಸಲು ಅದು ಮಾರಿಯ ಕೆಲಸವೆಂದೂ ಅದಕ್ಕೆ ನರಬಲಿಯನ್ನು ಕೊಟ್ಟರೆ ಕೋಟೆ ನಿಲ್ಲುವುದೆಂದೂ ತಿಳಿಯುತ್ತದೆ. ಆದರೆ ನರಬಲಿಯನ್ನು ಕೊಡಲು ರಾಜ ಒಪ್ಪುವುದಿಲ್ಲ. ನರಬಲಿ ಕೊಡದೆ ಕೋಟೆ ನಿಲ್ಲದೆಂದು ಯೋಚಿಸಿದ ಮಂತ್ರಿ ಒಂದು ಉಪಾಯ ಮಾಡುತ್ತಾನೆ. "ಮಾರಿಗೆ ತಮ್ಮ ಕಂದನ ತಾಯಿ ತಂದೆಗಳು ತಂದುಕೊಡುವರುಂಟೆ, ಅಂತಹವರಿಗೆ ಹತ್ತುಸಾವಿರ ಹೊನ್ನ ಕೊಡುವು'ದಾಗಿ ಪುರದ ಬೀದಿಗಳಲ್ಲಿ ಡಂಗುರ ಹೊಯ್ಸುತ್ತಾನೆ. ಆ ಪುರದಲ್ಲಿ ವರದತ್ತ ಮತ್ತು ವರದತ್ತೆ ಎಂಬ ದಂಪತಿಗಳು. ಭಿಕ್ಷೆಯಿಂದ ಜೀವನ ನಡೆಸುತ್ತಿರುತ್ತಾರೆ. ಅವರಿಗೆ ಎಂಟು ಮಂದಿ ಗಂಡುಮಕ್ಕಳು. ಅವರು ಹೊಟ್ಟೆಗನ್ನವಿಲ್ಲದೆ ಸೊರಗುತ್ತಿರುತ್ತಾರೆ. ಡಂಗುರವನ್ನು ಕೇಳಿದ ವರದತ್ತನು ತನ್ನ ಮಗನೊಬ್ಬನನ್ನು ಬಲಿಗೊಡಲು ಸಿದ್ಧನಾಗಿ ಹೋಗಿ ಹೊನ್ನನ್ನು ಹೊತ್ತುತರುತ್ತಾನೆ. ಮಗನನ್ನು ನೂತನ ವಸ್ತ್ರಾಭರಣಗಳಿಂದ ಅಲಂಕರಿಸಿ, ಮಾಲೆ ಹಾಕಿ, ಬಂಡಿಯ ಮೇಲೆ ಕುಳ್ಳಿರಿಸಿ ಊರಿನ ಬೀದಿಬೀದಿಗಳಲ್ಲಿ ಮೆರೆಸಿ ಮಾರಿಗುಡಿಗೆ ಕರೆತರುತ್ತಾನೆ. ಮಗನ ಕುತ್ತಿಗೆ ಕತ್ತರಿಸಲು ಖಡ್ಗವಿಡಿದು ನಿಂತಾಗ ಮಗನು ನಗುನಗುತ್ತ ಸಿದ್ಧನಾಗುತ್ತಾನೆ. ಅದನ್ನು ಕಂಡ ಮಂತ್ರಿ ಅವನ ನಗುವಿಗೆ ಕಾರಣ ಕೇಳುತ್ತಾನೆ. ಆಗ ಆ ಬಾಲಕನು "ವಾರಿಜೋದ್ಭವ ಮುನ್ನ ಬರೆದಿರ್ದ ಲಿಪಿಯನ್ನು ಆರು ಮೀರುವರು ಲೋಕದೊಳು?"—ಎನ್ನುತ್ತಾನೆ. ಬಾಲಕನ ಧೈರ್ಯವನ್ನು ಕಂಡು ಮಾರಿಯೇ ಬೆರಗಾಗುತ್ತಾಳೆ. ತನ್ನ ಕೋಪವನ್ನು ಬಿಟ್ಟು ಕೋಟೆಯನ್ನು ಹಾಕಿಸುವಂತೆ ರಾಜನಿಗೆ ಆಜ್ಞೆ ಮಾಡುತ್ತಾಳೆ. ಅನಂತರ ರಾಜನು ಆ ವೀರಬಾಲಕನಿಗೆ ವಸ್ತ್ರಾಭರಣಗಳನ್ನು ಮೆಚ್ಚಿಕೆಯಿತ್ತು ಕಳಿಸಿಕೊಡುತ್ತಾನೆ.

ಯಶೋಭದ್ರನ ಕಥೆ:—ಅವಂತೀ ದೇಶದಲ್ಲಿ ಉಜ್ಜಯಿನಿ ಎಂಬುದು ಒಂದು ಪಟ್ಟಣ. ಅಲ್ಲಿನವ್ಯಾಪಾರಿ ಯಶೋಭದ್ರ. ಅವನು ಜಿನಭಕ್ತ. ಒಮ್ಮೆ ಅವನು ವ್ಯಾಪಾರಕ್ಕೆಂದು ಹೊರಟುನಿಂತು, ತಾಯಿಯನ್ನು ಕರೆದು, ತನ್ನ ಹೆಂಡತಿಯನ್ನು ಚೆನ್ನಾಗಿ

ನೋಡಿಕೊಳ್ಳುವಂತೆ ಹೇಳಿ ಹೋಗಿ ಊರ ಹೊರಗೆ ಬೀಡುಬಿಡುತ್ತಾನೆ. ತನ್ನ ಮುದ್ರೆಯುಂಗುರವನ್ನು ಮರೆತು ಬಂದಿದ್ದುದರಿಂದ ಅದನ್ನು ತರಲು ರಾತ್ರಿ ಮನೆಗೆ ಹೋಗಿ ಬಾಗಿಲು ತೆಗೆಯಿಸುತ್ತಾನೆ. ಆಗ ತನ್ನ ತಾಯಿ ಜಾರನೊಬ್ಬನೊಡನೆ ಕೂಡುತ್ತಿದ್ದುದನ್ನು ಕಂಡು ತುಂಬ ದುಃಖಿತನಾಗುತ್ತಾನೆ. ಏನೂ ಮಾಡಲು ತೋಚದೆ ತಾಯಿಯೆಂದು ಕ್ಷಮಿಸಿ ಮನೆಯೊಡತಿಯೇ ಹೀಗೆ ಮಾಡಿದರೆ ಯಾರು ಏನು ತಾನೆ ಮಾಡಲು ಸಾಧ್ಯ ? ಎಂದುಕೊಂಡು ಹೊರಟುಹೋಗುತ್ತಾನೆ.

ಕೋತಿಗಳ ಕಥೆ : ಪಾಟಲೀಪುರದ ರಾಜ ಯಶೋಭದ್ರ. ಸಕಲ ಸಂಪತ್ತಿನಿಂದ ಕೂಡಿರುತ್ತಾನೆ. ಒಮ್ಮೆ ವನದ ಫಲಗಳನ್ನೆಲ್ಲ ಕೋತಿಗಳು ತಿಂದು ಹಾಳು ಮಾಡಲು, ಚರರಿಗೆ "ಇಂದು ನಮ್ಮ ಮನೆಯೊಳು ಸಾವಿರ ಕಪಿಗಳ ತಂದು ಈ ವನದೊಳು ಬಿಟ್ಟು ಬಂದಿರ್ದ ಕಪಿಗಳನೋಡಿಸು" ಎಂದು ಆಜ್ಞೆಮಾಡುತ್ತಾನೆ. ಚರರು ಹಾಗೆಯೇ ಮಾಡಿ ಕಾಡಿನ ಕಪಿಗಳನ್ನು ಪಳಗಿಸಲು ಪ್ರಯತ್ನಿಸುತ್ತಾರೆ. ಆದರೆ ಅರಮನೆಯ ಕಪಿಗಳೆಲ್ಲ ಅವುಗಳೊಂದಿಗೆ ಸೇರಿ ವನವನ್ನು ಇನ್ನೂ ಹೆಚ್ಚು ಹಾಳು ಮಾಡುತ್ತವೆ. ಕೆಟ್ಟ ಕಪಿಗಳ ಜತೆಗೆ ಸೇರಿದ ಒಳ್ಳೆಯ ಕಪಿಗಳೂ ಕೆಟ್ಟುಹೋಗುತ್ತವೆ.

ರಾಜ ಮತ್ತು ಮಂತ್ರಿ ಕಥೆ : ಕೌಶಂಬೀಪುರ. ವಸುಪಾಲ ರಾಜ. ಭಾರತೀಭೂಷಣ ಮಂತ್ರಿ. ರಾಜ ತಾನೊಂದು ಕಾವ್ಯವನ್ನು ಬರೆದು ಮಂತ್ರಿಗೆ "ಇದು ಚೆಂದವಾಯಿತೆ ನೋಡೆಂ"ದು ಕೊಡುತ್ತಾನೆ. ಮಂತ್ರಿ ಪರಿಶೀಲಿಸಿ ನೋಡಿ "ಅವಜಿತೊಳು ಒಂದೆಡೆಯೊಳು ದೋಷವುಂಟು" ಎಂದು ದೋಷವನ್ನು ಎತ್ತಿ ತೋರಿಸಲು ರಾಜ ಮಂತ್ರಿಯನ್ನು ಶಿಕ್ಷಿಸಿ ಅವಮಾನಪಡಿಸುತ್ತಾನೆ.

ಹೀಗೆ ಯಮದಂಡನು ಏಳು ದಿನಗಳನ್ನು ದಿನವೂ ಒಂದೊಂದು ಕಥೆ ಹೇಳುತ್ತ ಕಳೆಯುತ್ತಾನೆ. ಕಳ್ಳನನ್ನು ಹಿಡಿತಂದು ಒಪ್ಪಿಸುವುದಿಲ್ಲ. ಎಂಟನೆಯ ದಿನ ಯಮದಂಡನನ್ನೇ ಹಿಡಿತರಲು ರಾಜ ಚರರಿಗೆ ಆಜ್ಞೆಮಾಡುತ್ತಾನೆ. ಆ ದಿನ ಅವನನ್ನು ನಾಗರಿಕರೆದುರು ಶಿಕ್ಷಿಸಬೇಕೆಂದು ರಾಜ ತುಂಬ ಉತ್ಸುಕನಾಗಿರುತ್ತಾನೆ. ಅದೇ ಸಮಯಕ್ಕೆ ಯಮದಂಡ ಬರುತ್ತಾನೆ. ಉಂಗುರ, ಹಾವುಗೆ, ಜನಿವಾರಗಳನ್ನು ಸರ್ವರಿಗೂ ತೋರಿಸುತ್ತಾನೆ. ರಾಜ, ಮಂತ್ರಿ ಮತ್ತು ಪುರೋಹಿತರೇ ಕಳ್ಳರೆಂದು ಬಯಲು ಮಾಡುತ್ತಾನೆ. ಆಗ ಪುರಜನರು ಆ ಮೂವರನ್ನೂ ಗಡೀಪಾರು ಮಾಡಿ ಅವರ ಮಕ್ಕಳಿಗೆ ಅವರವರ ಪದವಿಗಳನ್ನಿತ್ತು, ಯಮದಂಡನಿಗೆ ವಸ್ತ್ರಾಭರಣಗಳನ್ನು ಕೊಟ್ಟು ಗೌರವಿಸುತ್ತಾರೆ.

ಇದನ್ನೆಲ್ಲ ಕೇಳಿದ ಉದಿತೋದಯನಿಗೆ ಜ್ಞಾನೋದಯವಾಗುತ್ತದೆ. ಮಂತ್ರಿ ಹೇಳುವುದು ಸರಿಯೆನ್ನಿಸುತ್ತದೆ. ಕೆಟ್ಟ ಮಂತ್ರಿಯಿಂದ ರಾಜ ಕೆಡುತ್ತಾನೆ. ಒಳ್ಳೆಯ

ಮಂತ್ರಿಯಿಂದ ಉದ್ಧಾರವಾಗುತ್ತಾನೆ ಎಂಬ ಅರಿವಾಗುತ್ತದೆ. ಉದ್ಯಾನಕ್ಕೆ ಹೋಗುವುದು ಸರಿಯಲ್ಲವೆಂದು ತೀರ್ಮಾನಿಸುತ್ತಾನೆ. ಆದರೆ ರಾಣಿಯಿಲ್ಲದೆ ಇವನಿಗೆ ಬೇಸರ. ಸಮಯ ಸಾಗದು. ಮುಂದೇನು ಮಾಡುವುದೆಂದು ಮಂತ್ರಿಯನ್ನು ಕೇಳುತ್ತಾನೆ. ಆಗ ಚಂದ್ರಿಕಾವಿಹಾರ ಮಾಡಿಬರುವ ಸಲಹೆ ಮಾಡುತ್ತಾನೆ ಮಂತ್ರಿ. ಸರಿ, ಇಬ್ಬರೂ ಹೊರಡುತ್ತಾರೆ. ಪೌರ್ಣಮಿಯ ರಾತ್ರಿ. ನಗರದ ಮುಖ್ಯಬೀದಿಗಳಲ್ಲಿ ಸಂಚರಿಸುತ್ತಿರುವಾಗ, ನಗರದಲ್ಲೆಲ್ಲ ಜನರು ವಿರಹತಾಪದಿಂದ ಚಡಪಡಿಸುತ್ತಿರುತ್ತಾರೆ. ಎಲ್ಲಿ ನೋಡಿದರೂ ವಿರಹಬೇನೆ. ಪ್ರೀತಿಯಿಂದ ಬಂದು ಬಂದು ಚುಂಬಿಸಿ ರತಿಕೂಟ ಕ್ಕೆಳಸುತ್ತಿದ್ದ ತನ್ನ ನಲ್ಲೆ ಈಗಿಲ್ಲವೆಂದು ಒಬ್ಬ ಕೊರಗುತ್ತಿದ್ದರೆ ಮತ್ತೊಬ್ಬ ತನ್ನ ಮನದನ್ನೆಯ ಸರ್ವಾಂಗಗಳನ್ನೂ ನೆನೆನೆನೆದು ದುಃಖಿಸುತ್ತಿರುತ್ತಾನೆ. ಇನ್ನೊಬ್ಬ 'ಮಂಚದ ಮೇಲೆ ನಾ ಮಲಗಿರೆ ಮೋಹದಿ ಚಂಚಲನೇತ್ರೆ ತಾ ಬಂದು ವಂಚನೆಯಿಲ್ಲದೆ ಬಲಿದುಪರತಿಯೀವ ಅಂಚೆಗಮನೆ ಆಗಲಿದಳು'' ಎಂದು ಮರುಗುತ್ತಿರುತ್ತಾನೆ. ''ಮಾರನ ಕೈಯುರಗಿಣಿಯಂತೆ ರಾಜಿಪ ಅರಡಿಗುರುಳ ಮಾನಿನಿಯು ಸೇರಿ ಬಾಳುವ ಸುಖ ತಪ್ಪಿಸಿದರಿಗೆ ಘೋರ ದುಃಖವಾಗಲಿ'' ಎಂದು ಬೇರೊಬ್ಬ ಶಪಿಸುತ್ತಿರುತ್ತಾನೆ. ''ಅಂತಹ ರಂಭೆಯನ್ನಗಲಿ ನಾ ಬದುಕಲಾರೆ'' ಎಂದು ಮತ್ತೊಬ್ಬ ಹಂಬಲಿಸುತ್ತಿರುತ್ತಾನೆ. ಇತ್ತ ಉದ್ಯಾನದಲ್ಲಿ ಸ್ತ್ರೀಯರು ''ಒಂದು ಜೀವವ ಕೊಲ್ಲದಿರ್ಪ ಭೂಪೇಂದ್ರನು ಇಂದು ಮಾರನ ಕೈಯಿಂದ ಕೊಂದುಹಾಕಿಸಿದನೆಲ್ಲರ'' ಎಂದು ಹಲುಬುತ್ತಿರುತ್ತಾರೆ. ಇದನ್ನೆಲ್ಲ ನೋಡುತ್ತ ರಾಜ ಮತ್ತು ಮಂತ್ರಿ ಬರುತ್ತಿರುವಾಗ ತಮ್ಮ ಮುಂಭಾಗದಲ್ಲಿ ಒಬ್ಬ ಛಾಯಾಪುರುಷ ಹೋಗುತ್ತಿರುವುದನ್ನು ಕಾಣುತ್ತಾರೆ. ಅವನಾರೆಂದು ರಾಜನು ಕೇಳಲು ಮಂತ್ರಿಯು, ಅವನು ಸುವರ್ಣಖುರನೆಂಬ ಅಂಜನ ಚೋರನೆಂದೂ ಅವನು ಕಣ್ಣಿಗೆ ಅಂಜನ ಹಚ್ಚಿಕೊಂಡು ಬಹಳ ದಿನಗಳಿಂದಲೂ ಪಟ್ಟಣದಲ್ಲಿ ಕದಿಯುತ್ತಿರುವನೆಂದೂ ಹೇಳುತ್ತಾನೆ. ಅನಂತರ ಅವರು ಆ ಛಾಯೆ ಎತ್ತ ಹೋಗುವುದೋ ಎಂದು ಅದನ್ನೇ ಅನುಸರಿಸುತ್ತಾರೆ. ಅಷ್ಟರಲ್ಲಿ ಆ ಚೋರನು ಅರ್ಹದ್ದಾಸನೆಂಬ ವೈಶ್ಯನ ಮನೆಯ ಮುಂದಿನ ಆಲದಮರದ ನೆರಳಲ್ಲಿ ಅಡಗಿಕೊಳ್ಳುತ್ತಾನೆ.

ಅರ್ಹದ್ದಾಸನ ಕಥೆ : ಅವನೊಬ್ಬ ವ್ಯಾಪಾರಿ. ಜಿನಭಕ್ತ. ಸಮ್ಯಕ್ತ್ವ ಹೊಂದಿದ್ದವನು. ಉದಿತೋದಯ ರಾಜನ ಆಪ್ತನು. ಅವನಿಗೆ ಸತ್ಯಶ್ರೀ, ಗಂಧಶ್ರೀ ವಿಷ್ಣುಶ್ರೀ, ನಾಗಶ್ರೀ, ಪದ್ಮಲತೆ, ವಿದ್ಯುಲ್ಲತೆ, ಕನಕಶ್ರೀ, ಕುಂದಲತೆ ಎಂದು ಎಂಟು ಮಂದಿ ಮಡದಿಯರು ಅವರೆಲ್ಲರಿಗೂ ಸಮ್ಯಕ್ತ್ವ ಉಂಟಾಗಿರುತ್ತದೆ. ಅವರು ರತಿಯಂತೆ ರೂಪವತಿಯರೂ ಭಾರತಿಯಂತೆ ವಿದ್ಯಾಸಂಪನ್ನೆಯರೂ ಲಕ್ಷ್ಮಿಯಂತೆ ಸೌಭಾಗ್ಯವತಿಯರೂ ದ್ರೌಪದಿಯಂತೆ ವ್ರತಶೀಲರೂ ಸೀತೆಯಂತೆ ಶೀಲವತಿಯರೂ ಆಗಿರುತ್ತಾರೆ. ಉದಿತೋದಯನ ಆಜ್ಞೆಯಂತೆ ಅರ್ಹದ್ದಾಸನು ತನ್ನ ಪತ್ನಿಯರಿಗೂ

ಅಂದು ಉದ್ಯಾನಕ್ಕೆ ಹೋಗಲು ಹೇಳಿರುತ್ತಾನೆ. ಆದರೆ ಅವರು ಅಂದು ನಂದೀಶ್ವರ ನೋಂಪಿಯನ್ನು ಕೈಗೊಂಡಿದ್ದುದರಿಂದ ತಮ್ಮ ಪತಿಯೊಂದಿಗೆ ಮನೆಯ ಪ್ರಾಕಾರದ ಜಿನಮಂದಿರದಲ್ಲಿ ಜಾಗರವಿರಲು ನಿರ್ಧರಿಸಿರುತ್ತಾರೆ. ಆದ್ದರಿಂದ ಅಂದು ಉದ್ಯಾನಕ್ಕೆ ಹೋಗಲು ನಿರಾಕರಿಸುತ್ತಾರೆ. "ಅರಸಿಗಾಜಿ ವ್ರತ ಬಿಟ್ಟು ಪೋದಡೆ ಮುಂದೆ ನರಕ ತಪ್ಪದು" ಎಂದು ತಿಳಿದು ರಾಜಾಜ್ಞೆಗೆ ಹೆದರಬಾರದೆಂಬ ನಿರ್ಧಾರಕ್ಕೆ ಬಂದಿರುತ್ತಾರೆ. ಅರ್ಹದ್ದಾಸನು ಅವರ ನಿರ್ಧಾರವನ್ನು ಮೆಚ್ಚುತ್ತಾನೆ. ಅವರನ್ನು ಜಿನಾಲಯಕ್ಕೆ ಕರೆ ತಂದು ಅವರೊಂದಿಗೆ ಜಿನಪೂಜೆ, ಜಾಗರಣೆಯಲ್ಲಿ ನಿರತನಾಗುತ್ತಾನೆ. ಅದು ಮುಗಿದ ನಂತರ ಅವನು ತನ್ನ ಸತಿಯರಿಗೆ ಒಬ್ಬೊಬ್ಬರಿಗೂ ಸಮ್ಯಕ್ತ್ವ ಉಂಟಾದ ಬಗೆಯನ್ನು ಹೇಳಬೇಕೆಂದು ಕೇಳುತ್ತಾನೆ. ಆಗ ಅವರೆಲ್ಲರೂ ಒಕ್ಕೊರಲಿನಿಂದ "ನಮಗೆ ಸಮ್ಯಕ್ತ್ವವು ಜನಿಸಿದ ವಿವರವ ನಿಮಗೆ ಪೇಳುವೆವು ಅಂತ್ಯದೊಳು ನಿಮಗೆ ಸಮ್ಯಕ್ತ್ವವು ತಾ ಜನಿಸಿದ ಪರಿಯನು ನಮಗೊರೆ" ಎಂದು ಕೇಳಲು ಅರ್ಹದ್ದಾಸನು ತನಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ವಿವರಿಸುತ್ತಾನೆ :

ರೂಪ್ಯಖುರನ ಕಥೆ : ಉದಿತೋದಯನ ತಂದೆ ಪದ್ಮೋದಯ. ಅವನು ಸುರೂಪಿ, ಪಾಪಭೀತ, ಪರಹಿತಗುಣಚರಿತ, ದಾನಿ, ಹಾಗೂ ಜಿನಭಕ್ತನಾದಿರುತ್ತಾನೆ. ಮಂತ್ರಿ ಸಂಭಿನ್ನಮತಿ. ಅವನ ರಾಜ್ಯದಲ್ಲಿ ರೂಪ್ಯಖುರ ಎಂಬ ಚೋರನಿರುತ್ತಾನೆ. ಅವನು ಪಾಪಚರಿತನು. ಕಣ್ಣಿಗೆ ಅಂಜನ ಹಚ್ಚಿ ಊರಲ್ಲೆಲ್ಲ ವಸ್ತ್ರಾಭರಣಗಳನ್ನು ಕದ್ದು ವೇಶ್ಯೆಯರಿಗೆ ಕೊಟ್ಟು ಜೀವಿಸುತ್ತಿರುತ್ತಾನೆ. ಒಂದು ದಿನ ಅವನು ಜೂಜಾಡಿ ಸೋತು ಹಸಿವಿನಿಂದ ಬಳಲಿ ತನ್ನ ಮನೆಗೆ ಹಿಂದಿರುಗುತ್ತಿರುತ್ತಾನೆ. ಆಗ ರಾಜನ ಮನೆಯ ಬಳಿ ಹೋಗುವಾಗ ಅಡುಗೆಯ ವಾಸನೆ ಮೂಗಿಗೆ ತಾಗುತ್ತದೆ. "ಇಂತಪ್ಪ ಕಜ್ಜಾಯದ ಬಗೆಯನು ನಾನು ಪಿಂತೆ ಕಂಡವನಲ್ಲ. ಇದನ್ನು ಸಂತೋಷದಿಂದ ನಾ ಕಾಣ್ಬುದರಿದೆ" ಎಂದು ಕಣ್ಣಿಗೆ ಅಂಜನ ಹಚ್ಚಿ ಅದೃಶ್ಯದಿಂದ ಅರಮನೆಯನ್ನು ಹೊಕ್ಕು, ರಾಜನ ಊಟದ ಕೋಣೆಯನ್ನು ಸೇರುತ್ತಾನೆ. ಅಲ್ಲಿ ರಾಣಿಯರು ರಾಜನಿಗೆ ಬಗೆಬಗೆಯ ಭಕ್ಷ್ಯಗಳನ್ನು ಬಡಿಸುತ್ತಿರುತ್ತಾರೆ. ಆಗ ಇವನು ರಾಜನ ಪಕ್ಕದಲ್ಲಿ ಕುಳಿತು, ಅವರು ರಾಜನ ತಟ್ಟೆಗೆ ಬಡಿಸಿದ ಹಾಗೆಲ್ಲ ತನಗೆ ಬೇಕಾದಷ್ಟನ್ನು ತಿಂದು ತೃಪ್ತನಾಗಿ ಮನೆಗೆ ಹೋಗುತ್ತಾನೆ. ಊಟದ ರುಚಿ ಹತ್ತುತ್ತದೆ ಪ್ರತಿದಿನವೂ ರಾಜನ ಊಟದ ಸಮಯಕ್ಕೆ ಸರಿಯಾಗಿ ಬಂದು ಬಂದು ಊಟಮಾಡಿ ಹೋಗುತ್ತಿರುತ್ತಾನೆ. ಆರು ತಿಂಗಳ ಕಾಲ ಹೀಗೆ ಮಾಡುತ್ತಾನೆ. ಆದರೆ ರಾಜನು ಕೃಶನಾಗುತ್ತಾ ಬರುತ್ತಾನೆ. ಅದನ್ನು ಕಂಡ ಮಂತ್ರಿ ಅದಕ್ಕೆ ಕಾರಣವೇನೆಂದು ರಾಜನನ್ನು ಕೇಳುತ್ತಾನೆ. ರಾಜನು "ಏನೆಂದಪೆಯೆ ನಾಸುಂಬನಿತಶನವು ತಾನಿಲ್ಲ ಹರಿವಾಣದೊಳಗೆ ಮಾನಿನಿಯರು ಬಡಿಸಿದ ಅಶನದೊಳರ್ಧ ತಾನು ಮಾಯವಾಗುತಿದೆಕೋ" ಎನ್ನುತ್ತಾನೆ. ಬುದ್ಧಿವಂತನಾದ ಮಂತ್ರಿ, ಅದು ರೂಪ್ಯಖುರನೆಂಬ ಅಂಜನಚೋರನ ಕೆಲಸವೆಂದೇ ಊಹಿಸಿ, ಅ

ಪಾಪಿಯನ್ನು ಹಿಡಿಯುವುದಕ್ಕೊಂದು ಉಪಾಯ ಮಾಡುತ್ತಾನೆ. ಅರಸನ ಊಟದ ಕೋಣೆಯಲ್ಲಿ ಎಕ್ಕೆಯ ಮುಗುಳುಗಳನ್ನು ಹರಡಿ, ಇಪ್ಪರು ಜಟ್ಟಿಗಳನ್ನು ಮರೆಯಲ್ಲಿ ನಿಲ್ಲಿಸಿ, ಘಟದಲ್ಲಿ ಕೆಂಡವನ್ನಿಟ್ಟು ರಾಜನಿಗೆ ಊಟ ಒಡಿಸುವಂತೆ ಹೇಳುತ್ತಾನೆ. ಕಳ್ಳನು ಕೋಣೆಯೊಳಗೆ ಕಾಲಿಡುವಾಗ ಸದ್ದಾಗಲು ಕದಗಳನ್ನು ಮುಚ್ಚಿ ಘಟದ ಕೆಂಡಕೆ ಧೂಪ ಹಾಕಿಸುತ್ತಾನೆ. ಧೂಪಧೂಮದಿಂದಾಗಿ ಅಂಜನಚೋರನ ಕಣ್ಣೀರು ಉದುರಿ ಅಂಜನ ಕರಗುತ್ತದೆ. ಚೋರ ಗೋಚರನಾಗುತ್ತಾನೆ. ಕೂಡಲೇ ಅವನನ್ನು ಜಟ್ಟಿಗಳು ಹಿಡಿದು ಗುದ್ದಿ, ಕೈಕಾಲುಗಳನ್ನು ಕಟ್ಟಿ ಪೇಟೆಬೀದಿಗಳಲ್ಲಿ ಮೆರೆಸುತ್ತಾರೆ. ಪೇಟೆಯ ಜನರೆಲ್ಲ ಬಂದು ಬಂದು ನೋಡಿ ನೋಡಿ ನಗುತ್ತಾರೆ. ಅವರಲ್ಲಿ ಒಬ್ಬನು 'ವಿಪ್ರನ ವ್ಯಾಘ್ರ ತಿಂದ ತೆಜಿನಾಯ್ತು' ಎನ್ನಲು ಇನ್ನೊಬ್ಬನು ಆ ಕಥೆಯನ್ನು ಹೇಳೆಂದು ಪೀಡಿಸುತ್ತಾನೆ. ಅವನು ಆ ಕಥೆ ಹೇಳುತ್ತಾನೆ :

ಬ್ರಾಹ್ಮಣನನ್ನು ಹುಲಿ ತಿಂದ ಕಥೆ : ಒಂದು ಪಟ್ಟಣ. ಆ ಪಟ್ಟಣದ ರಾಜನಿಗೆ ಅನೇಕ ಮಂದಿ ಮಕ್ಕಳು. ಅವರಲ್ಲಿ ಸೌಂದರವತಿ ಎಂಬವಳು ಹೆಸರಿಗೆ ತಕ್ಕಂತೆ ಬಲು ಸುಂದರಿ. ಅವಳನ್ನು ಕಂಡ ಒಬ್ಬ ಬ್ರಾಹ್ಮಣ ಅವಳ ಚೆಂದಕ್ಕೆ ಮರುಳಾಗುತ್ತಾನೆ. ಅವಳನ್ನು ಕದ್ದೊಯ್ಯುವುದಕ್ಕೆ ಒಂದು ಉಪಾಯ ಮಾಡುತ್ತಾನೆ. ರಾಜನ ಬಳಿಗೆ ಹೋಗಿ, ತಾನು ಹಸ್ತಸಾಮುದ್ರಿಕಾ ಶಾಸ್ತ್ರವನ್ನು ಬಲ್ಲವನೆಂದು ಹೇಳಿಕೊಳ್ಳುತ್ತಾನೆ. ಆಗ ರಾಜ ತನ್ನ ಮಕ್ಕಳನ್ನೆಲ್ಲ ಕರೆಸಿ, ಅವರ ಭವಿಷ್ಯ ಹೇಳುವಂತೆ ಬ್ರಾಹ್ಮಣನನ್ನು ಕೇಳುತ್ತಾನೆ. ಸೌಂದರವತಿಯೊಬ್ಬಳನ್ನುಳಿದು ಬೇರೆಯವರಿಗೆಲ್ಲ "ಹರುಷದಿ ಇವರೆಲ್ಲ ಸುಖದೊಳು ಬಾಳ್ವರು ; ಕೊರತೆಯಿಲ್ಲ ಜಗದೊಳು" ಎಂದು ಹೇಳಿ, ಸೌಂದರವತಿಗೆ ಮಾತ್ರ "ಇವಳು ನೆರೆವ ಸಮಯದೊಳು ಇವಳು ಹುಟ್ಟಿದ ಮನೆ ಹಾಳಾಗಿ ಹೋಹುದು ; ಇವಳ ತಂದವರು ಕೆಡುವರು" ಎನ್ನುತ್ತಾನೆ ಆ ಮಾತಿಗೆ ರಾಜ ಹೆದರಿ ಅದಕ್ಕೆ ಶಾಂತಿಯೇನೆಂದು ಕೇಳಲು ಬ್ರಾಹ್ಮಣನು "ಈ ಊರ ಮುಂಗಡೆ ಪರಿವಾ ದೇವಗಂಗೆಯೊಳಮಾವಾಸೆಯೊಳ್ ಬಿಟ್ಟೊಡೆ ಆವ ದೋಷವು ನಿಮಗಿಲ್ಲ" ಎನ್ನುತ್ತಾನೆ. ಇವನ ಕಪಟವನ್ನರಿಯದ ರಾಜ ಸತ್ಯವೆಂದು ನಂಬಿ, ಮಗಳನ್ನು ಒಂದು ಪೆಟ್ಟಿಗೆಯಲ್ಲಿ ಇಟ್ಟು ನದಿಯಲ್ಲಿ ತೇಲಿಬಿಡುತ್ತಾನೆ. ಊರಿನಿಂದ ಎರಡು ಗಾವುದ ದೂರದಲ್ಲಿ ನದಿಯ ದಂಡೆಯಲ್ಲಿ ಬ್ರಾಹ್ಮಣನು ಕಾಯುತ್ತ ಕುಳಿತಿರುತ್ತಾನೆ. ಅದೇ ಸಮಯದಲ್ಲಿ ಒಬ್ಬ ರಾಜಪುತ್ರನು ಬೇಟೆಯಾಡಿ ಬಳಲಿ ಬಾಯಾರಿ ನೀರು ಕುಡಿಯಲು ನದಿಯ ಬಳಿಗೆ ಬರುತ್ತಾನೆ. ನದಿಯಲ್ಲಿ ತೇಲುತ್ತಿದ್ದ ಪೆಟ್ಟಿಗೆಯನ್ನು ಕಂಡು, ಅದನ್ನು ತೆರೆದು ನೋಡಿ ಅದರೊಳಗಿದ್ದ ಚೆಲುವೆಯನ್ನು ಕಂಡು ಸಂತೋಷಗೊಂಡು, ಅವಳ ಬದಲಿಗೆ ತಾನು ಬೇಟೆಯಾಡಿ ತಂದಿದ್ದ ಹುಲಿಯನ್ನು ಪೆಟ್ಟಿಗೆಯೊಳಗಿಟ್ಟು ಬಾಗಿಲು ಮುಚ್ಚಿ ಪುನಾ ನದಿಯಲ್ಲಿ ತೇಲಿಬಿಡುತ್ತಾನೆ. ಇತ್ತ ತೇಲಿಬರುತ್ತಿದ್ದ ಪೆಟ್ಟಿಗೆಯನ್ನು ಕಂಡು ಬ್ರಾಹ್ಮಣನು "ನನ್ನ ಉಪಾಯಕ್ಕೆ ಸರಿಯುಂಟೆ ಧರೆಯೊಳು, ನನ್ನ ಪುಣ್ಯಕೆ ಎಣೆದಾಣೆ"

ಎಂದು ಉಬ್ಬಿ ಆ ಪೆಟ್ಟಿಗೆಯನ್ನು ಮನೆಗೆ ಹೊತ್ತುಕೊಂಡು ಹೋಗಿ ಬಾಯಿ ತೆರೆಯು
ತ್ತಾನೆ. ಆದರಲ್ಲಿದ್ದ ಹುಲಿ ಕೂಡಲೇ ಅವನನ್ನು ಬಡಿದು ಸಾಯಿಸಿ ತಿಂದು ಬಿಡುತ್ತದೆ.
ಈ ಕಥೆಯನ್ನು ಹೇಳಿದ ಒಬ್ಬನು ಇವನಂತೆಯೇ ರೂಪ್ಯಖುರನ ಸ್ಥಿತಿಯೂ ಆಯಿತು
ಎನ್ನುತ್ತಾನೆ.

ರೂಪ್ಯಖುರನನ್ನು ಶೂಲಕ್ಕೇರಿಸುತ್ತಾರೆ. ಅವನೊಡನೆ ಮಾತನಾಡಿದವರನ್ನು
ಕತ್ತರಿಸಿಹಾಕುವಂತೆ ರಾಜ ಆಜ್ಞೆ ಮಾಡುತ್ತಾನೆ. ಇತ್ತ ಜಿನದತ್ತ ಜಿನಪೂಜೆಯನ್ನು
ಮುಗಿಸಿಕೊಂಡು ಅದೇ ಮಾರ್ಗವಾಗಿ ಬರುತ್ತಿರುತ್ತಾನೆ. ಇವನನ್ನು ಕಂಡ ರೂಪ್ಯ
ಖುರನು 'ಬಾಯಾರಿದೆ ನನಗೆ ಜಿನದತ್ತ, ಈಗಲು ತೋಯುವ ತಂದೀವುದು' ಎನ್ನಲು
ಜಿನದತ್ತ ರಾಜಾಜ್ಞೆಯನ್ನು ತಾನು ಮೀರುವುದಿಲ್ಲವೆನ್ನುತ್ತಾನೆ. ಆದರೂ ಚೋರ
ಅವನನ್ನು ವಿಧವಿಧವಾಗಿ ಬೇಡಲು ಜಿನದತ್ತನು ಅವನ ಗುರು ಅವನಿಗೆ ಬೋಧಿಸಿದ್ದ
ಒಂದು ಮಂತ್ರವಿದೆಯೆಂದೂ ಅವನು ನೀರು ತರುವ ವೇಳೆಗೆ ಅದು ಮರೆತು ಹೋಗ
ಬಹುದೆಂದೂ ಶಂಕಿಸಿ ಅದನ್ನು ರೂಪ್ಯಖುರನು ಪಠಿಸುತ್ತಿರುವಂತೆ ಹೇಳಿ ನೀರು ತರಲು
ಹೋಗುತ್ತಾನೆ. ಆ ಮಂತ್ರವನ್ನು ಪಠಿಸುತ್ತಲೇ ಸತ್ತು ಚೋರನು ಸಮಾಧಿಮರಣ
ಹೊಂದಿ ಸೌಧರ್ಮದಲ್ಲಿ ಹುಟ್ಟುತ್ತಾನೆ. ತಾನು ನೀರ ತರುವುದರೊಳಗೆ ಸತ್ತ ಚೋರ
ನನ್ನು ನೋಡಿ. ಅವನಿಗೆ ಸ್ವರ್ಗ ಲಭಿಸಿತೆಂದು ತಿಳಿದು ಅಂದಿನಿಂದ ಜಿನದತ್ತನು ಉಪ
ವಾಸವನ್ನು ಕೈಕೊಂಡು ಭಟ್ಟಾರಕರಿಂದ ಧರ್ಮೋಪದೇಶವನ್ನು ಕೇಳುತ್ತಿರುತ್ತಾನೆ.

ಅತ್ತ ಕಾವಲುಭಟರು ರಾಜನಲ್ಲಿಗೆ ಹೋಗಿ ನಡೆದ ಘಟನೆಯನ್ನು ವಿವರಿಸುತ್ತಾರೆ.
ರಾಜ ಕೋಪದಿಂದ 'ಜಿನದತ್ತ ಪರದನ ಮನೆಯ ಸೂರೆಮಾಡಿ ತಾ' ಎಂದು ಆಜ್ಞೆ ಮಾಡು
ತ್ತಾನೆ. ರಾಜಭಟರು ಕೂಡಲೇ ಹೊರಡುತ್ತಾರೆ. ಆಗ ಸುರಪನ ಪೀಠ ಅಲ್ಲಾಡು
ತ್ತದೆ. ಸುರಲೋಕವನ್ನು ಸೇರಿದ್ದ ಚೋರನು ವೃದ್ಧವೇಷದಲ್ಲಿ ಬಂದು ಜಿನದತ್ತನನ್ನು
ಶಿಕ್ಷಿಸಲು ಬಂದ ರಾಜಭಟರನ್ನು ಸದೆಬಡಿದು ಓಡಿಸುತ್ತಾನೆ. ಆಗ ರಾಜನೇ ಚತುರಂಗ
ಸೇನೆಯೊಂದಿಗೆ ಯುದ್ಧಕ್ಕೆ ಬರಲು ವೃದ್ಧನು ಅವನ ಸೈನ್ಯವನ್ನೆಲ್ಲ ಮೂರ್ಛೆ ಕೆಡಹಿ
ರಾಜನನ್ನು ಕೊಲ್ಲುವೆನೆಂದು ಬೆನ್ನಟ್ಟುತ್ತಾನೆ. ಜಿನದತ್ತಶೆಟ್ಟಿಯ ಮೊರೆಹೊಕ್ಕರೆ ಮಾತ್ರ
ಬಿಡುವುದಾಗಿ ಮೂದಲಿಸಲು ರಾಜನು ಹಾಗೆಯೇ ಮಾಡಿ ಅವನ ಪಾದಕ್ಕೆರಗುತ್ತಾನೆ.
ಕೂಡಲೇ ಚೋರದೇವನು ತನ್ನ ನಿಜರೂಪ ತಾಳಿ ಮೊದಲು ಜಿನದತ್ತನಿಗೆ ನಮಸ್ಕರಿಸಿ
ಅನಂತರ ಜಿನಪತಿಗೆ ನಮಸ್ಕರಿಸುತ್ತಾನೆ. ಅದನ್ನು ಕಂಡ ರಾಜನು "ಅರುಹಗೊಂದಿಸದೆ
ಆಚಾರ್ಯರ್ಗೆ ನಮಿಸದೆ ಪರದಗೆರಗುವರೆ ಮುಂದೆ ಮರುಳುಗಳಲ್ಲವೆ ಸ್ವರ್ಗದವರು"
ಎಂದು ಚೋರದೇವನನ್ನು ಹಳಿಯುತ್ತಾನೆ. ಅದಕ್ಕೆ ಚೋರದೇವನು "ನಿನ್ನೊಂದಿಗೆ
ಊಟಮಾಡಿ ಶೂಲದಲ್ಲಿ ಬಿದ್ದು ನರಳುತ್ತ ನರಕ ಸೇರುವವನಿದ್ದೆ. ಆಗ ನನಗೆ
ಮಂತ್ರೋಪದೇಶ ಮಾಡಿ ಸ್ವರ್ಗ ಸೇರಿಸಿದವನು ಜಿನದತ್ತ; ಇವನೇ ನನ್ನ ಗುರು;
ಆದ್ದರಿಂದ ಇವನಿಗೆ ಮೊದಲು ನಮಸ್ಕರಿಸಿದೆ" ಎನ್ನುತ್ತಾನೆ. ಆಗ ರಾಜನಿಗೆ ಆಶ್ಚರ್ಯ

ವಾಗುತ್ತದೆ ; ವೈರಾಗ್ಯ ಮೂಡುತ್ತದೆ. ಕೂಡಲೇ ತನ್ನ ಮಗನಿಗೆ ಪಟ್ಟಗಟ್ಟಿ ಅನಂತರ ತನ್ನ ಉಳಿದ ಮಕ್ಕಳು, ಹೆಂಡಂದಿರು, ಮಂತ್ರಿ ಮತ್ತು ಜನಸ್ತೋಮದೊಂದಿಗೆ ದೀಕ್ಷೆ ಪಡೆದು ತಪಸ್ಸು ಮಾಡಿ ಸ್ವರ್ಗ ಸೇರುತ್ತಾನೆ.

ಇದನ್ನೆಲ್ಲ ಕಂಡು ತನಗೆ ಸಮ್ಯಕ್ತ್ವ ಉಂಟಾದುದಾಗಿ ಅರ್ಹದ್ದಾಸ ತನ್ನ ಮಡದಿಯರಿಗೆ ಹೇಳುತ್ತಾನೆ. ಎಲ್ಲರೂ ಒಪ್ಪುತ್ತಾರೆ. ಆದರೆ ಕಿರಿಯವಳಾದ ಕುಂದಲತೆ ಮಾತ್ರ ಒಪ್ಪುವುದಿಲ್ಲ. ''ಜಿನುಗುಪಾತಿಗೆ ನಾನು ಇಚ್ಛಾಪೀಯೆಂಬೆನೆ ತನುಮನವಚನ ಶುದ್ಧಿಯೊಳು ?'' ಎನ್ನುತ್ತಾಳೆ. ಕುಂದಲತೆ ಹೀಗೆ ಹೇಳಿದುದನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಉದಿತೋದಯ ರಾಜ ಮತ್ತು ಮಂತ್ರಿ ಸುಬುದ್ಧಿ ''ಹೊತ್ತು ಹುಟ್ಟಿದ ಮೇಲೆಯಾ ತೊತ್ತ ಹಿಡಿತಂದು ಕತ್ತೆಯ ಮೇಲಿಟ್ಟು ಮೆಜೆಸಿ ತೆಱತ್ತಿಗೆ ತೊತ್ತು ಮಾಡಬೇಕು'' ಎಂದುಕೊಳ್ಳುತ್ತಾರೆ. ಅಲ್ಲಿಯೇ ಮರೆಯಲ್ಲಿದ್ದು ನೋಡುತ್ತಿದ್ದ ಸುವರ್ಣಖುರನೆಂಬ ಅಂಜನಚೋರನು ತನ್ನೊಳಗೆ ತಾನೇ ನಗುತ್ತಿರುತ್ತಾನೆ.

ಅನಂತರ ಅರ್ಹದ್ದಾಸನು ತನ್ನ ಹಿರಿಯ ಹೆಂಡತಿ ನಾಗಶ್ರೀಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ಹೇಳಬೇಕೆಂದು ಅವಳನ್ನು ಕೇಳುತ್ತಾನೆ. ಅವಳು ಹೀಗೆ ಹೇಳುತ್ತಾಳೆ :

ಮುಂಡಿಕೆಯ ಕಥೆ : ಕಾಶ್ಮೀರ ದೇಶದಲ್ಲಿ ವಾರಣಾಸಿ ಎಂಬುದು ಪಟ್ಟಣ. ಅದರ ರಾಜ ಜಿತಶತ್ರು, ರಾಣಿ ಕಾಂಚನಚಿತ್ರೆ. ಅವರ ಮಗಳು ಮುಂಡಿಕೆ. ಅವಳು ತನ್ನ ಹಿಂದಿನ ಜನ್ಮದ ಪಾಪದ ಫಲದಿಂದಾಗಿ ಮಣ್ಣು ತಿನ್ನುತ್ತ ಕುರೂಪೆಯಾಗಿರುತ್ತಾಳೆ. ಅದನ್ನು ಕಂಡ ರಾಜನು ಅವಳನ್ನು ಸಮುದ್ರದಾಚೆ ಇಡುತ್ತಾನೆ. ಅವಳು ಬೆಳೆದ ಹಾಗೆಲ್ಲ ಅವಳ ರೋಗ ಹೆಚ್ಚಾಗಿ ದಿನವೂ ಕೊರಗುತ್ತಿರುತ್ತಾಳೆ. ಹೀಗಿರಲು ಅವಳು ಒಮ್ಮೆ ಕಂತಿಕೆಯರಿಂದ ತನ್ನ ಪಾಪ ಪರಿಹಾರಕ್ಕಾಗಿ ಒಂದು ವ್ರತವನ್ನು ಬೇಡುತ್ತಾಳೆ. ಆಗ ಕಂತಿಕೆ :

> ಹಿಂದಕ್ಕೆ ತಿಂದುದು ಹೋಗಲಿ ನೀನಿನ್ನು
> ಮುಂದಕ್ಕೆ ಮೃತ್ತಿಕೆಯನಿಸ
> ಇಂದಿಗು ಮೆಲ್ಲದಿರು

ಎಂದು ವ್ರತವನ್ನು ನೀಡಲು ಅವಳು ಕೈಕೊಳ್ಳುತ್ತಾಳೆ. ಅದರಿಂದಾಗಿ ಅವಳ ಕಾಯಿಲೆ ಗುಣವಾಗಿ, ಜವ್ವನವೇರಿ ನೋಡುವವರ ಕಣ್ಣಿಗೆ ಇಂಗಡಲಣುಗೆಯಂತಾಗುತ್ತಾಳೆ. ಹಾಗಾದ ಮಗಳನ್ನು ಕಂಡ ತಂದೆ ಅವಳನ್ನು ಮನೆಗೆ ಕರೆದುಕೊಂಡು ಹೋಗಿ, ಸರ್ವಾಭರಣಗಳನ್ನಿತ್ತು, ಅವಳಿಗೆ ಸ್ವಯಂವರವನ್ನೇರ್ಪಡಿಸುತ್ತಾನೆ. ಅದನ್ನು ತಿಳಿದ ಭಗದತ್ತ ಎಂಬ ರಾಜನು ತನಗೆ ಆ ಕನ್ನೆಯನ್ನು ಮದುವೆ ಮಾಡಿಕೊಡುವಂತೆ ಕೇಳುತ್ತಾನೆ. ಆದರೆ ಮುಂಡಿಕೆಯ ತಂದೆ ಒಪ್ಪುವುದಿಲ್ಲ, ''ವರಪುತ್ರಿಯನು ಸ್ವಯಂ

ತರದೊಳಲ್ಲದೆ ನಾವು ಬರಿದೆ ಕೊಡುವವರಲ್ಲ'' ಎನ್ನುತ್ತಾನೆ. ಭಗದತ್ತ ಕೋಪ ಗೊಂಡು ರಾಜನ ಮೇಲೆ ದಂಡೆತ್ತಿ ಬರುತ್ತಾನೆ. ಘೋರಯುದ್ಧ ನಡೆಯುತ್ತದೆ. ತಂದೆಗೆ ಸೋಲುಂಟಾಗುವುದೆಂದು ತಿಳಿದ ಮುಂಡಿಕೆ, ತನ್ನಿಂದ ಆ ಗಂಡಾಂತರ ಉಂಟಾ ಯಿತೆಂದು ಬಗೆದು, ಆ ಉಪಸರ್ಗ ಪರಿಹರವಾಗುವವರೆಗೆ ತಾನು ಅನ್ನಾಹಾರಗಳನ್ನು ತೊರೆದು ಊರ ಮುಂದಿನ ಮಡುವಿನಲ್ಲಿ ತಪಸ್ಸಿಗೆ ಕುಳಿತುಕೊಳ್ಳುತ್ತಾಳೆ. ಕೂಡಲೇ ಊರಿನ ದೇವತೆಗಳೆಲ್ಲ ಸೇರಿ ಅಲ್ಲಿಯೇ ಅವಳಿಗೆ ಹರಿಪೀಠವನ್ನು ನಿರ್ಮಿಸಿ ಪೂಜಿಸು ತ್ತಾರೆ. ಭಗದತ್ತನನ್ನು ಸದೆಬಡಿಯುತ್ತಾರೆ. ಭಗದತ್ತ ಸೋತು ಮುಂಡಿಕೆಯ ಕಾಲಿ ಗೆರಗುತ್ತಾನೆ. ಅವನನ್ನು ರಾಜ ಜಿತಶತ್ರು ಕ್ಷಮಿಸುತ್ತಾನೆ. ದೇವತೆಗಳ ಅನುಗ್ರಹ ದಿಂದ ಸತ್ತುಬಿದ್ದಿದ್ದ ಸೈನ್ಯ ಎಚ್ಚರುತ್ತದೆ. ಪುರಜನರಿಗೆಲ್ಲ ಆಶ್ಚರ್ಯವಾಗುತ್ತದೆ. ಎಲ್ಲರೂ ಮುಂಡಿಕೆಯನ್ನು ಕೊಂಡಾಡುತ್ತಾರೆ. ಜಿತಶತ್ರು ತಾನು ಶ್ರುತಸಾಗರನೆಂಬ ಯತಿಯಿಂದ ದೀಕ್ಷೆ ಪಡೆಯುತ್ತಾನೆ. ಇನ್ನೂ ಸಾವಿರಾರು ಜನರಿಗೆ ಸಮ್ಯಕ್ತ್ವ ಉಂಟಾ ಗುತ್ತದೆ. ಅದನ್ನೆಲ್ಲ ಕಂಡು ತನಗೆ ಸಮ್ಯಕ್ತ್ವ ಉಂಟಾಯಿತೆಂದು ನಾಗಶ್ರೀ ಹೇಳುತ್ತಾಳೆ. ಕುಂದಲತೆಯನ್ನುಳಿದು ಬೇರೆಲ್ಲರೂ ಮೆಚ್ಚುತ್ತಾರೆ. ಅನಂತರ ಅರ್ಹದ್ದಾಸನು ಪದ್ಮಶ್ರೀಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ತಿಳಿಸಬೇಕೆಂದು ಅವಳನ್ನು ಕೇಳುತ್ತಾನೆ. ಅವಳು ಹೀಗೆ ಹೇಳುತ್ತಾಳೆ:

ಸೋಮೆಯ ಕಥೆ: ಕುರುಜಾಂಗಣ ನಾಡಿನಲ್ಲಿ ಹಸ್ತಿನಾಪುರ. ಅದರ ರಾಜ ಭೂ ಭೋಗ. ಭೋಗಾವತಿ ರಾಣಿ. ಗುಣಪಾಲ ಆ ಊರಿನ ಒಬ್ಬ ವ್ಯಾಪಾರಿ. ಅವನ ಹೆಂಡತಿ ಗುಣವತಿ. ಗುಣಪಾಲ ರಾಜನ ಹಿತೈಷಿ. ಅದೇ ಊರಿನಲ್ಲಿ ಸೋಮದತ್ತ ಎಂಬ ಬಡ ಬ್ರಾಹ್ಮಣನಿರುತ್ತಾನೆ. ಅವನ ಹೆಂಡತಿ ಸೋಮಿಲೆ. ಅವರ ಮಗಳು ಸೋಮೆ; ರತಿಸಮರೂಪೆ. ಮಾರನರಗಿಣಿಯಂತೆ ಅವಳು ಬೆಳೆದು ಯೌವನಸ್ಥೆಯಾಗುತ್ತಾಳೆ. ಹೀಗಿರಲು ಸೋಮಿಲೆ ಇದ್ದಕ್ಕಿದ್ದಂತೆ ಸಾಯುತ್ತಾಳೆ. ಇದರಿಂದ ಕೊರಗುತ್ತಿದ್ದ ಬ್ರಾಹ್ಮಣನಿಗೆ ಜಿನಮುನಿ ಧರ್ಮೋಪದೇಶಮಾಡಿ ಅವನ ದುಃಖವನ್ನು ಕಡಿಮೆ ಮಾಡುತ್ತಾನೆ. ದಿನದಿನಕ್ಕೆ ಅವನ ನೇಮ ನಿಷ್ಠೆಗಳು ಹೆಚ್ಚುತ್ತವೆ. ಹೀಗಿದ್ದ ಬ್ರಾಹ್ಮಣನನ್ನು ಕಂಡ ಗುಣಪಾಲನು "ನೀನು ಮಾಡುವ ನಿಷ್ಠೆ ನೇಮಕ್ಕೆ ಮೆಚ್ಚಿದೆ; ನೀನುಂಬನಿತ ಪೊನ್ನನೀವೆ, ಸಾನುರಾಗದೊಳಿರು'' ಎನ್ನುತ್ತಾನೆ. ಆದರೆ ಬ್ರಾಹ್ಮಣ ಅದಕ್ಕೊಪ್ಪದೆ ತಾನು ಜಿನದೀಕ್ಷೆ ಧರಿಸುವುದಾಗಿ ಹೇಳಿ "ನನ್ನ ಕುಮಾರಿ ಸೋಮೆಯ ನಿನ್ನ ಗೃಹಕೊಯ್ದು ಚೆನ್ನಾಗಿ ರಕ್ಷಿಸಿ ಬಳಿಕ, ನಿನ್ನ ಮನಕೆ ಬಂದವಗೆ ಮದುವೆಯ ಮಾಡು, ನನ್ನ ದೀಕ್ಷೆಗೆ ಕಳುಹು'' ಎನ್ನುತ್ತಾನೆ. ಗುಣಪಾಲ ಅದಕ್ಕೊಪ್ಪಿ ಸೋಮೆ ಯನ್ನು ಕರೆದೊಯ್ಯುತ್ತಾನೆ. ಸೋಮಶರ್ಮ ದೀಕ್ಷೆಗೊಳ್ಳುತ್ತಾನೆ.

ಒಂದು ದಿನ ಚೆಲುವೆ ಸೋಮೆ ಬಸದಿಗೆ ಹೋಗುತ್ತಿರುವಾಗ ರುದ್ರದತ್ತನೆಂಬ ಬ್ರಾಹ್ಮಣ ಅವಳನ್ನು ಕಂಡು ಮೋಹಗೊಳ್ಳುತ್ತಾನೆ. ಆದರೆ ಇವನು ದುರ್ಜನನೂ

ವಿಷಯಲಂಪಟನೂ ಜಾರಿಯೂ ಜೂಜುಗಾರನೂ ಆಗಿರುತ್ತಾನೆ. ಇಂತಹವನು ಸೋಮೆಯನ್ನು ಬಯಸಿ ಅವರಿವರನ್ನು ವಿಚಾರಿಸಲು 'ಉತ್ತಮ ಶೀಲಸಂಪನ್ನಗಲ್ಲದೆ ಕೊಡನು' ಎಂದು ತಿಳಿಯುತ್ತದೆ. ಆದರೆ 'ಸೋಮೆಯ ಮದುವೆಯಾಗದೊಡೆ ಪುತ್ರವು ವಿನಾಸೆಯಲ್ಲ' ಎಂದು ಶಪಥಮಾಡಿ ದೂರದೇಶಕ್ಕೆ ಹೋಗಿ, ಜಿನಮಾರ್ಗ ವನ್ನೆಲ್ಲ ತಿಳಿದು, ದೇವತಾರಾಧನೆ ಮುಂತಾದುವನ್ನು ಕಲಿತು ಬ್ರಹ್ಮಚರ್ಯವನ್ನು ಪಾಲಿಸುತ್ತ ಇದ್ದು ಅನಂತರ ಗುಣಪಾಲಶೆಟ್ಟಿ ಕಟ್ಟಿಸಿದ್ದ ಜಿನಾಲಯಕ್ಕೆ ಬರುತ್ತಾನೆ. ಜಿನನಿಗೆ ನಮಸ್ಕರಿಸಿ ಮುನಿಗೆ ಸಾಷ್ಟಾಂಗವೆರಗುತ್ತಾನೆ. ಗುಣಪಾಲನು ಅವನನ್ನು 'ನೀನಾರು' ಎಂದು ಕೇಳಲು ಅವನು ತನ್ನ ಹೆಸರು ರುದ್ರದತ್ತನೆಂದೂ ತಾನು ಅದೇ ಊರಿನ ಸೋಮಶರ್ಮ ಗಾಂಧಾರಿಯರ ಮಗನೆಂದೂ ಚಿಕ್ಕಂದಿನಲ್ಲಿಯೇ ತನ್ನ ತಂದೆ ತಾಯಿಯರು ತೀರಿಕೊಂಡದ್ದರಿಂದ ತಾನು ವೈರಾಗ್ಯ ತಾಳಿ ಹೋಗಿ ವಾರಣಾಸಿಯ ಜಿನಚಂದ್ರಭಟ್ಟಾರಕರಿಂದ ದೀಕ್ಷೆ ಪಡೆದು, ಬ್ರಹ್ಮಚಾರಿಯಾಗಿ, ಪಾಪ ಪರಿಹರಕ್ಕಾಗಿ ಒಂಟಿಯಾಗಿ ತೀರ್ಥಯಾತ್ರೆ ಮಾಡುತ್ತಿರುವುದಾಗಿಯೂ ಈಗ ಶೆಟ್ಟಿಯನ್ನು ಕಂಡು ಧನ್ಯನಾದುದಾಗಿಯೂ ಹೇಳುತ್ತಾನೆ. ಅವನನ್ನು ನೋಡಿದ ಗುಣಪಾಲನಿಗೆ ರುದ್ರ ದತ್ತನು ಮಹಾಯೋಗ್ಯನೆನ್ನಿಸಿ, ಅವನಿಗೆ ಸೋಮೆಯನ್ನು ಕೊಟ್ಟು ಮದುವೆ ಮಾಡ ಬೇಕೆಂದು ನಿಶ್ಚಯಿಸಿ ತನ್ನ ಇಚ್ಛೆಯನ್ನು ರುದ್ರದತ್ತನಿಗೆ ತಿಳಿಸುತ್ತಾನೆ. ಆದರೆ ರುದ್ರದತ್ತ 'ನಿನ್ನ ಹೆಣ್ಣನು ನಾನು ಒಲ್ಲೆ' ಎಂದರೂ ಅವನನ್ನು ಒಪ್ಪಿಸಿ ಮದುವೆ ಮಾಡುತ್ತಾನೆ. ಮದುವೆ ಆಗಿ ತನ್ನ ಶಪಥ ನೆರವೇರಿದ ಮೇಲೆ ಯತಿವೇಷವನ್ನು ತೊರೆದು, ಕೈಗೆ ಕಟ್ಟಿದ ಕಂಕಣಸಹಿತವಾಗಿಯೇ ಹೋಗಿ ತನ್ನ ಸ್ನೇಹಿತರಿಗೆ ತಾನು ಒಂದೆ ಆಡಿದಂತೆಯೇ ಸೋಮೆಯನ್ನು ಮದುವೆಯಾದುದಾಗಿ ಹೇಳುತ್ತಾನೆ. ತನ್ನ ಹಿಂದಿನ ಸೂಳೆಮನೆಗೆ ಹೋಗುತ್ತಾನೆ ಇದನ್ನೆಲ್ಲ ಕಂಡು ಕೇಳಿದ ಗುಣಪಾಲ ಚಿಂತೆ ಗೀಡಾಗುತ್ತಾನೆ. "ಉತ್ತಮನಿಗೆ ಕೊಟ್ಟು ಕಣ್ಣಲಿ ನೋಡದೆ ಮತ್ತು ಕಳ್ಳಗೆ ಕೊಟ್ಟು ಸುತೆಯ ಚಿತ್ತವಿಕಲನಾದೆನು" ಎಂದು ಮರುಗುತ್ತಾನೆ. ಇನ್ನಾದರೂ ಸನ್ಮಾರ್ಗಕ್ಕೆ ಬಾರೆಂದು ರುದ್ರದತ್ತನಿಗೆ ಬುದ್ಧಿ ಹೇಳಿದರೂ ಪ್ರಯೋಜನವಾಗುವುದಿಲ್ಲ. ಸುಂದರಿ, ಸೊಬಗುಗಾತಿ, ವಿಲಾಸವತಿ, ಸದ್ಗುಣಮಣಿಯಾದ ಸೋಮೆಯನ್ನು ಆ ಜಾರ ಬಿಟ್ಟು ಬೇರೊಬ್ಬ ಸೂಳೆಯೊಡನಿರತೊಡಗುತ್ತಾನೆ ಆಗ ಚಿಂತೆಗೊಳಗಾಗಿದ್ದ ಗುಣಪಾಲ ನನ್ನು ಸೋಮೆಯೇ ಸಮಾಧಾನಪಡಿಸಿ, ತಾನು ತನ್ನ ಜನ್ಮವಿಡೀ ಬ್ರಹ್ಮಚರ್ಯದಿಂದಿ ರಲು ನಿಶ್ಚಯಿಸುತ್ತಾಳೆ. ಗುಣಪಾಲ ಅವಳ ನಿರ್ಧರವನ್ನು ಮೆಚ್ಚಿ "ಚಂದ್ರವದನೆ ನೀನು ಚಿಂತೆಯಿಲ್ಲದೆ ಮನಬಂದ ತೆರದಿ ಧರ್ಮಮಾಡಿ ಮುಂದಣ ಭವಕೆ ಸದ್ಗತಿಯನ್ನು ಸಾಧಿಸು" ಎಂದು ಹೇಳಿ ಲಕ್ಷ ಹೊನ್ನನ್ನು ಅವಳಿಗೆ ಕೊಡುತ್ತಾನೆ. ಸೋಮೆ ಆ ಹೊನ್ನಿನಿಂದ ಜಿನಚೈತ್ಯಗೃಹಗಳನ್ನು ಮಾಡಿಸಿ ಜಿನಬಿಂಬಗಳನ್ನು ಪ್ರತಿಷ್ಠಾಪಿಸಿ ಸರ್ವರಿಗೂ ಔತಣವನ್ನೇರ್ಪಡಿಸುತ್ತಾಳೆ. ರುದ್ರದತ್ತನ ಸೂಳೆ ಕಾಮಲತೆ ಮತ್ತು

ಅವಳ ತಾಯಿ ವಸುಮಿತ್ರೆ ಸಹ ಈ ಪಟ್ಟಣಕ್ಕೆ ಬಂದಿರುತ್ತಾರೆ. ಸೋಮೆಯ ರೂಪ ಲಾವಣ್ಯ ಗುಣ ಅವಳ ಸತ್ಕಾರವನ್ನು ಕಂಡು ವಸುಮಿತ್ರೆ ಬೆರಗಾಗುತ್ತಾಳೆ. ಮತ್ತೀದಾದರೂ ರುದ್ರದತ್ತ ಸೋಮೆಯನ್ನು ನೋಡಿದನಾದರೆ ಪುನಃ ತನ್ನ ಮನೆಗೆ ಬರುವುದಿಲ್ಲವೆಂದು ಯೋಚಿಸಿದ ಅವಳು ಎಂಟು ದಿನಗಳೊಳಗಾಗಿ ಸೋಮೆಯನ್ನು ಕೊಲ್ಲುವುದಾಗಿ ನಿಶ್ಚಯಿಸುತ್ತಾಳೆ. ಅದಕ್ಕಾಗಿ ತಾಯಿ ಮಗಳಿಬ್ಬರೂ ಸೋಮೆಯೊಂದಿಗೆ ಕಪಟ ಸ್ನೇಹ ಬೆಳೆಸುತ್ತಾರೆ. ದೇವರ ಪೂಜೆಗೆಂದು ದಿನವೂ ಹೂಮಾಲೆಗಳನ್ನು ತಂದುಕೊಡುತ್ತ ಆ ನೆವದಲ್ಲಿ ಬಾದು ಉಂಡು ಹೋಗತೊಡಗುತ್ತಾರೆ. ಒಂದು ದಿನ ಒಂದು ಪೆಟ್ಟಿಗೆಯಲ್ಲಿ ಸರ್ಪವೊಂದನ್ನು ತುಂಬಿ ಹೂಮಾಲೆ ಎಂದು ಹೇಳಿ ಕೊಡುತ್ತಾಳೆ. ಸೋಮೆ ಕರಡಿಗೆಯೊಳಗಿದ್ದ ಹಾವನ್ನು ತೆಗೆದು ಜಿನನಿಗೆ ಸೂಡಲು ಹೋದಾಗ ಹಾವೇ ಹೂವಾಗುತ್ತದೆ. ಪೂಜೆ ಮುಗಿದ ನಂತರ ಸೋಮೆಯು ವಸುಮಿತ್ರೆ ಮತ್ತು ಕಾಮಲತೆಯರನ್ನು ತನ್ನ ಮನೆಗೆ ಕರೆದೊಯ್ದು ಉಣಬಡಿಸಿ, ಶೇಷೆಗಳನ್ನಿತ್ತು ಮುಡಿಯಲು ಹೂಮಾಲೆಯನ್ನು ಕೊಡುತ್ತಾಳೆ. ಆಗ ಕಾಮಲತೆಯ ಕೈಯ ಹೂವೇ ಹಾವಾಗಿ ಅವಳನ್ನು ಕಡಿಯಲು ಕಾಮಲತೆ ಸಾಯುತ್ತಾಳೆ. ವಸುಮಿತ್ರೆ ಮಗಳ ಹೆಣವನ್ನು ರಾಜನೆಡೆಗೆ ತೆಗೆದುಕೊಂಡು ಹೋಗಿ 'ಸೋಮೆಯು ಎನ್ನ ಸುತೆಯ ಕೊಂದಳು' ಎಂದು ದೂರಿಡುತ್ತಾಳೆ. ರಾಜನು ಸೋಮೆಯನ್ನು ಕರೆಸಿ "ನೀನೇಕೆ ಅವಳನ್ನು ಕೊಂದೆ?" ಎಂದು ಗದರಿಸಲು, ಸೋಮೆ ನಿಜಸಂಗತಿಯನ್ನು ತಿಳಿಸುತ್ತಾಳೆ. ಆದರೆ ರಾಜ ಅವಳ ಮಾತನ್ನು ನಂಬದೆ "ಹಸನಾದ ಕುಸುಮದ ದಂಡೆ ಕಾಳೋರಗ ಪಸುಘೆಯೊಳಾಗುವುದುಂಟೆ?" ಎಂದು ಹಾಸ್ಯಮಾಡಿ "ಈ ತೊತ್ತನು ಕತ್ತೆಯ ಮೇಲಿಟ್ಟು ಸುತ್ತು ಮೆರೆಸಿ ಪೇಟೆಯೊಳಗೆ ಕತ್ತ ಮುರಿದುಹಾಕಿ" ಎಂದು ಭಟರಿಗೆ ಆಜ್ಞೆ ಮಾಡುತ್ತಾನೆ. ಆದರೆ ಮಂತ್ರಿ ಬುದ್ಧಿವಂತ. ಅವನು ರಾಜನಂತೆ ದುಡುಕುವುದಿಲ್ಲ ಪುನಃ ಒಂದು ಹಾವನ್ನು ತರಿಸಿ ಸೋಮೆಯಿಂದ ಹಿಡಿಸುವಂತೆ ಸಲಹೆ ಮಾಡುತ್ತಾನೆ. ರಾಜನು ಹಾಗೆ ಮಾಡಿಸಲು ಹಾವು ಹೂಮಾಲೆಯಾಗುತ್ತದೆ. ಅನಂತರ ಸೋಮೆ ಹಿಡಿದಿದ್ದ ಹೂಮಾಲೆಯನ್ನು ಕಾಮಲತೆಯ ಶವದ ಮೇಲೆ ಇಡಲು ಅದು ಹಾವಾಗಿ ಶವವನ್ನೇ ಕಡಿಯತೊಡಗುತ್ತದೆ. ಎಲ್ಲರಿಗೂ ಆಶ್ಚರಿಯವಾಗುತ್ತದೆ ಸೋಮೆ ನಿರ್ದೋಷಿಯೆಂದು ತೀರ್ಮಾನವಾಗುತ್ತದೆ. ರಾಜನು ಸೋಮೆಯನ್ನು ಕೊಂಡಾಡಿ, ಸಿಂಹಾಸನದ ಮೇಲೆ ಕೂರಿಸಿ ವಸ್ತ್ರಾಭರಣಗಳನ್ನಿತ್ತು ಸನ್ಮಾನಿಸುತ್ತಾನೆ. ದೇವತೆಗಳು ಹೂಮಳೆಗರೆಯುತ್ತಾರೆ, ಪಂಚಾಶ್ಚರ್ಯವಾಗುತ್ತದೆ. ಸೋಮೆಯ ಪಾದ ಕಾಮಲತೆಯ ಶವಕ್ಕೆ ಸೋಂಕಲು ಜೀವತುಂಬಿ ಅವಳು ಎದ್ದು ಕುಳಿತುಕೊಳ್ಳುತ್ತಾಳೆ. ಸೋಮೆಯ ಕಾಲಿಗೆರಗಿ ಅವಳು ಕ್ಷಮೆ ಬೇಡುತ್ತಾಳೆ. ಇದನ್ನು ಕಂಡು ವೈರಾಗ್ಯ ಮೂಡಿ ರಾಜ, ಗುಣಪಾಲಶೆಟ್ಟಿ, ಅರಸುಮಕ್ಕಳು, ವಸುಮಿತ್ರೆ, ಭೋಗಾವತಿ ಮುಂತಾದವರು ಸೋಮೆಯೊಂದಿಗೆ ದೀಕ್ಷೆ ಪಡೆಯುತ್ತಾರೆ.

ಇದನ್ನು ಕಂಡು ತನಗೆ ಸಮ್ಯಕ್ತ್ವ ಉಂಟಾಯಿತೆಂದು ಗಂಧಶ್ರೀ ಹೇಳಲು ಕುಂದಲತೆಯನ್ನು ಬಿಟ್ಟು ಎಲ್ಲರೂ ಒಪ್ಪುತ್ತಾರೆ. ರಾಜ ಮತ್ತು ಮಂತ್ರಿ ಕುಂದಲತೆಗೆ ತಕ್ಕ ಶಿಕ್ಷೆಯಾಗಬೇಕೆಂದುಕೊಳ್ಳುತ್ತಾರೆ. ಅನಂತರ ಅರ್ಹದ್ದಾಸನ ಅಪೇಕ್ಷೆಯಂತೆ ಮಿತ್ರಶ್ರೀ ತನಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ವಿವರಿಸುತ್ತಾಳೆ :

ಜಿನದತ್ತೆಯ ಕಥೆ : ರಾಜಗೃಹವೆಂಬ ಪಟ್ಟಣ. ಅದರ ರಾಜ ಸಂಗ್ರಾಮ ಶೂರ. ರಾಣಿ ಕನಕಮಾಲೆ. ಆ ಪಟ್ಟಣದಲ್ಲಿ ವೃಷಭದಾಸನೆಂಬ ವ್ಯಾಪಾರಿ. ಅವನು ಮನ್ಮಥಸ್ವರೂಪಿ, ಕೋವಿದ, ಪಾಪಭೀತ ಮತ್ತು ಪರೋಪಕಾರಿ. ಅವನ ಹೆಂಡತಿ ಜಿನ ದತ್ತೆ, ಸುಂದರಿ ಹಾಗೂ ಪತಿಭಕ್ತೆ.

ಒಂದು ದಿನ ಅವಳು ಜಿನಮುನಿಗಳಿಗೆ ಆಹಾರವನ್ನು ದಾನ ಮಾಡಲು ತಟ್ಟೆ ಹಿಡಿದು ನಿಂತಿರಲು ಒಬ್ಬ ಮುನಿ ದಾನ ಸ್ವೀಕರಿಸದೆ ಹೊರಟು ಹೋಗುತ್ತಾನೆ. ಅದಕ್ಕೆ ಕಾರಣವನ್ನು ಕೇಳಲು ಮುನಿ "ಪುರುಷರು ನಿಲ್ಲಿಸಬೇಕಲ್ಲದೆ ಯತಿಗಳ ಪುರುಷರಿಲ್ಲದವರು ಸುತರವೆರಸಿ ನಿಲ್ಲಿಸಬೇಕು. ಸ್ತ್ರೀಯರೊಡನೆ ಮುನಿ ತೆರಳಲಾಗದು" ಎನ್ನುತ್ತಾನೆ. ಆದರೆ ಜಿನದತ್ತೆಗೆ ಮಕ್ಕಳಿಲ್ಲದಿದ್ದುದರಿಂದ ಇದು ಅಸಾಧ್ಯವಾಗಿ ತುಂಬ ದುಃಖವಾಗು ತ್ತದೆ. ಮನೆಗೆ ಬಂದು ಪತಿಯೊಂದಿಗೆ ಮಕ್ಕಳಿಲ್ಲದ ತಮ್ಮ ಬಾಳು :

ಮಕ್ಕಳಿಲ್ಲದ ಮನೆ ಅಕ್ಕರಿಲ್ಲದ ಊಟ
ಸೊಕ್ಕುವ ಮದವಿಲ್ಲದಾನೆ
ಕಕ್ಕಸಕುಚಗಳಿಲ್ಲದ ನಾರಿಯರ ರೂಪು
ದಿಕ್ಕಿನೊಳಗೆ ರಾಜಿಪುದೆ

ಎಂದು ಅತ್ತು ಅನಂತರ "ನನಗೆ ಮಕ್ಕಳು ಇಲ್ಲ, ನಿನಗೊಂದು ಹೆಣ್ಣನು ಆನು ಮಾಗಿ ಮದುವೆ ಮಾಡಿದೊಡೆ ತನುಜರಾಗುವರು" ಎಂದು ಪತಿಯೊಂದಿಗೆ ಹೇಳುತ್ತಾಳೆ. ಆಗ ವೃಷಭದಾಸನು ತನಗೆ ವಯಸ್ಸಾಗಿದೆಯೆಂದೂ ಎಳವರೆಯದ ಹೆಣ್ಣನ್ನು ತನಗೆ ಯಾರೂ ಕೊಡುವವರಿಲ್ಲೆಂದೂ ಹೇಳಲು, ಜಿನದತ್ತೆ, ತಾನೇ ಒಂದು ಹೆಣ್ಣನ್ನು ತಂದು ಮದುವೆ ಮಾಡುವುದಾಗಿ ಹೇಳಿ, ತನ್ನ ಚಿಕ್ಕಮ್ಮನ ಬಳಿಗೆ ಹೋಗುತ್ತಾಳೆ. ಅವಳಿಗೆ ವಿಷಯವನ್ನೆಲ್ಲ ತಿಳಿಸಿ, ಅವಳ ಮಗಳು ಕಾಮಲತೆಯನ್ನು ತನ್ನ ಪತಿಗೆ ಮದುವೆ ಮಾಡಿಕೊಡುವಂತೆ ಕೇಳುತ್ತಾಳೆ. ಅವಳು ಹಾಗೆ ಮಾಡಿದರೆ ತಾನು ಸನ್ಯಾಸವನ್ನು ಸ್ವೀಕರಿಸಿ ತನ್ನ ತಂಗಿಗೆ ತನ್ನ ಸರ್ವಸಂಪತ್ತನ್ನೂ ಒಪ್ಪಿಸುವುದಾಗಿ ಹೇಳುತ್ತಾಳೆ. ಚಿಕ್ಕಮ್ಮ ಒಪ್ಪಿ ಕಾಮಲತೆಯನ್ನು ವೃಷಭದಾಸನಿಗೆ ಕೊಟ್ಟು ಮದುವೆ ಮಾಡುತ್ತಾಳೆ. ಜಿನದತ್ತೆ ತನ್ನ ಮನೆಯ ಜವಾಬ್ದಾರಿಯನ್ನೆಲ್ಲ ತಂಗಿಗೆ ವಹಿಸಿ ತಾನು ದೀಕ್ಷೆಹೊಂದಿ ಜಿನಸೇವೆಯಲ್ಲಿ ರತಳಾಗುತಾಳೆ. ವೃಷಭದಾಸನೂ ಅವಳ ಜತೆಯಲ್ಲೇ ಇದ್ದು ನೋಂಪಿಯನ್ನಾಚರಿಸತೊಡಗಿ ಅನಿಷ್ಠಾಗಿ ಮನೆಯಿಂದ ಕಜ್ಜಾಯ, ತುಪ್ಪವನ್ನು

ತರಿಸಿಕೊಳ್ಳತೊಡಗುತ್ತಾನೆ. ಹೀಗಿರುವಾಗ ಒಮ್ಮೆ ಕಾಮಲತೆ ತೌರಿಗೆ ಹೋಗುತ್ತಾಳೆ. ಮನೆಗೆ ಬಂದ ಮಗಳನ್ನು ತಾಯಿ ''ಪ್ರಿಯದೊಳಹನೆ ನಿನ್ನರಸ?' ಎಂದು ಕೇಳಲು ಕಾಮಲತೆ 'ನಿನ್ನ ಸವತಿಯ ಮಗಳಿಗೆ ಸವತಿ ಮಾಡಿ ನನ್ನ ಸುಖವನ್ನು ಏಕೆ ಕೇಳುವೆ? ಮನೆಯಲ್ಲಿ ನಾನು ತೊತ್ತಿನಂತೆ ಕೆಲಸ ಮಾಡಬೇಕು; ಆ ದಂಪತಿಗಳಿಬ್ಬರೂ ತುಪ್ಪ ಕಜ್ಜಾಯವನ್ನು ನೋಂಪಿಯ ನೆವದಿಂದ ತರಿಸಿ ತಿಂದು ಸುಖವಾಗಿರುವರು'' ಎಂದು ಅಳತೊಡಗುತ್ತಾಳೆ. ಅವಳ ದುಃಖವನ್ನು ಕಂಡ ತಾಯಿ 'ನಾ ನಿನ್ನ ಪ್ರಿಯುವ ಸಲಿಸುವೆ ಮಗಳೆ' ಎಂದು ಸಮಾಧಾನಪಡಿಸಿ, ಅವಳನ್ನು ಗಂಡನ ಮನೆಗೆ ಕಳಿಸುತ್ತಾಳೆ. ಹೀಗಿರುವಾಗ ಒಂದು ದಿನ ಒಬ್ಬ ಸನ್ಯಾಸಿ ತನ್ನ ಮನೆ ಮುಂದೆ ಬರಲು ಅವನನ್ನು ಕಂಡ ತಾಯಿ ಅವನಿಂದ ತನ್ನ ಕಾರ್ಯ ಈಡೇರುವುದೆಂದು ಬಗೆದು, ಅವನಿಗೆ ಪಂಚ ಭಕ್ಷ್ಯವನ್ನಿತ್ತು, ದಿನವೂ ಹಾಗೆಯೇ ಬಂದು ಬಂದು ಉಂಡು ಹೋಗುವಂತೆ ಹೇಳುತ್ತಾಳೆ. ಅವನು ಹಾಗೆ ಮಾಡತೊಡಗುತ್ತಾನೆ ಒಂದು ದಿನ 'ತಾಯೀ ನನ್ನಿಂದ ನಿನಗೇನಾದರೂ ಆಗಬೇಕಿದ್ದರೆ ಹೇಳು ಮಾಡುವೆ' ಎನ್ನುತ್ತಾನೆ ಆಗ ಅವಳು ಇದೇ ಸರಿಯಾದ ಸಮಯವೆಂದು ಬಗೆದು 'ನನ್ನ ಮಗಳ ಸವತಿಯ ಜಿನದತ್ತೆಯ ಬನ್ನಬಡಿಸಿ ಕೊಲ್ಲಬೇಕು' ಎನ್ನಲು ಅವನು ಒಪ್ಪಿ ಶ್ಮಶಾನವನ್ನು ಹೊಕ್ಕು ಒಂದು ಶವವನ್ನು ಎತ್ತಿ ಕೂರಿಸಿ, ಅದರ ಕೈಗೆ ಖಡ್ಗವಿತ್ತು ಪೂಜಿಸುತ್ತಾನೆ. ಆಗ ಅದರ ಶರೀರವನ್ನು ಒಂದು ಭೇತಾಳ ಹೊಕ್ಕು ಆರ್ಭಟಿಸುತ್ತ 'ನನ್ನಿಂದೇನಾಗಬೇಕು?' ಎಂದು ಪ್ರಶ್ನಿಸಲು ಸನ್ಯಾಸಿ ಜಿನದತ್ತೆಯನ್ನು ಕೊಲ್ಲುವಂತೆ ಆಜ್ಞೆ ಮಾಡುತ್ತಾನೆ. ಭೇತಾಳ ಒಪ್ಪಿ, ಶಾಕಿನಿ, ಡಾಕಿನಿ, ಭೂತ, ಪಿಶಾಚಿಗಳೆಲ್ಲ ಹೆದರಿ ಓಡುವಂತೆ ಆರ್ಭಡಿಸುತ್ತ ಒಂದು ಜಿನಾಲಯವನ್ನು ಪ್ರದಕ್ಷಿಣೆ ಬಂದು ನಿಲ್ಲುತ್ತದೆ. ಜಿನಾಲಯದಲ್ಲಿ ಜಿನದತ್ತೆಯು ಶಾಸನದೇವಿಯರು, ಯಕ್ಷಯಕ್ಷಿಯರೊಂದಿದಿದ್ದುದನ್ನು ಕಂಡು ಅದರ ಕೋಪವೆಲ್ಲ ಆರಿ ಶಾಂತವಾಗುತ್ತದೆ. ಮೂರು ಬಾರಿ ಇದೇ ರೀತಿ ಜಿನದತ್ತೆಯನ್ನು ಕೊಲ್ಲಲು ಹೋಗಿ ಆಗದೆ ಹಿಂತಿರುಗುತ್ತದೆ. ಆಗ ಸನ್ಯಾಸಿ ''ಲೋಪವಾದುದು ನಿನ್ನ ವಚನ'' ಎನ್ನಲು ಭೇತಾಳ 'ಪಾಪಿಗಳನ್ನಲ್ಲದೆ ಪುಣ್ಯವಂತರನ್ನು ನಾನು ಕೊಲ್ಲುವುದಿಲ್ಲ. ಈಗ ಪಾಪಿಗಳನ್ನು ತೋರು ತೋರು, ಇಲ್ಲವಾದರೆ ನಿನ್ನನ್ನೇ ಸಿದಿದುಹಾಕುವೆ'' ಎಂದು ಆರ್ಭಟಿಸುತ್ತದೆ. ಕಾರ್ಯ ಕೆಟ್ಟಿತೆಂದು ತಿಳಿದ ಸನ್ಯಾಸಿ ''ಜಿನದತ್ತೆ ಕನಕಮಾಲೆಯರಲ್ಲಿ ನಿನಗಿಷ್ಟವಾದವರನ್ನು ಕೊಲ್ಲು' ಎನ್ನಲು ಭೇತಾಳ ಕೂಡಲೇ ಹೋಗಿ ಪಾಪಿ ಕನಕ ಮಾಲೆಯನ್ನು ಸಿಗಿದು ರಕ್ತ ಕುಡಿದು ಹೊರಟು ಹೋಗುತ್ತದೆ. ತನ್ನ ಮಗಳು ಸತ್ತುದನ್ನು ಕಂಡ ಬಂಧುಶ್ರೀ, ರಾಜನಲ್ಲಿಗೆ ಹೋಗಿ ಜಿನದತ್ತೆ ಕೊಂದಳೆಂದು ದೂರು ಹೇಳುತ್ತಾಳೆ. ರಾಜನು ಕೂಡಲೆ 'ಹತಿಸಿದ ಪಾತಕಿಯ ಎಳೆತನ್ನಿ' ಎಂದು ಚರರನ್ನಟ್ಟುತ್ತಾನೆ. ಆ ವೇಳೆಗೆ ವೃಷಭದಾಸ ಮತ್ತು ಜಿನದತ್ತೆಯರು, ರಾಜನಿಂದಾಗಿದ್ದ ಉಪಸರ್ಗ ಕಳೆಯುವವರೆಗೆ ಸನ್ಯಸನವನ್ನು ಕೈಗೊಂಡಿರುತ್ತಾರೆ. ಇವರನ್ನು ಎಳೆತರಲು

ಹೋದ ಚರರನ್ನು ನಗರದೇವತೆಗಳು ಸ್ತಂಭಿಸುತ್ತಾರೆ. ಅಲ್ಲದೆ ಭೇತಾಳನನ್ನು ಹಿಡಿತಂದು ಅವರ ಬಾಯಿಂದಲೇ ಎಲ್ಲವನ್ನೂ ಹೇಳಿಸುತ್ತಾನೆ ಜಿನದತ್ತೆ ನಿರಪರಾಧಿಯೆಂದು, ನಿರ್ಧಾರವಾಗಲು ರಾಜ ಅವಳನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಸನ್ಮಾನಿಸುತ್ತಾನೆ. ಬಂಧುಶ್ರೀಗೆ ಶಿಕ್ಷೆಯಾಗುತ್ತದೆ. ಮಹಾಶ್ಚರ್ಯವಾಗುತ್ತದೆ. ಜಿನದತ್ತೆ, ವೃಷಭದಾಸ, ರಾಜ ಮುಂತಾದವರೆಲ್ಲ ಜಿನದೀಕ್ಷೆ ಪಡೆಯುತ್ತಾರೆ.

ಇದನ್ನು ಕಂಡು ಕೇಳಿ ತನಗೆ ಸಮ್ಯಕ್ತ್ವ ಉಂಟಾದುದಾಗಿ ಬಂಧುಶ್ರೀ ಹೇಳಲು ಎಲ್ಲರೂ ಒಪ್ಪುತ್ತಾರೆ. ಆದರೆ ಕುಂದಲತೆ ಒಪ್ಪುವುದಿಲ್ಲ. ಮರೆಯಲ್ಲಿ ನಿಂತು ನೋಡುತ್ತಿದ್ದ ರಾಜ ಮತ್ತು ಮಂತ್ರಿ ಕುಂದಲತೆಯನ್ನು ಶಿಕ್ಷಿಸಬೇಕೆಂದುಕೊಳ್ಳುತ್ತಾರೆ. ಬಂಧುಶ್ರೀಯ ನಂತರ ಕನಕಲತೆ ತನಗೆ ಸಮ್ಯಕ್ತ್ವ ಉಂಟಾದುದಕ್ಕೆ ಕಾರಣ ಹೇಳುತ್ತಾಳೆ :

ಉದಯನ ಕಥೆ: ಅವಂತೀ ದೇಶದಲ್ಲಿ ಉಜ್ಜಯಿನಿ ಎಂಬುದು ಪಟ್ಟಣ. ಅದರ ರಾಜ ರಾಜವೃಷಭನಾಥ. ರಾಣಿ ಮದನಶ್ರೀ. ಮದನದೇವ ಮಂತ್ರಿ. ಅಲ್ಲಿಯ ಒಬ್ಬ ವ್ಯಾಪಾರಿ ಸಾಗರದತ್ತ. ಅವನ ಹೆಂಡತಿ ಸಾಗರದತ್ತೆ. ಅವರ ಮಗ ಉದಯ. ಅವನು ಮನ್ಮಥಸ್ವರೂಪಿ. ಮಗಳು ಜಿನದತ್ತೆ. ಅವಳು ಲಕ್ಷ್ಮಿಯಂತೆ ಸುಲಕ್ಷಣೆ. ಅವಳನ್ನು ಕೌಶಾಂಬೀಪುರದ ಜಿನದತ್ತನೆಂಬ ವ್ಯಾಪಾರಿಗೆ ಕೊಟ್ಟು ಮದುವೆ ಮಾಡಿದರು. ಮಗ ಉದಯ ದುರ್ವ್ಯಸನಿ. ದುರುಳರೊಡನೆ ಸೇರಿ ಜೂಜಾಡುತ್ತಿರುತ್ತಾನೆ, ಕಳ್ಳರೊಡನೆ ಸೇರಿ ಕದ್ದು ಸೂಳೆಯರೊಂದಿಗೆ ಕೂಡುತ್ತಿರುತ್ತಾನೆ. ಒಮ್ಮೆ ಇವನು ಇತರರೊಂದಿಗೆ ಸೇರಿ ಕದ್ದುತಂದ ಕಡಲೆಯನ್ನು ಒಂದು ಹಾಳು ದೇಗುಲದಲ್ಲಿ ಕುಳಿತು ತಿನ್ನುತ್ತಿರುತ್ತಾನೆ. ಇವನನ್ನು ಕಂಡ ತಳವಾರ ಹಿಡಿದು ಕೈಕಟ್ಟಿ ಇವನ ತಂದೆಗೆ ಒಪ್ಪಿಸುತ್ತಾನೆ. ತಂದೆ ಮಗನಿಗೆ ಎಷ್ಟೇ ಬುದ್ಧಿ ಹೇಳಿದರೂ ಪ್ರಯೋಜನವಾಗುವುದಿಲ್ಲ. ಪುನಃ ಪುಂಡರೊಡನೆ ಕಳುವನ್ನು ಪ್ರಾರಂಭಿಸುತ್ತಾನೆ. ದಳಪತಿ, ಮಂತ್ರಿ, ಮನ್ನೆಯರ, ಸಾಮಂತರ ಮನೆಗಳಿಗೇ ಕನ್ನವಿಕ್ಕತೊಡಗುತ್ತಾನೆ. ಇನ್ನೊಮ್ಮೆ ರಾಜನ ಭಂಡಾರವನ್ನೇ ಲೂಟಿ ಮಾಡಲು ಹೋಗಿ ಸಿಕ್ಕಿಬೀಳುತ್ತಾನೆ. ರಾಜ ಅವನ ತಂದೆಯನ್ನು ಕರೆಸಿ, ಮಗನಿಗೆ ಬುದ್ಧಿಗಲಿಸುವಂತೆ ಹೇಳಿ ಅವನಿಗೆ ಉದಯನನ್ನು ಒಪ್ಪಿಸುತ್ತಾನೆ. ಪುನಃ ತಂದೆ ಮಗನಿಗೆ ನಾನಾವಿಧವಾಗಿ ಬುದ್ಧಿ ಹೇಳುತ್ತಾನೆ. ಆದರೂ ಮಗ ಕಳುವನ್ನು ಬಿಡದಿರಲು ತಂದೆ ಅವನನ್ನು ಮನೆಯಿಂದ ಹೊರಹಾಕುತ್ತಾನೆ. ಆಗ ಉದಯನು ತನ್ನ ತಂಗಿಯ ಮನೆಗೆ ಹೋಗಿ ಅಂಗಣದಲ್ಲಿ ನಿಂತಿರಲು, ಅವನನ್ನು ಕಂಡ ತಂಗಿ, ಮನೆಗೆ ಕರೆದು ಊಟೋಪಚಾರ ಮಾಡಿಸಿ ಅಣ್ಣನಿಗೆ ಬುದ್ಧಿ ಹೇಳುತ್ತಾಳೆ. ತಂಗಿಯ ಮನೆಯಲ್ಲೇ ಇದ್ದ ಉದಯ ಕೆಲವು ಕಾಲದ ನಂತರ ಕೌಶಾಂಬಿಯ ಜಿನಾಲಯಕ್ಕೆ ಹೋಗಿ ಜಿನಮುನಿಗೆ ವಂದಿಸಿ ತನಗೊಂದು ವ್ರತವನ್ನು ಕರುಣಿಸುವಂತೆ ಕೇಳಲು ಮುನಿ ಸಂತೋಷದಿಂದ ಹಾಗೆ ಮಾಡಿ 'ಹೆಸರು ತಿಳಿಯದ ಮರದ ಹಣ್ಣನ್ನು ತಿನ್ನಬೇಡ' ಎಂದು

ಎಚ್ಚರಿಸುತ್ತಾನೆ. ವ್ರತವನ್ನು ಧರಿಸಿದ ಮೇಲೆ ಜಿನದತ್ತೆಗೆ ಉಮಯನ ಮೇಲೆ ನಂಬಿಕೆ ಉಂಟಾಗುತ್ತದೆ. ಅಣ್ಣನು ವ್ಯಾಪಾರವನ್ನಾದರೂ ಮಾಡಲಿ ಎಂದು ಅವನ ಕೈಗೆ ಸಾವಿರ ಹೊನ್ನನ್ನು ಕೊಟ್ಟು ಪುರದ ಪರದರ ಜತೆ ಕಳಿಸುತ್ತಾಳೆ. ಅವರೆಲ್ಲ ಹೊರಟು ಉಜ್ಜಯಿನಿಯನ್ನು ತಲುಪುವಷ್ಟರಲ್ಲಿ ಕತ್ತಲಾಗುತ್ತದೆ. ದಾರಿಗಾಣದ ಪಯಣಿಗರು ದಾರಿತಪ್ಪಿ ಕಾಡಿನಲ್ಲಿ ತೊಳಲಿ ಬಳಲುತ್ತಾರೆ. ಬೆಳಗಾದ ಮೇಲೆ ಒಂದು ಕಿರುದಾರಿ ಹಿಡಿದು ತಮ್ಮ ಪ್ರಯಾಣವನ್ನು ಮುಂದುವರಿಸಿರಲು ಒಬ್ಬಳು ವೃದ್ಧ ಶಬರಿ ಅವರ ಜತೆಯಾಗುತ್ತಾಳೆ. ಅವಳು ಒಂದು ಜಾತಿಯ ಹಣ್ಣನ್ನು ತಿನ್ನಲು ಅವಳಿಗೆ ಕೂಡಲೇ ಯೌವನ ಪ್ರಾಪ್ತವಾಗುತ್ತದೆ. ಅದನ್ನು ಕಂಡ ಉಮಯನಿಗೆ ತಾನೂ ಅದನ್ನು ತಿನ್ನ ಬೇಕೆನ್ನಿಸಿ ಅದರ ಹೆಸರೇನೆಂದು ಕೇಳುತ್ತಾನೆ. ಅವಳು ತನಗೂ ತಿಳಿಯದೆನ್ನುತ್ತಾಳೆ. ಹೆಸರು ತಿಳಿಯದುದರಿಂದ ಉಮಯ ತಿನ್ನುವುದಿಲ್ಲ. ಉಳಿದ ಪರದರು ಅದನ್ನು ತಿಂದು ವಿಷವೇರಿ ನೆಲಕ್ಕುರುಳುತ್ತಾರೆ. ಅದಕ್ಕೆ ಕಾರಣವನ್ನು ಕೇಳಲು ಶಬರಿ :

ನಾ ವನದೇವತೆ ನಿನ್ನಯ ವ್ರತದೊಂದು
ಭಾವದೃಢವ ನೋಡಲೆಂದು
ಈ ವಿಷಪೂರಿತ ಫಲದ ಭೂರುಹವನ್ನು
ಓವದೆಸಗಿದೆ ಇಂತಿದನು—ಎನ್ನುತ್ತಾಳೆ.

ಅನಂತರ ಅವನ ವ್ರತನಿಷ್ಠೆಯನ್ನು ಹೊಗಳಿ, ತನ್ನ ನಿಜರೂಪುದೋರುತ್ತಾಳೆ. ಸತ್ತಿದ್ದ ಪರದರನ್ನೆಲ್ಲ ಬದುಕಿಸಿ, ಎಲ್ಲರನ್ನೂ ಕೌಶಾಂಬೀನಗರಕ್ಕೆ ಕರೆತಂದು ಮನ್ನಿಸುತ್ತಾಳೆ. ಉಮಯನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಗೌರವಿಸಿ ಮಾಯವಾಗುತ್ತಾಳೆ. ಇವನ್ನೆಲ್ಲ ಕಂಡ ರಾಜ, ರಾಜಪರಿವಾರದವರೆಲ್ಲ ಸಮ್ಯಕ್ತ್ವ ಉಂಟಾಗಿ ಉಮಯನ ಜತೆ ದೀಕ್ಷೆ ಹೊಂದುತ್ತಾರೆ. ಅವನ್ನು ಕಂಡು ತನಗೆ ಸಮ್ಯಕ್ತ್ವ ಉಂಟಾಯಿತೆಂದು ಕನಕಲತೆ ಹೇಳಲು ಎಲ್ಲರೂ ತಲೆದೂಗುತ್ತಾರೆ. ಆದರೆ ಕುಂದಲತೆ ಒಪ್ಪುವುದಿಲ್ಲ. ಮರೆಯಲ್ಲಿದ್ದ ರಾಜ ಮತ್ತು ಮಂತ್ರಿ ಅವಳನ್ನು ಶಿಕ್ಷಿಸಬೇಕೆಂದುಕೊಳ್ಳುತ್ತಾರೆ. ಅಂಜನ ಚೋರ ನೋಡಿ ನಗುತ್ತಿರುತ್ತಾನೆ. ಅನಂತರ ಪದ್ಮಶ್ರೀ ತನಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ವಿವರಿಸುತ್ತಾಳೆ :

ಸೋಮಶರ್ಮನ ಕಥೆ : ಕೌಶಾಂಬೀನಗರದ ರಾಜ ಅಜಿತಂಜಯ. ರಾಣಿ ಸುಪ್ರಭೆ. ಮಂತ್ರಿ ಸೋಮಶರ್ಮ. ಅವನು ದಾನಿ. ಒಂದು ದಿನ ಒಬ್ಬ ಮುನಿ ಮಾಸೋಪವಾಸ ಮಾಡಿ ಭಿಕ್ಷೆಗೆಂದು ಅವನಲ್ಲಿಗೆ ಬರುತ್ತಾನೆ. ಮಂತ್ರಿ ಮುನಿಗಳನ್ನು ಕಂಡು ಇದಿರ್ಗೊಂಡು ಸತ್ಕರಿಸುತ್ತಾನೆ. ತೃಪ್ತನಾದ ಮುನಿ 'ಅಕ್ಷಯ ಫಲಮಸ್ತು' ಎಂದು ಮಂತ್ರಿಯನ್ನು ಹರಸುತ್ತಾನೆ. ಪಂಚಾಶ್ಚರ್ಯವಾಗುತ್ತದೆ.

ಪದ್ಮಶ್ರೀಯ ಕಥೆ : ವಂಗದೇಶದಲ್ಲಿ ಚಂಪಾನಗರ. ದಾಡಿವಾಹನ ರಾಜ. ಪದ್ಮಾವತಿ ರಾಣಿ. ಅದೇ ನಗರದ ವ್ಯಾಪಾರಿ ವಿಮಲದಾಸ, ಅವನ ಹೆಂಡತಿ

ಪದ್ಮಿನಿ. ಅವರಿಬ್ಬರ ಮಗಳು ಪದ್ಮಶ್ರೀ. ಅವಳೊಮ್ಮೆ ಜಿನಪೂಜೆ ಮಾಡಿ ಮನೆಗೆ ಬರುತ್ತಿರುವಾಗ ಬುದ್ಧಸಂಘ ಎಂಬವನು ಅವಳನ್ನು ಕಂಡು ಮೋಹಗೊಳ್ಳುತ್ತಾನೆ. ಈ ವಿಷಯ ಪದ್ಮಶ್ರೀಯ ತಾಯಿ ತಂದೆಯರಿಗೆ ತಿಳಿಯುತ್ತದೆ ಅವರು ಬುದ್ಧಸಂಘನಿಗೆ ತಮ್ಮ ಮಗಳನ್ನು ಕೊಡಲು ಒಪ್ಪುವುದಿಲ್ಲ. ಬುದ್ಧಸಂಘನ ತಾಯಿ ತಂದೆಯರೂ ಸಹ, ಬೌದ್ಧರಿಗೆ ಜೈನರು ಹೆಣ್ಣು ಕೊಡುವುದಿಲ್ಲವೆಂದೂ ಆ ಯೋಚನೆಯನ್ನು ಬಿಡಬೇಕೆಂದೂ ಬುದ್ಧಿ ಹೇಳಿದರೂ ಮಗ ಕೇಳದಿರಲು, ತಂದೆ ತಾನು ಯುಕ್ತಿಯಿಂದ ಆಕೆಯನ್ನು ತಂದು ಮದುವೆ ಮಾಡುವುದಾಗಿ ಹೇಳಿ ಜಿನಾಲಯಕ್ಕೆ ಹೋಗುತ್ತಾನೆ. ಅಲ್ಲಿ ಸೌಭದ್ರಮುನಿಯಿಂದ ಒಂದು ವ್ರತವನ್ನು ಕೈಕೊಂಡು ತಾನು ಸಮ್ಯಕ್ತ್ವ ಹೊಂದಿದವನಂತೆ ಇರುತ್ತ ಒಂದು ದಿನ ಜೈನಯತಿಯ ವೇಷ ಧರಿಸಿ ವಿಮಲದಾಸನ ಮನೆಗೆ ಪಾರಣೆಗೆಂದು ಬರುತ್ತಾನೆ. ಇಬ್ಬರೂ ಒಟ್ಟಿಗೆ ಪಾರಣೆಗೆ ಕುಳಿತಿರಲು ನಾರಿಯರು ಅವರಿಗೆ ಊಟಕ್ಕೆ ಬಡಿಸಿದರೂ ಅವನು ಮಾತ್ರ ಊಟ ಮಾಡದೆ ಸುಮ್ಮನೆ ಕುಳಿತಿರುತ್ತಾನೆ. ಅದಕ್ಕೆ ಕಾರಣವನ್ನು ಕೇಳಲು ಅವನು "ನಿನ್ನಯ ತನುಜಾತೆಯ ನನ್ನ ಸುತನಿಗೆ ನನ್ನಿಯಿಂದಿತ್ತೊಡೆಯಾಗ ನಿನ್ನೊಳಗೊಂದಾದಿ ಭೋಜನ ಮಾಳ್ಪೆನು" ಎನ್ನುತ್ತಾನೆ. ಅದಕ್ಕೆ ವಿಮಲದಾಸ ಒಪ್ಪಿ ವಿಜೃಂಭಣೆಯಿಂದ ವಿವಾಹ ನೆರವೇರಿಸುತ್ತಾನೆ. ಕೆಲವು ದಿನಗಳು ಕಳೆದ ನಂತರ ಬುದ್ಧದಾಸನು ತನ್ನ ಕಪಟವೇಷವನ್ನು ತೊರೆಯುತ್ತಾನೆ. ಅದನ್ನು ಕಂಡು ವಿಮಲದಾಸನು ತಾನು ಮೋಸಹೋದೆನೆಂದು ತಿಳಿದು ಮರುಗುತ್ತಾನೆ. ಅದೇ ಕೊರಗಿನಲ್ಲಿದ್ದ ಅವನು ಕೆಲವೇ ದಿನಗಳಲ್ಲಿ ಸತ್ತುಹೋಗುತ್ತಾನೆ. ಪದ್ಮಶ್ರೀಗೆ ಅತೀವ ದುಃಖವಾಗುತ್ತದೆ. ಆಗ ಬುದ್ಧಗುರು, ಪದ್ಮಸಂಘ ಎಂಬುವನು ನಾನಾ ವಿಧವಾಗಿ ಅವಳನ್ನು ಸಮಾಧಾನಪಡಿಸಿ ಕೊನೆಗೆ, "ವಿಮಲದಾಸನು ಸತ್ತು ಈಗ ಈಪೂರ ಕಾಡಿನಲ್ಲಿ ಹುಲ್ಲೆಯಾಗಿ ಹುಟ್ಟಿದ್ದಾನೆ" ಎನ್ನುತ್ತಾನೆ. 'ಅದನ್ನು ನೀವೆಂತು ಕಂಡಿರಿ ?' ಎಂದು ಪದ್ಮಶ್ರೀ ಕೇಳಲು ಅವನು 'ನಾನು ತ್ರಿಕಾಲಜ್ಞಾನಿ' ಎಂದು ಹೇಳಿ ಹೋಗುತ್ತಾನೆ. ಆ ಮಾತನ್ನು ಪದ್ಮಶ್ರೀ ನಂಬದೆ, ಅವನಿಗೆ ಒಂದು ಪರೀಕ್ಷೆ ಒಡ್ಡುತ್ತಾಳೆ. ಒಂದು ದಿನ ಪದ್ಮಸಂಘನನ್ನು ತನ್ನ ಮನೆಗೆ ಊಟಕ್ಕೆ ಕರೆಸುತ್ತಾಳೆ. ಅವನಿಗೆ ತಿಳಿಯದಂತೆ ಅವನ ಪಾದರಕ್ಷೆಗಳನ್ನು ಕತ್ತರಿಸಿ, ಅಡುಗೆ ಮಾಡಿ ಬಡಿಸುತ್ತಾಳೆ. ಅವರು ಊಟ ಮಾಡಿ ಪದ್ಮಶ್ರೀಯ ಅಡುಗೆಯನ್ನು ಹೊಗಳುತ್ತಾರೆ. ಹೊರಡುವಾಗ ತಮ್ಮ ಮೆಟ್ಟುಗಳನ್ನು ನೋಡಿ, "ನಿನ್ನ ದಾದಿಯರು ನನ್ನ ಪಾದರಕ್ಷೆಗಳನ್ನು ಬಚ್ಚಿಟ್ಟಿದ್ದಾರೆ, ಅವನ್ನು ತರಿಸಿಕೊಡು" ಎಂದು ಕೇಳಲು ಪದ್ಮಶ್ರೀ ನಗುತ್ತ "ಕಾಲತ್ರಯಂಗಳ ಬಲ್ಲವರು ನಿಮ್ಮಯ ಕಾಲ ರಕ್ಷೆಗಳಿಪ್ಪ ನೆಲೆಯ ಕಾಲಜ್ಞಾನದಿ ಅರಿದೊಯ್ವುದು" ಎನ್ನುತ್ತಾಳೆ. ಆಗ ಪದ್ಮಸಂಘನು ಕೋಪದಿಂದ ತರಿಸಿಕೊಡುವಂತೆ ಅಬ್ಬರಿಸುತ್ತಾನೆ. ಪದ್ಮಶ್ರೀ 'ನಿಮ್ಮ ಹೊಟ್ಟೆಯೊಳಿವೆ' ಎನ್ನಲು, ಅವನು ಬಾಯಲ್ಲಿ ಬೆರಳಿಟ್ಟು ವಾಂತಿಮಾಡಲು ಚಪ್ಪಲಿಯ ತುಂಡುಗಳು ನೆಲಕ್ಕುದುರುತ್ತವೆ. ಅವಮಾನಿತನಾಗಿ

ಸಿಟ್ಟುಗೊಂಡ ಪದ್ಮಸಂಘನು ರಾಜನಿಗೆ ದೂರುಕೊಡುತ್ತಾನೆ. ಅವಳನ್ನು ಊರು ದಾಟಿಸುವಂತೆ ರಾಜಾಜ್ಞೆಯಾಗುತ್ತದೆ. ತಳಾರನು ಹಾಗೆ ಮಾಡಲು ಅವಳ ಗಂಡ ಬುದ್ಧ ಸಂಘನು ಎಲ್ಲರನ್ನೂ ತೊರೆದು ಹೋಗಿ ಹೆಂಡತಿಯೊಡನಿರತೊಡಗುತ್ತಾನೆ. ತಂದೆ ಅವನಿಗೆ ಬೇರೊಬ್ಬ ಚೆಲುವೆಯನ್ನು ಮದುವೆ ಮಾಡುವುದಾಗಿ ಹೇಳಿದರೂ ಕೇಳದೆ ಅವಳನ್ನು ಹಿಂಬಾಲಿಸುತ್ತಾನೆ. ಬೇರೆ ದಾರಿ ಕಾಣದೆ ಬುದ್ಧದಾಸ ಮಗನಿಗೆ ಸಾವಿರ ಹೊನ್ನನ್ನು ಕೊಟ್ಟು ಕಳುಹಿಸುತ್ತಾನೆ. ದಂಪತಿಗಳು ಪುರವನ್ನು ಬಿಟ್ಟು ಹೋಗುತ್ತಿರು ವಾಗ ವ್ಯಾಪಾರಕ್ಕೆಂದು ಹೊರಟಿದ್ದ ಇಭುದತ್ತ ಮತ್ತು ಈಶ್ವರದತ್ತ ಎಂಬವರು ಸಿಕ್ಕುತ್ತಾರೆ. ಇವರು ಆ ದಂಪತಿಗಳನ್ನು ತಮ್ಮ ಮನೆಗೆ ಕರೆದೊಯ್ದು ಎಲ್ಲಗೂ ಅನ್ಯೋನ್ಯವಾದಿ ಇರತೊಡಗುತ್ತಾರೆ. ಒಮ್ಮೆ ಮನಸ್ತಾಪದ ಕಾರಣವಾಗಿ ಈಶ್ವರ ದತ್ತನು ಇಭದತ್ತನನ್ನು ಕೊಲ್ಲಲು ಹವಣಿಸುತ್ತಾನೆ. ಅಡಿಗೆಯವಳಿಗೆ ಅಪಾರ ಹಣ ವಿತ್ತು, ಅವನನ್ನು ಊಟದಲ್ಲಿ ವಿಷ ಸೇರಿಸಿ ಕೊಲ್ಲುವಂತೆ ಹೇಳುತ್ತಾನೆ. ಅದರಂತೆ ಅಡಿಗೆ ಯವಳು ಊಟಕ್ಕೆ ವಿಷವನ್ನು ಬೆರಸಿ, ಪದ್ಮಶ್ರೀಯನ್ನು ಕರೆದು "ಅಕ್ಕ ಕೇಳೀ ಹಿಟ್ಟ ನಿನ್ನ ವಲ್ಲಭನಿಗೆ ಇಕ್ಕಬೇಡೀಗ ನೀನೊಯ್ದು ಗಕ್ಕನೆ ನಮ್ಮಯ ಇಭದತ್ತನೆಡೆಯೊಳು ಇಕ್ಕು ಮರೆಯಬೇಡ" ಎನ್ನಲು ಅವಳು ಹಿಟ್ಟನ್ನು ಒಯ್ದು 'ಪಂತಿಯೊಳ್ ಪರಪಾಚ ಮಾಡಬಾರದು' ಎಂದೆಣಿಸಿ ಇಬ್ಬರಿಗೂ ಒಡಿಸುತ್ತಾಳೆ. ವಿಷಾಹಾರವನ್ನು ಸೇವಿಸಿದ ಇಬ್ಬರೂ ಸಾಯುತ್ತಾರೆ. ಈ ವಿಷಯ ತಿಳಿದ ಬುದ್ಧದಾಸ ಪದ್ಮಶ್ರೀಯೆ ತನ್ನ ಮಗ ನನ್ನು ಕೊಂದಳೆಂದು ಭಾವಿಸಿ ಅವಳನ್ನು ಮನಸಾರೆ ಬೈಯ್ದು ಖಡ್ಗದಿಂದ ಕಡಿಯು ತ್ತಾನೆ. ನಗರದೇವತೆಯರು ಅದನ್ನು ತಡೆಯಲು ಖಡ್ಗವೇ ಹೂಮಾಲೆಯಾಗಿ ಪದ್ಮಶ್ರೀಯ ಕೊರಳನ್ನಲಂಕರಿಸುತ್ತದೆ. ನಗರದೇವತೆಗಳು ಬುದ್ಧಸಂಘ ಮತ್ತು ಇಭದತ್ತರನ್ನು ಬದುಕಿಸಿ ಪದ್ಮಶ್ರೀಯನ್ನು ಸಿಂಹಾಸನದಲ್ಲಿ ಕೂರಿಸಿ ಗೌರವಿಸುತ್ತಾರೆ. ಪಂಚಾಶ್ಚರ್ಯವಾಗುತ್ತದೆ. ರಾಜನು ಪದ್ಮಶ್ರೀಯನ್ನು ಕೊಂಡಾಡುತ್ತಾನೆ. ಅದನ್ನು ಕಂಡ ಅನೇಕರಿಗೆ ಸಮ್ಯಕ್ತ್ವ ಉಂಟಾಗಿ ದೀಕ್ಷೆ ಹೊಂದುತ್ತಾರೆ. ತನಗೂ ಇದರಿಂದಲೇ ಸಮ್ಯಕ್ತ್ವ ಉಂಟಾಯಿತೆಂದು ಪದ್ಮಲತೆ ಹೇಳಲು ಕುಂದಲತೆ ಒಪ್ಪುವುದಿಲ್ಲ. ರಾಜ ಮತ್ತು ಮಂತ್ರಿ ಅವಳನ್ನು ಶಿಕ್ಷಿಸಬೇಕೆಂದುಕೊಳ್ಳುತ್ತಾರೆ. ಅನಂತರ ವಿದ್ಯುಲ್ಲತೆ ತನಗೆ ಸಮ್ಯಕ್ತ್ವ ಉಂಟಾದ ಬಗೆಯನ್ನು ವಿವರಿಸುತ್ತಾನೆ.

ಜಾತ್ಯಶ್ವಗಳ ಕಥೆ: ಕೌಶಾಂಬೀಪುರದ ರಾಜ ಸುದಂಡ. ರಾಣಿ ವಿಜಯೆ. ಸುಬುದ್ಧಿ ಮಂತ್ರಿ. ಸುರದೇವ ಮತ್ತು ಗುಣಶ್ರೀ ಆ ಪುರದ ಪರದದಂಪತಿಗಳು. ಜಾತ್ಯಶ್ವಗಳನ್ನು ತಂದು ರಾಜನಿಗೆ ಒಪ್ಪಿಸುವುದಕ್ಕೋಸ್ಕರ ಸುರದೇವ ತನ್ನ ಸಂಗಡಿಗ ರೊಂದಿಗೆ ಬಂಗಾರದ್ವೀಪಕ್ಕೆ ಹೋಗುತ್ತಾನೆ. ಒಳ್ಳೆಯ ಜಾತ್ಯಶ್ವಗಳನ್ನು ತಂದು ರಾಜನಿಗೆ ಒಪ್ಪಿಸುತ್ತಾನೆ. ಅದಕ್ಕಾಗಿ ರಾಜ ಪರದನಿಗೆ ಲಕ್ಷ ಹೊನ್ನನ್ನು ಕೊಡುತ್ತಾನೆ. ಸುರದೇವ ತನಗೆ ಸಮ್ಯಕ್ತ್ವ ಉಂಟಾದುದರಿಂದ ನಿರೀಂದ್ರರಿಗೆ ಆಹಾರ ಕೊಡಲು

ಪ್ರಾರಂಭಿಸುತ್ತಾನೆ. ಹೀಗಿರಲು ಒಮ್ಮೆ ಐನೂರು ಮಂದಿ ಶಿಷ್ಯರೊಂದಿಗೆ ಬಂದ
ಚಂದ್ರಗತಿ ಎಂಬ ಮುನಿಗಳನ್ನು ಸತ್ಕರಿಸುತ್ತಾನೆ. ಪಂಚಾಶ್ಚರ್ಯವಾಗುತ್ತದೆ ಅದೇ
ಸಮಯದಲ್ಲಿ ಅದೇ ಊರಿನ ವಾರಿಧಿದತ್ತ ಮತ್ತು ಲಕ್ಷ್ಮೀಮತಿ ದಂಪತಿಗಳಿಗೆ ಸಮುದ್ರ
ದತ್ತನೆಂಬ ಮಗ ಹುಟ್ಟುತ್ತಾನೆ. ಅವನು ತನ್ನ ಹಿಂದಿನ ಜನ್ಮದ ಪಾಪಕಾರಣವಾಗಿ
ಬೆಳೆದು ದರಿದ್ರನಾಗುತ್ತಾನೆ. ಸ್ನೇಹಿತರು ಶತ್ರುಗಳಾಗುತ್ತಾರೆ. ಅವನು "ಹಿಂದಣ
ಭವದೊಳು ತಾನೆಸಗಿದ ಪಾಪ ಬಂದೊದಗಿತು" ಎಂದು ನೊಂದುಕೊಳ್ಳುತ್ತಾನೆ.
ಇದನ್ನು ನಿವಾರಿಸುವರುಂಟೆ ಎಂದು ಕೊರಗುತ್ತಾನೆ. ಅವನಿಗೆ ತಾನೂ ಸಿರಿವಂತನಾಗುವ
ಬಯಕೆಯಾಗುತ್ತದೆ, ತಾನೂ ಬಂಗುರದೇಶಕ್ಕೆ ಹೋಗಿ ಜಾತ್ಯಶ್ವಗಳನ್ನು ತಂದು
ರಾಜನಿಗೆ ಕೊಟ್ಟು ಹಣವಂತನಾಗಬೇಕೆಂದು ಯೋಚಿಸಿ ಇತರ ವ್ಯಾಪಾರಿಗಳೊಂದಿಗೆ
ಹೋಗುತ್ತಾನೆ. ಎಲ್ಲರೂ ಪಾಲಾಶ ಎಂಬ ಊರನ್ನು ಸೇರಿ, ಅಲ್ಲಿಂದ ಬೇರೆ ಬೇರೆಡೆ
ಗಳಿಗೆ ಹೊರಡುತ್ತಾರೆ. ಮೂರು ವರ್ಷಗಳ ನಂತರ ಎಲ್ಲರೂ ಅದೇ ಸ್ಥಳಕ್ಕೆ ಬಂದು
ಸೇರಬೇಕೆಂದು ತೀರ್ಮಾನಿಸುತ್ತಾರೆ. ಸಮುದ್ರದತ್ತ ಮಾತ್ರ ಅಲ್ಲಿಯೇ ನಿಲ್ಲುತ್ತಾನೆ.
ಅವನು ಒಂದು ದಿನ ಬೀದಿಯಲ್ಲಿ ಅಲೆಯುತ್ತಿರುವಾಗ ಶೋಕನೆಂಬವನ ಪರಿಚಯ
ವಾಗುತ್ತದೆ. ಅವನು ತನ್ನ ಕುದುರೆಗಳನ್ನು ಸಾಕಲು ಆಳಿಗಾಗಿ ಅರಸುತ್ತಿರುತ್ತಾನೆ.
ಸಮುದ್ರದತ್ತನ ವಿಚಾರವನ್ನೆಲ್ಲ ಇವನು ತಿಳಿದುಕೊಂಡ ಮೇಲೆ ಅವನನ್ನು "ನಿಮ್ಮವರು
ಬರುವ ಪರಿಯಂತರ ನಮ್ಮ ಗೃಹದೊಳು ಸಂತೋಷದಿಂದಿರ್ದು ನಮ್ಮ ಕುದುರೆಗಳ
ಸಂತೈಸಿಕೊಂಡಿರು" ಎನ್ನಲು ಸಮುದ್ರದತ್ತ ಅದಕ್ಕೆ ಒಪ್ಪಿ, ತಾನು ಹಾಗೆ ಇದ್ದುದಕ್ಕೆ
ಏನನ್ನು ಕೊಡುವೆ ಎಂದು ಕೇಳಲು ಶೋಕನು "ನಿನ್ನ ಮನಸು ಬಂದ ಕುದುರೆಯ
ನೆರಡನು ಸನ್ನುತದಿಂದಾಯ್ದುಕೊಂಡು ನಿನ್ನ ಊರಿಗೆ ಪೋಗು" ಎನ್ನುತ್ತಾನೆ. ಸಮುದ್ರ
ದತ್ತ ಒಪ್ಪಿ ಅವನ ಮನೆಯಲ್ಲಿ ನಿಲ್ಲುತ್ತಾನೆ. ಶೋಕನು ಅವನನ್ನು ತನ್ನ ಆಳುಗಳ
ಮುಖಂಡನನ್ನಾಗಿ ಮಾಡುತ್ತಾನೆ. ಹೀಗಿರಲು ಕೆಲವು ಸಮಯದ ನಂತರ ಶೋಕನ
ಮಗಳು ಕಮಲೆ ಎಂಬವಳು ಸಮುದ್ರದತ್ತನನ್ನು ಮೋಹಿಸುತ್ತಾಳೆ. ಮೂರು
ವರುಷಗಳು ಮುಗಿಯುತ್ತ ಬಂದಾಗ, ವಿಷಯವನ್ನು ಸಮುದ್ರದತ್ತ ಕಮಲೆಗೆ,
ತಿಳಿಸುತ್ತಾನೆ. ಆಗ ಅವಳು 'ನಿನ್ನೊಡನೆ ನಿಮ್ಮೂರಿಗೆ ಬಾದಪೆನು' ಎನ್ನಲು ಇವನು
ನಾನಾ ವಿಧವಾಗಿ ಬುದ್ಧಿ ಹೇಳಿ ಬೇಡವೆನ್ನುತ್ತಾನೆ. ಆದರೂ ಒಪ್ಪದೆ ಅವಳೇ ಒಂದು
ಉಪಾಯವನ್ನು ಸೂಚಿಸುತ್ತಾಳೆ. ಅವಳ ತಂದೆಯು ಬಳಿಯಿರುವ ಜಲಗಾಮಿ ಮತ್ತು
ಆಕಾಶಗಾಮಿ ಎಂಬ ಕುದುರೆಗಳನ್ನು ಆರಿಸಿಕೊಳ್ಳಬೇಕೆಂದೂ ಅವುಗಳ ಸಹಾಯದಿಂದ
ತಾವು ಹೋಗಬಹುದೆಂದೂ ಹೇಳಿ, ಅವುಗಳ ಲಕ್ಷಣಗಳನ್ನೆಲ್ಲ ಅವನಿಗೆ ವಿವರಿಸುತ್ತಾಳೆ.
ಸಮುದ್ರದತ್ತನು ಅದಕ್ಕೆ ಒಪ್ಪಿ ಸಮ್ಮನಿರುತ್ತಾನೆ. ಒಂದು ದಿನ ಆ ಕುದುರೆಗಳನ್ನು
ತರಿಸಿ ಪರೀಕ್ಷಿಸುತ್ತಾನೆ. ವೈಯಾಳಿಯನ್ನು ಕಂಡ ಜನರು 'ಈ ಅಶ್ವಕೆ ಮೂಲೋಕ
ಎಣೆಯಿಲ್ಲ' ಎನ್ನುತ್ತಾರೆ. ಶೋಕ ಮೆಚ್ಚಿ ಸಮುದ್ರದತ್ತನಿಗೆ ವಸ್ತ್ರಾಭರಣಗಳನ್ನಿತ್ತು

ಗೌರವಿಸುತ್ತಾನೆ. ಆ ವೇಳೆಗೆ ಮೂರು ವರ್ಷಗಳು ಕಳೆಯಲು ನಾನಾ ದಿಕ್ಕಿಗೆ ಹೋಗಿದ್ದ ಸಮುದ್ರದತ್ತನ ಸ್ನೇಹಿತರು ಮರಳಿ ಬರುತ್ತಾರೆ. ನಾನಾ ವಸ್ತುಗಳನ್ನು ಕೊಂಡು ತಂದು ಸಮುದ್ರದತ್ತನನ್ನು ಕಾಣುತ್ತಾರೆ. ಸಮುದ್ರದತ್ತನು ಶೋಕನ ಬಳಿಗೆ ಹೋಗಿ ತನ್ನ ಕೆಲಸ ತೀರಿತೆಂದೂ ತನ್ನ ಸ್ನೇಹಿತರೊಂದಿಗೆ ತನ್ನ ಊರಿಗೆ ಹಿಂದಿರುಗುವುದಾಗಿಯೂ ಹೇಳುತ್ತಾನೆ. ಶೋಕ ತನ್ನ ಹಿಂದಿನ ಕರಾರಿನಂತೆ "ಭೇದವಿಲ್ಲದೆ ಲಾಯಕ್ಕೆ ಹೋಗಿ ತೇಜಿಯನ್ನಾದರೂ ಮನಬಂದವೆರಡ, ಕಾದ ಕೂಲಿಯ ತೀರಿಸಿಕೊ" ಎನ್ನುತ್ತಾನೆ. ಅದರಂತೆ, ಹಿಂದೆ ತನ್ನ ಪ್ರೇಯಸಿ ಕಮಲೆ ಹೇಳಿದ್ದ ಆಕಾಶಗಾಮಿನಿ, ಜಲಗಾಮಿನಿಗಳೆಂಬ ಎರಡು ಜಾತ್ಯಶ್ವಗಳನ್ನು ಹಿಡಿಯುತ್ತಾನೆ. ಅದನ್ನು ಕಂಡ ಶೋಕನಿಗೆ ಆಶ್ಚರ್ಯವಾಗಿ ಅವನ್ನು ತಪ್ಪಿಸಲು ಏನೇನೋ ಉಪಾಯ ಹೂಡುತ್ತಾನೆ. "ಎಲೈ ಹುಚ್ಚ ನೀನು ಇಂತಹ ಕುದುರೆಯನ್ನಾದುಕೊಂಬರೆಯಾಗ ಭ್ರಾಂತನಲ್ಲವೆ? ಇವಕ್ಕಿನ್ನ ಮಿಗಿಲಾದ ಕುದುರೆಗಳನ್ನು ಬಿಟ್ಟು ಇವನ್ನು ಆರಿಸುವುದೆ?" ಎನ್ನುತ್ತಾನೆ. ಆದರೆ ಸಮುದ್ರದತ್ತ, ತನಗೆ ಅವೇ ಕುದುರೆಗಳು ಬೇಕೆಂದು ಹಟ ಹಿಡಿಯುತ್ತಾನೆ. ಶೋಕನು ವಿಧಿಯಿಲ್ಲದೆ, ಆ ಕುದುರೆಗಳ ಗುಣಗಾನ ಮಾಡಿ ಸಮುದ್ರದತ್ತನಿಗೆ ಒಪ್ಪಿಸುತ್ತಾನೆ. ಅದನ್ನೆಲ್ಲ ತನ್ನ ಮಗಳೇ ಇವನಿಗೆ ಹೇಳಿಕೊಟ್ಟಿರುವಳೆಂದೂ ಅವರಿಬ್ಬರಿಗೂ ಅನುರಾಗ ಬೆಳೆದಿದೆಯೆಂದೂ ತಿಳಿಯುತ್ತದೆ. ಮೊದಲಿನಿಂದಲೂ ಸಮುದ್ರದತ್ತನ ಬಗ್ಗೆ ಒಳ್ಳೆಯ ಅಭಿಪ್ರಾಯ ಹೊಂದಿದ್ದ ಶೋಕ 'ಇವನಿಂದ ಗುಣವಂತರುಂಟೆ' ಎಂದು ಯೋಚಿಸಿ, ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡುತ್ತಾನೆ. ನಾನಾ ಉಡುಗೊರೆಗಳನ್ನು ಅಳಿಯನಿಗೆ ಕೊಟ್ಟು ಇಬ್ಬರನ್ನೂ ಕಳಿಸಿಕೊಡುತ್ತಾನೆ. ಸಮುದ್ರದತ್ತ ಅಶ್ವಗಳನ್ನು ತಂದ ವಿಷಯ ರಾಜನಿಗೆ ತಿಳಿದು, ಅವನ್ನು ಪರೀಕ್ಷಿಸಲು ವೈಯಾಳಿಯನ್ನು ಏರ್ಪಡಿಸಿ ನೋಡಿ ಮೆಚ್ಚುತ್ತಾನೆ. ಸಮುದ್ರದತ್ತ ಅವನ್ನು ರಾಜನಿಗೆ ಒಪ್ಪಿಸಲು ರಾಜ ಅವನಿಗೆ ತನ್ನ ಮಗಳನ್ನು ಕೊಟ್ಟು ಧಾರೆಯೆರೆದು, ಅರ್ಧ ರಾಜ್ಯದ ಜತೆಗೆ ಇಷ್ಟಾರ್ಥಗಳನ್ನು ಕೊಟ್ಟು ಗೌರವಿಸುತ್ತಾನೆ. ಕೆಲವು ಕಾಲ ಸುಖದಿಂದಿರುತ್ತಾರೆ.

ಅದೇ ನಗರದಲ್ಲಿ ವೃಷಭದಾಸನೆಂಬ ವ್ಯಾಪಾರಿ ಇರುತ್ತಾನೆ. ಅವನ ಹೆಂಡತಿ ಗುಣವತಿ. ಅವನು ಮಹಾ ಜಿನಭಕ್ತ. ಒಮ್ಮೆ ಅವನಿಗೆ ವಿಜಯಾರ್ಧಪರ್ವತದ ಸಿದ್ಧಕೂಟದ ಚೈತ್ಯಾಲಯಕ್ಕೆ ಹೋಗಿ ಜಿನೇಂದ್ರನಿಗೆ ವಂದಿಸಿ ಬರಬೇಕೆಂಬ ಆಸೆಯಾಗುತ್ತದೆ. ಕಾಲ್ನಡಿಗೆಯಲ್ಲಿ ಹೋಗಿ ಬರಲು ಬಹಳ ಕಾಲ ಬೇಕಾಗಿದ್ದುದರಿಂದ ಅವನು ರಾಜನ ಆಕಾಶಗಾಮಿನಿಯನ್ನು ಕೊಡುವಂತೆ ಕೇಳುತ್ತಾನೆ. ರಾಜ ಒಪ್ಪಿ ಅದರ ವಿಚಾರವನ್ನೆಲ್ಲ ತಿಳಿಸಿ, ಅದನ್ನು ಅವನು ಏರಿ ಅಭ್ಯಾಸಮಾಡಿ ಅನಂತರ ವಿಜಯಾರ್ಧ ಪರ್ವತಕ್ಕೆ ಏರಿಹೋಗುವಂತೆ ಹೇಳುತ್ತಾನೆ. ಅದರಂತೆ ವೃಷಭದಾಸನು ಕುದುರೆಯನ್ನು ತೆಗೆದುಕೊಂಡು ಹೋಗಿ ಒಂದು ನೆಲಮಾಳಿಗೆಯಲ್ಲಿಟ್ಟು ಸಾಕುತ್ತಿದ್ದು ಉತ್ಸವ

ಸಮಯದಲ್ಲಿ ಕುದುರೆಯೇರಿ ವಿಜಯಾರ್ಧಪರ್ವತಕ್ಕೆ ಹೋಗಿ ಜಿನೇಂದ್ರನಿಗೆ ನಮಿಸುತ್ತಾನೆ. ಹಿಂದಿರುಗುವಾಗ ದಾರಿಯಲ್ಲಿ ಬಸದಿಗೆ ಬಂದು ಸ್ನಾನ ಭೋಜನಗಳನ್ನು ಮಾಡಿ ತನ್ನ ಊರಿಗೆ ಬರುತ್ತಾನೆ. ಹೀಗೆಯೇ ಆಗಾಗ ಇತರ ಪುಣ್ಯಕ್ಷೇತ್ರಗಳಿಗೆ ಹೋಗಿ ಬರುತ್ತಿರುತ್ತಾನೆ.

ಅತ್ತ ಕಾಶ್ಮೀರದೇಶದ ರಾಜ ಜಿತಶತ್ರು ಸುದಂಡನ ಶತ್ರು ಅವನಿಗೆ ಗಗನಗಾಮಿನಿಯ ವಿಷಯ ತಿಳಿದು ಅದನ್ನು ತಾನು ಪಡೆಯಬೇಕೆಂದು ಬಯಸುತ್ತಾನೆ. ಜಾತ್ಯಶ್ವವನ್ನು ತಂದುಕೊಟ್ಟವನಿಗೆ ತನ್ನ ಅರ್ಧರಾಜ್ಯವನ್ನು ಕೊಡುವುದಾಗಿ ಸಾರುತ್ತಾನೆ. ಕುಂಡನೆಂಬುವನು ಅದಕ್ಕೊಪ್ಪಿ ಒಂದು ಉಪಾಯ ಮಾಡುತ್ತಾನೆ. ಉತ್ತರದೇಶಕ್ಕೆ ಹೋಗಿ ಮದನವಿಜಯಮುನಿಗಳಿಂದ ದೀಕ್ಷೆ ಪಡೆದು, ವ್ರತನಿಯಮ ನಿಷ್ಠೆಗಳೆಲ್ಲ ತಿಳಿದುಕೊಳ್ಳುತ್ತಾನೆ. ಅಣುವ್ರತಧಾರಿಯಂತೆ ವೇಷಹಾಕಿ ತಿರುಗುತ್ತ ಕೌಶಾಂಬಿಯ ಜಿನಾಲಯಕ್ಕೆ ಬರುತ್ತಾನೆ. ವೃಷಭದಾಸನು ಅವನಿಗೆ ನಮಿಸಿ, ಅವನು ಕಣ್ಣಿಗೆ ಬಟ್ಟೆ ಕಟ್ಟಿರುವುದರ ಉದ್ದೇಶವೇನೆಂದು ಕೇಳಲು ತನಗೆ 'ಕಂಗಳ ವಾಯು' ಬಂದಿದೆಯೆಂದೂ ಆರು ತಿಂಗಳಿಂದ ಅನುಭವಿಸುತ್ತಿರುವುದಾಗಿಯೂ ಹೇಳುತ್ತಾನೆ. ಆಗ ವೃಷಭದಾಸನಿಗೆ ಕರುಣೆ ಹುಟ್ಟಿ, ತಾನು ಆ ನೋವನ್ನು ಪರಿಹರಿಸುವುದಾಗಿಯೂ, ಅವನು ಘೋರತರಸಿಂಹ ಹುಲಿ ಸರ್ಪಗಳಿರುವ ಕಾಡಿನಲ್ಲಿರುವುದು ಸರಿಯಲ್ಲವೆಂದೂ ತನ್ನ ಮನೆಗೆ ಬರಬೇಕೆಂದೂ ಹೇಳಿ ಕರೆದುಕೊಂಡು ಬರುತ್ತಾನೆ. ವೃಷಭದಾಸನ ಸ್ನೇಹಿತರು, ಬಂಧುಗಳು ಯತಿವೇಷಿಯ ಕಾಲ ದೇಶ ಗುಣಗಳನ್ನು ತಿಳಿಯದೆ ಜಾತ್ಯಶ್ವವಿರುವ ಮನೆಯಲ್ಲಿ ಅವನನ್ನು ಇಟ್ಟುಕೊಳ್ಳುವುದು ಸರಿಯಲ್ಲವೆಂದು ಹೇಳುತ್ತಾರೆ. ಆದರೆ ವೃಷಭದಾಸನು "ಮಾಪುರುಷರ ಕಣ್ಣ ರೋಗಮಾದೊಡೆಯೆನ್ನ ಪಾಪ ಪಿಂಗುವುದು" ಎನ್ನುತ್ತಾನೆ. ಕೆಲವು ಕಾಲ ಕಳೆಯುತ್ತದೆ,

ಒಂದು ರಾತ್ರಿ ವೃಷಭದಾಸನು ನಿದ್ರೆಯಲ್ಲಿದ್ದಾಗ ಕುಂಡನು ಕುದುರೆಯೇರಿ ಹೊರಟುಹೋಗುತ್ತಾನೆ. ತನ್ನನ್ನೇರಿರುವವನು ತನ್ನ ಒಡೆಯನಲ್ಲವೆಂದು ತಿಳಿದ ಕುದುರೆ ಕುಂಡನನ್ನು ಭೂಮಿಗೆ ಕೆಡವಿ ವಿಜಯಾರ್ಧಪರ್ವತಕ್ಕೆ ಹೋಗುತ್ತದೆ. ಕುಂಡನು ಕೆಳಗೆ ಬಿದ್ದು ಸತ್ತು ಏಳನೆಯ ನರಕವನ್ನು ಸೇರುತ್ತಾನೆ. ಇತ್ತ ವೃಷಭದಾಸನು ಕುದುರೆಯನ್ನು ಕಾಣದೆ ಕಂಗಾಲಾಗುತ್ತಾನೆ. ಆದರೆ ಕಳ್ಳ ಸತ್ತುಬಿದ್ದಿರುವುದನ್ನು ಕಂಡು, ರಾಜನು ತನಗೆ ಶಿಕ್ಷಿಸುವನೆಂದು ಬಗೆಯುತ್ತಾನೆ. ಬಂಧುಗಳ ಮಾತನ್ನು ತಾನು ಮೀರಿದುದಕ್ಕೆ ಪಶ್ಚಾತ್ತಾಪಪಡುತ್ತಾನೆ. ಕುದುರೆ ಹೋದುದನ್ನು ತಿಳಿದ ರಾಜ ಇವನ ಮೇಲೆ ಕೋಪಕಾರುತ್ತಾನೆ. "ಬಿಡದೆ ಆ ಪಾಪಿಯ ಹಿಡಿತಂದೀಕ್ಷಣ ಕಡಿಖಂಡವ ಮಾಡಿ" ಎನ್ನುತ್ತಾನೆ. ವೃಷಭದಾಸನು ತನಗುಂಟಾದ ಉಪಸರ್ಗ ಕಳೆಯುವವರೆಗೆ ಅನ್ನಾಹಾರಗಳನ್ನು ತೊರೆದು ಪ್ರಾಣಬಿಡುವುದಾಗಿ ನಿಶ್ಚಯಿಸುತ್ತಾನೆ.

ಅದನ್ನು ಕಂಡ ಜನರೆಲ್ಲ ಗೋಳೋ ಎಂದು ಅಳುತ್ತಾರೆ. ರಾಜಭಟರು ಖಡ್ಗ ಹಿಡಿದು ಯಮದೂತರಂತೆ ಬಂದು ವೃಷಭದಾಸನನ್ನು ಬಸದಿಯಿಂದ ಹೊರಹೊರಡುವಂತೆ ಗದರಿಸುತ್ತಾರೆ. ಆದರೆ ಅವರನ್ನು ಯಕ್ಷದೇವಿಯು ಸ್ತಂಭಿಸುತ್ತಾರೆ. ರಾಜನು ಹೊರಗೆ 'ತಡವೇಕೆ ಕಳ್ಳನ ಹಿಡಿತನ್ನಿ' ಎಂದು ಅರ್ಭಟಿಸುತ್ತಿರುತ್ತಾನೆ.

ಅತ್ತ ಕುದುರೆ ನಿತ್ಯದಂತೆ ವಿಜಯಾರ್ಧ ಪರ್ವತದಲ್ಲಿ ದೇವರನ್ನು ಬಲವಂದು ವಂದಿಸುತ್ತದೆ. ಚಾರಣಮುನಿಗಳು ಅದು ಬಂದ ರೀತಿಯನ್ನು ತಿಳಿದುಕೊಂಡು ಅದನ್ನು ರಾಜನಿಗೆ ಒಪ್ಪಿಸಿ, ವೃಷಭದಾಸನ ಉಪಸರ್ಗವನ್ನು ಹೋಗಲಾಡಿಸುವಾಗ. ಚಿಂತಾಗತಿಯೆಂಬ ಖೇಚರನನ್ನು ಕಳುಹಿಸುತ್ತಾರೆ. ಅವನು ಕುದುರೆಯೇರಿ ಆಕಾಶ ಮಾರ್ಗವಾಗಿ ಬರುತ್ತಿರುವಾಗ ಕಂಡ ಸತ್ತುಬಿದ್ದಿರುವುದನ್ನೂ ಜನಗಳ ಗುಂಪು ಸೇರಿರುವುದನ್ನೂ ಕಾಣುತ್ತಾನೆ. ಆಕಾಶಮಾರ್ಗದಲ್ಲಿ ಬರುತ್ತಿದ್ದ ಕುದುರೆಯನ್ನು ಕಂಡ ಎಲ್ಲರೂ ಹರ್ಷಗೊಳ್ಳುತ್ತಾರೆ. ಚಿಂತಾಗತಿ ಕುದುರೆಯಿಂದಿಳಿದು ಭಕ್ತಿಯಿಂದ ಬಲವಂದು ಜಿನನಿಗೆ ನಮಿಸಿ, ತಪೋಮಗ್ನನಾಗಿದ್ದ ವೃಷಭದಾಸನನ್ನು ಎಚ್ಚರಿಸುತ್ತಾನೆ. ಕುದುರೆಯನ್ನು ಕಂಡ ರಾಜನಿಗೆ ಸಂತೋಷವಾಗುತ್ತದೆ. ಅವನ ವೃಷಭದಾಸನ ಮೇಲಿನ ಕೋಪ ಮಾಯವಾಗುತ್ತದೆ. ರಾಜನು ವೃಷಭದಾಸನಿಗೆ ವಂದಿಸಿ ಅವನ ಕ್ಷಮೆ ಬೇಡುತ್ತಾನೆ. ಪಶ್ಚಾತ್ತಾಪವಾಗುತ್ತದೆ. ವೃಷಭದಾಸನ ಭಕ್ತಿಯನ್ನು ಕಂಡು ಅನೇಕರಿಗೆ ಸಮ್ಯಕ್ತ್ವ ಉಂಟಾಗುತ್ತದೆ. ರಾಜ, ಅವನ ಪತ್ನಿಯರು, ಮಕ್ಕಳು, ಪರಿವಾರದವರು, ಸ್ನೇಹಿತರು, ವೃಷಭದಾಸ, ಸಮುದ್ರದತ್ತ, ಸುರದೇವ ಮುಂತಾದವರು ದೀಕ್ಷೆ ಪಡೆಯುತ್ತಾರೆ.

ಇದನ್ನು ಕಂಡು ತನಗೆ ಸಮ್ಯಕ್ತ್ವ ಉಂಟಾದುದಾಗಿ ವಿದ್ಯುಲ್ಲತೆ ಹೇಳಲು, ಎಲ್ಲರೂ ಒಪ್ಪುತ್ತಾರೆ. ಕುಂದಲತೆ ಮಾತ್ರ ಒಪ್ಪುವುದಿಲ್ಲ. ಮರೆಯಲ್ಲಿ ನಿಂತು ಈ ಈ ಕಥೆಗಳನ್ನೆಲ್ಲ ಕೇಳುತ್ತಿದ್ದ ಉದಿತೋದಯರಾಜ ಮತ್ತು ಅವನ ಮಂತ್ರಿ ಸಂತೋಷಗೊಳ್ಳುತ್ತಾರೆ. ಆದರೆ ಕುಂದಲತೆಯನ್ನು ಶಿಕ್ಷಿಸಬೇಕೆಂದುಕೊಂಡು ತಮ್ಮ ತಮ್ಮ ಮನೆಗೆ ಹೋಗುತ್ತಾರೆ. ಚೋರನು ಮನಸ್ಸಿನಲ್ಲಿಯೇ ನಕ್ಕು ಅತ್ತ ಸರಿಯುತ್ತಾನೆ.

ಬೆಳಗಾಗಲು ರಾಜ ಒಡ್ಡೋಲಗಗೊಳ್ಳುತ್ತಾನೆ. ಮಂತ್ರಿ ಮನ್ನೆಯರೆಲ್ಲ ಸೇರುತ್ತಾರೆ. ರಾಜನು ಚರರನ್ನು ಕರೆದು 'ಅರ್ಹದ್ದಾಸನ ಸತಿಯರು ಹೇಳಿದ ಸಮ್ಯಕ್ತ್ವದ ಕಥೆಗಳನ್ನು ಹಳಿದು ಮೆಚ್ಚದಿದ್ದ, ಅವನ ಕಿರಿಯ ಮಡದಿ ಕುಂದಲತೆಯನ್ನು ಎಳೆ ತನ್ನಿರಿ' ಎನ್ನಲು ಚತುರನಾದ ಮಂತ್ರಿಯು, "ಪರದನ ಹೆಂಡತಿಯನ್ನು ಇಲ್ಲಿಗೆ ಕರೆಸುವುದಕ್ಕಿಂತ ನಾವೇ ಅಲ್ಲಿಗೆ ಹೋಗಿ ಸತ್ಯಸಂಗತಿಯನ್ನು ತಿಳಿಯುವುದು ಉಚಿತ" ಎನ್ನುತ್ತಾನೆ. ಆ ಸಲಹೆಯನ್ನು ಒಪ್ಪಿದ ರಾಜ ಮಂತ್ರಿಯೊಂದಿಗೆ ಅರ್ಹದ್ದಾಸನ ಮನೆಗೆ ಬರುತ್ತಾನೆ. ಅರ್ಹದ್ದಾಸನಿಗೆ ಆತ್ಯಾಶ್ಚರ್ಯವಾಗಿ ರಾಜನನ್ನು ಭಯಭಕ್ತಿ

ಯಿಂದ ಸತ್ಕರಿಸುತ್ತಾನೆ. ಆಗ ರಾಜನು ಅರ್ಹದ್ದಾಸನ ಮೂಲಕ ಕುಂದಲತೆಯನ್ನು ಕರೆಸುತ್ತಾನೆ. ಕುಂದಲತೆ ಬಂದು ರಾಜನಿಗೆ ವಂದಿಸುತ್ತಾಳೆ. ಆಗ ರಾಜ ಅವಳನ್ನು ಕುರಿತು "ಎಲೈ ಕುಂದಲತೆಯೆ, ಮಿತ್ರಶ್ರೀ ಮುಂತಾದವರು ಹೇಳಿದ ಕಥೆಗಳನ್ನು ನೀನು ಮೆಚ್ಚದಿರಲು ಕಾರಣವೇನು? ಅವರು ಹೇಳಿದುದು ಸುಳ್ಳೆ? ಜಿನದತ್ತೆ ಸೋಮೆ ವೃಷಭದಾಸ ಮುಂಡಿಕೆ ಪದ್ಮಾವತಿ ಉಮಾಯ ವಿಶ್ವಭೂತಿ ಮುಂತಾದವರ ಮಹಿಮೆಗಳೆಲ್ಲ ಹುಸಿಯೆ?' ಎನ್ನಲು ಕುಂದಲತೆ ಹೀಗೆ ಉತ್ತರಿಸುತ್ತಾಳೆ: "ಭೂಪತಿಯೆ, ನಾನು ಹಾಗೆ ಹೇಳಲು ಕಾರಣವಿದೆ ಕೇಳು. ಹಿಂದೆ ದೀಕ್ಷೆ ಪಡೆದು ಮೋಕ್ಷಹೊಂದಿದವರ ಕಥೆಗಳನ್ನು ಕೇಳಿ, ತಾವು ಸಂಸಾರ ಸುಖದಲ್ಲಿಯೇ ತೊಡಗಿದ್ದು, ತಮಗೆ ಸಮ್ಯಕ್ತ್ವ ಉಂಟಾಗಿದೆ ಎಂದು ಹೇಳಿದರೆ ಅದನ್ನು ನಂಬಬಹುದೆ? ಹಿಂದೆ ಮೋಕ್ಷ ಪಡೆದವರು, ಸಂಸಾರಸುಖಗಳನ್ನು ತೊರೆದು ತಪಸ್ಸನ್ನಾಚರಿಸಿದರು. ಆದರೆ ಇವರೆಲ್ಲರೂ ಸಂಸಾರದಲ್ಲಿಯೇ ಇದ್ದು ತಮಗೆ ಸಮ್ಯಕ್ತ್ವ ಉಂಟಾಗಿದೆ ಎನ್ನುತ್ತಾರೆ; ಇದನ್ನು ನಂಬಬಹುದೆ?' ಎನ್ನುತ್ತಾಳೆ. ಆಗ ರಾಜನು ಅವಳ ವಾದಕ್ಕೆ ತಲೆದೂಗಿ, 'ಹಾಗಾದರೆ ಮೋಕ್ಷಪಡೆಯುವ ನಿಜವಾದ ದಾರಿ ಯಾವುದು ತಿಳಿಸು' ಎನ್ನಲು ಕುಂದಲತೆ ಹೀಗೆ ಹೇಳುತ್ತಾಳೆ : "ಹೊರಗಿನ ಹತ್ತು ಒಳಗಿನ ಹದಿನಾಲ್ಕು ಪರಿಗ್ರಹಗಳನ್ನು ತೊರೆಯಬೇಕು, ಜಿನದೀಕ್ಷೆಯನ್ನು ಪಡೆಯಬೇಕು, ಮೂರು ಮೂಢಗಳು ಆರು ಅನಾಯತ ಎಂಟು ಶಂಕೆ ಎಂಟು ಮದಗಳನ್ನು ದೂರಸರಿಸಬೇಕು. ದರುಸನ ಜ್ಞಾನ ಚಾರಿತ್ರ ಈ ಮೂರು ಮೋಕ್ಷಲತೆಯ ಬೀಜಗಳು. ಹತ್ತು ಧರ್ಮಗಳು, ಹದಿನಾರು ಭಾವನೆ, ಹನ್ನೆರಡು ಪ್ರೇಕ್ಷೆಗಳನ್ನು ಸ್ಮರಿಸಬೇಕು; ತಪ ಮಾಡಬೇಕು. ದಾನ ಪೂಜೆ ಶೀಲ ಉಪವಾಸಗಳನ್ನು ಆಚರಿಸಬೇಕು. ಏಳು ವ್ಯಸನಗಳನ್ನು ತೊರೆಯಬೇಕು. ಪಂಚೇಂದ್ರಿಯ ನಿಗ್ರಹ ಮಾಡಬೇಕು. ಸಿರಿಯೆಂಬುದು ನೀರಗುಳ್ಳೆ, ಕಾಮನ ಬಿಲ್ಲು ಮಂಜಿನನೆರವಿ ಬಿಸಿಲಕುದುರೆ ಎಂದು ನಂಬಬೇಕು. ನಿರ್ಮಲ ಜಿನದೀಕ್ಷೆ ಧರಿಸಿ ಧರ್ಮತೀರ್ಥಗಳನ್ನು ದರ್ಶಿಸಬೇಕು. ಪಾತ್ರವರಿತು ದಾನ ಮಾಡಬೇಕು. ಅದಲ್ಲದೆ ಸಂಸಾರಸಾಗರದಲ್ಲಿ ಮುಳುಗಿದ್ದರೆ ಸ್ವರ್ಗ ಸಿಗದು" ಎನ್ನಲು ಆ ನುಡಿಗಳನ್ನು ಕೇಳಿದ ರಾಜನ ಅಂತರಂಗದಲ್ಲಿ ವೈರಾಗ್ಯ ಮೂಡುತ್ತದೆ. ಕುಂದಲತೆಯನ್ನು ಮೆಚ್ಚಿ, ತನ್ನ ಮನೆಗೆ ಹೋಗಿ ಮಗನಿಗೆ ರಾಜ್ಯಭಾರ ವಹಿಸಿ ಬಂದು ಶುಭವಿನ ಜಿನಾಲಯಕ್ಕೆ ಹೋಗಣಧರರೆಂಬ ಮುನಿಗಳಿಂದ ದೀಕ್ಷೆ ಪಡೆಯುತ್ತಾನೆ. ಅವನೊಂದಿಗೆ ಅವನ ರಾಣಿ, ಮಂತ್ರಿ, ಅರುಹದ್ದಾಸ, ರಾಜಕುಮಾರರು ಮುಂತಾದವರು ದೀಕ್ಷೆ ಪಡೆಯುತ್ತಾರೆ.

# ಪಾಯಣ್ಣವ್ರತಿಯ ಕಾಲದ ಜನಜೀವನ

ಪಾಯಣ್ಣವ್ರತಿಯ ಸಮ್ಯಕ್ತ್ವಕೌಮುದಿ ಒಂದು ಜೈನಧರ್ಮಬೋಧಕ ಕಥಾ ಕೋಶವಾಗಿದ್ದರೂ ಕಾವ್ಯದಲ್ಲಿ ಅಲ್ಲಲ್ಲಿ ಕವಿಯ ಕಾಲದ ಜನಜೀವನದ ಕೆಲವು ಮುಖಗಳನ್ನು ಕಾಣಬಹುದಾಗಿದೆ. ಅರ್ಥಾತ್ ಆ ಕಾಲದ ಜನರ ಸಂಪ್ರದಾಯಗಳು, ರೀತಿ ರಿವಾಜುಗಳು, ವ್ಯವಹಾರ, ವೇಷಭೂಷಣಗಳು, ನಂಬಿಕೆಗಳು, ಆಚರಣೆಗಳು, ರಾಜಕೀಯ ವಿಚಾರಗಳು ಮುಂತಾದುವನ್ನು ಸ್ವಲ್ಪಮಟ್ಟಿಗೆ ಅರ್ಥಮಾಡಿಕೊಳ್ಳಬಹುದಾಗಿದೆ. ಕವಿ ಕೊಡುವ ಚಿತ್ರಣ ಬೇರಾವುದೂ ಆಗಿರದೆ ಅದು ಕನ್ನಡನಾಡಿನ ಮತ್ತು ನಾಡವರದೇ ಆಗಿದೆ. ಕವಿ ಜೈನನಾದುದರಿಂದ ಜೈನಸಮಾಜದ ಚಿತ್ರಗಳು ವಿವರವಾಗಿವೆ.

ಅಂದಿನ ಜನರು ದಾನ ಪೂಜೆ ಶೀಲೋಪವಾಸಗಳನ್ನು ಕ್ರಮತಪ್ಪದೆ ಮಾಡುತ್ತಿದ್ದರು. ವ್ಯಾಪಾರಿಗಳು ಸಾಗರದಾಚೆ ದೇಶಗಳಿಗೆ ಹೋಗಿ ವ್ಯಾಪಾರದಿಂದ ಹಣಗಳಿಸಿ ತಂದು ಮನವಚನ ಕಾಯಶುದ್ಧರಾಗಿ ಜೀವನ ನಡೆಸುತ್ತಿದ್ದರು. ಅವರು ಪಾಪ ಮಾಡರು. ಪರಹಿತಚರಿತರು, ಕೋಪವರ್ಜಿತರು, ಕೋವಿದರು. ಪರಸ್ತ್ರೀಯರನ್ನು ಸೋದರಿಯರೆಂದು ಭಾವಿಸುತ್ತಿದ್ದರು. ತುಂಡುಮಾತಾಡರು. ಕೊಲೆ ಹುಸಿ ಕಳವು ಅವರಿಗೆ ಗೊತ್ತಿಲ್ಲ. ದಾನಧರ್ಮಗಳಲ್ಲಿ ಆ ಜನರಿಗೆ ಅಪಾರ ಆಸಕ್ತಿ. ದಾನಗಳಲ್ಲೆಲ್ಲ ಅನ್ನದಾನವೇ ಶ್ರೇಷ್ಠವೆಂದು ತಿಳಿದಿದ್ದ ಅವರು ನಿತ್ಯ ಅನ್ನದಾನ ಮಾಡುತ್ತಿದ್ದರು 'ಕುಪಾತ್ರಕ್ಕೆ ಇತ್ತ ದಾನದ ಫಲ ವ್ಯರ್ಥ' ಎಂದು ತಿಳಿದಿದ್ದ ಅವರು ಪಾತ್ರವರಿತು ದಾನ ಮಾಡುತ್ತಿದ್ದರು, ''ಯಜ್ಞ ಮಾಡಿಸೆ ಮುಂದಕ್ಕೆ ದೇವೇಂದ್ರ ಪದವಹುದು'' ಎಂದು ನಂಬಿ ಆಚರಿಸುತ್ತಿದ್ದರು. 'ತಪದ ಕಾರಣವಾಗಿ ತನುವಿರಬೇಕು' ಎಂಬುದೇ ಅವರ ಧ್ಯೇಯವಾಗಿತ್ತು. ''ಜಲವಿಲ್ಲದ ಬೆಳೆ ಜೀತವಿಲ್ಲದ ಭಟ ಫಲವ ಪಡೆಯುವ ಭೂರುಹವು । ಸುಲಲಿತ ದಯವಿಲ್ಲದ ತಪ ಆಹಾರ ಬಲುಹು ಗುಂದಿದ ತನು ಲಯವು'' ಎಂದು ತಿಳಿದು ಅವುಗಳನ್ನು ಪೋಷಿಸುತ್ತಿದ್ದರು.

ಆ ಕಾಲದ ರಾಜಭವನ ಇಂದ್ರನ ಭವನಕ್ಕೆ ಸರಿಮಿಗಿಲೆನಿಸುತ್ತಿತ್ತು. ಪುರವನ್ನು ವನ ಬಳಸಿರುತ್ತಿದ್ದಿತು. ವನದಲ್ಲಿ ಕದಳಿ ಖರ್ಜೂರ ದಾಡಿಮ ದ್ರಾಕ್ಷಿ ಕಿತ್ತಳೆ ಮಾವು ಹೀಗೆ ನಾನಾ ಬಗೆಯ ಹಣ್ಣಿನ ಮರಗಳೂ ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ ಸುರಹೊನ್ನೆ ಕೇತಕಿ ತಿಲಕ ಬಕುಳ ಮುಂತಾದ ಹೂಗಿಡಗಳೂ ಅಲ್ಲಲ್ಲಿ ನೈದಿಲು ತಾವರೆಗಳಿಂದ ತುಂಬಿದ ಸರೋವರಗಳೂ ಬಳಸಿರುತ್ತಿದ್ದವು. ವನಗಳಲ್ಲಿ ಲತೆಯ ಮಾಡಗಳೂ ಮರಗಳ ತಳಗಳಲ್ಲಿ ವಜ್ರವೇದಿಕೆಗಳೂ ಇರುತ್ತಿದ್ದುವು. ಪುರದ ಬದಿಯಲ್ಲಿ ಶಾಲಿಯವನ, ಅಲ್ಲಿಯ ಬತ್ತದ ತೆನೆಗಳಿಗೆ ಮುತ್ತುವ ಗಿಳಿಗಳು, ಅವನ್ನು ಸೋವುವ ಪಾಮರಿಯರು

ಇವು ಆ ಪುರಕ್ಕೆ ಶೋಭೆಯನ್ನಿತ್ತಿದ್ದುವು. ಪುರವ ಸುತ್ತಲೂ ಕೋಟೆ, ಕೋಟೆಯು ಅಷ್ಟದಿಕ್ಕುಗಳಲ್ಲಿಯೂ ಅಟ್ಟಣೆಗಳಿದ್ದುವು.

ಆ ಪುರದ ಮಧ್ಯೆ ರಾಜಭವನ. ಅದರ ಸುತ್ತಲೂ ನವರತ್ನದ ಮನೆಗಳು, ಗಗನಚುಂಬಿಯಾದ ಕಿರುಮಾಡ, ಆವರಣದಲ್ಲಿ ಭೋಜನಶಾಲೆ ಮಜ್ಜನಶಾಲೆ ಜಪ ಶಾಲೆ ಓಲಗಶಾಲೆ ನಾಟಕಶಾಲೆ ರಾಜರಾಣಿಯರ ಗೃಹಗಳು ಇದ್ದುವು. ಅವೆಲ್ಲವೂ ಮುತ್ತು ರತ್ನಗಳಿಂದ ನಿರ್ಮಿತವಾದುವು. ಅಲ್ಲದೆ ಅವು ಕಸ್ತೂರಿಕಾರಣೆ, ಮುತ್ತಿನ ರಂಗವಲ್ಲಿ ನೀಲದ ನೆಲಗಟ್ಟುಗಳಿಂದ ಶೋಭಿಸುತ್ತಿದ್ದುವು. ಅಂತಹ ಭವನಗಳಲ್ಲಿ ಎತ್ತೆತ್ತಲೂ ಮತ್ತಗಾಮಿನಿಯರ ಕಡೆಗಣ್ಣ ಕಾಂತಿ ತುಂಬಿರುತ್ತಿದ್ದಿತು. ಬಾಲಪ್ರಾಯದ ಭಾಮಿನಿಯರು ಲೀಲೆಯಿಂದ ಬತ್ತೀಸರಾಗಗಳನ್ನು ಹಾಡುತ್ತಿರುತ್ತಿದ್ದರು.

ಇನ್ನು ಆ ಪುರದ ಪರದರ ಗೃಹಗಳನ್ನು ವರ್ಣಿಸಲು ಅಸದಳ. ಅವೂ ಸಹ ರತ್ನಖಚಿತವಾದುವು. ಅವಕ್ಕೆ ಪಚ್ಚೆಯ ತೊಲೆ, ಹವಳದ ಬೋಧಿಗೆ, ವಜ್ರದ ಹಲಗೆಯ ಮುಚ್ಚಳ, ನೀಲದನೆಲ.

ಆ ಪುರವ ಪೇಟೆಯಲ್ಲಿ ಒಂದೆಡೆ ಗಂಧಿಗರಂಗಡಿಗಳಿದ್ದರೆ ಇನ್ನೊಂದೆಡೆ ದೇಶ ವಿದೇಶಗಳ ನಾನಾ ವಸ್ತುಗಳ ಸಾಲುಗಳು. ವಿವಿಧದ ಮೂಲಿಕೆಗಳು ಲೋಹಗಳು ಪಾಷಾಣಗಳ ಅಂಗಡಿಸಾಲುಗಳು ಮತ್ತೊಂದೆಡೆಯಲ್ಲಿದ್ದರೆ ಬೇರೊಂದೆಡೆ ಚೀಲ ಭರಣಿ ಪಾಂಡ ಪೊಟ್ಟಣ ಪುಡಿ ಶೀಲುಕುಪ್ಪಿಗೆಗಳ ಅಂಗಡಿಗಳಿರುತ್ತಿದ್ದುವು. ಮಗುದೊಂದೆಡೆ ಜವಳಿಯಂಗಡಿಗಳು. ಅವುಗಳಲ್ಲಿ ಪಟ್ಟೆಪೀತಾಂಬರ, ಚೀನಿದುಕುಲಗಳು, ಕಟ್ಟಂಚಿನ ದೋತ್ರ, ಮುಂಡಾಸಗಳು ತುಂಬಿರುತ್ತಿದ್ದುವು. ಅವುಗಳ ಬದಿಯಲ್ಲಿ ಕಂಚುಗಾರರ ಅಂಗಡಿಗಳು. ಅವುಗಳಲ್ಲಿ ಕಂಚಿನಕಳಸ, ಕನ್ನಡಿ, ತಟ್ಟೆ, ಹರಿವಾಣ ಮುಂತಾದ ವಸ್ತು ಗಳನ್ನು ಮಾರುತ್ತಿದ್ದರು.

ಎಲ್ಲ ಕಾಲಗಳಂತೆ ಇವನ ಕಾಲದಲ್ಲಿಯೂ ಸೂಳೆಗೇರಿಗಳಿದ್ದುವು. ಸೂಳೆಯರು ಧನಿಕವಿಟರನ್ನು ವಂಚಿಸಿ ಸುಲಿಯುತ್ತಿದ್ದ ವಿಧಾನಗಳು ಹಲವಾರು. ಸೂಳೆಗೆ ಹೋದ ವಿಟರು ತಮ್ಮ ಸಂಪತ್ತನ್ನೆಲ್ಲ ಅವರಿಗೆ ತೆತ್ತು ಅನಂತರ ನಿರ್ಗತಿಕರಾಗಿ ಸೂಳೆಯರ ಮನೆಗೆಲಸದವರಾಗುತ್ತಿದ್ದವರು ಅನೇಕರು. ಅನೇಕ ಮುದಿಸೂಳೆಯರು ತಮ್ಮ ಮುದಿ ಗೂದಲಿಗೆ ಕಪ್ಪನ್ನು ಹಚ್ಚಿಕೊಂಡು ವಿಟರನ್ನು ಸುಲಿಯುತ್ತಿದ್ದರು.

ಆ ಕಾಲದ ಮದುವೆಯ ವಿಧಾನ ಹಾಗೂ ಸಂಪ್ರದಾಯಗಳನ್ನು ಕವಿ ಕೆಲವೆಡೆ ಸೊಗಸಾಗಿ ಚಿತ್ರಿಸಿದ್ದಾನೆ. ಮದುವೆಯ ಸಮಯದಲ್ಲಿ ನೀರೆಯರು ಮದುವೆಮನೆ ಯನ್ನು ಶೃಂಗರಿಸಿ ವಾದ್ಯಗಳು ಮೊಳಗುತ್ತಿರುವಾಗ ವರನಿಗೆ ಮಂಗಲಸ್ನಾನ ಮಾಡಿ ಸುತ್ತಿದ್ದರು. ಮದುಮಗನನ್ನು ಹಾರ ಪದಕ ಹೀರಾವಳಿ ಮುದ್ರಿಕೆ ತೋರಮುತ್ತಿನ

ಚವುಕಳಿ ಸರಪಣಿ ಲುಳಿಸರ ಹವ್ಯಾರತಾತಿ ಚಿಮ್ಮುರಿ ಚೀನಿಸುತ್ತಿಂಗಿ ಪಟ್ಟೆಪಟ್ಟೆಡ
ಬಾಸಿಂಗ ಮುಂತಾದುವುಗಳಿಂದ ಶೃಂಗರಿಸುತ್ತಿದ್ದರು. ಇನ್ನೊಂದೆಡೆ ನೀರೆಯರು
ವಧುವಿಗೂ ಸಹ ಮಂಗಲಸ್ನಾನ ಮಾಡಿಸಿ ಮುತ್ತಿನಹಾರ ಮೂಗುತಿ ಹರಳೋಲೆ
ಕಾಲುಂದುಗೆ ಗೆಜ್ಜೆ ಕಿರಿಪಿಲ್ಲಿ ಮೆಟ್ಟಿಕ್ಕಿ. ಮುತ್ತಿನ ಹಸ್ತಗಟ್ಟು ರತ್ನದ ಮುದ್ರಿಕೆ ಹಾರ
ಪದಕ ಹರಳೋಲೆ ಮುತ್ತಿನಮೂಗುತಿ ವಜ್ರಸರ ಸರಪಣಿ ಕಂಕಣ ಕಡಗ ಹೀಗೆ
ಷೋಡಶಾಭರಣಗಳಿಂದ ಅಲಂಕರಿಸುತ್ತಿದ್ದರು. ಅನಂತರ ಇಂದುಮುಖಿಯರು ಮದು
ಮಗನನ್ನು ಕರೆತಂದು ಹಸೆಯಲ್ಲಿ ಕುಳ್ಳಿರಿಸಿ ಕಮ್ಮೆಣ್ಣೆಯನ್ನು ಹಚ್ಚುತ್ತಿದ್ದರು. ಮಂಗಳ
ವಾದ್ಯ ಮೊಳಗುತ್ತಿರಲು ಚಿನ್ನದ ಕಳಶದಲ್ಲಿ ಪನ್ನೀರನ್ನು ಎರೆದು ಸ್ನಾನಮಾಡಿಸು
ತ್ತಿದ್ದರು. ಅನಂತರ ಮೇಲುಚೌಕಳಿ ಕಂಠಮಾಲೆ ಕಡಗರತ್ನ ಕಾಲುಂಗುರಗಳನ್ನು
ತೊಡಿಸಿ ಸಿಂಗರಿಸುತ್ತಿದ್ದರು. ವಧುವನ್ನು ಚಿನ್ನದ ಹಸೆಮಣೆಯಲ್ಲಿ ಕುಳ್ಳಿರಿಸಿ,
ಮುಂಗುರುಳಿಗೆ ಕಮ್ಮೆಣ್ಣೆಯನ್ನು ಹಚ್ಚಿ ಮಂಗಳವಾದ್ಯ ಮೊಳಗುತ್ತಿರಲು ಕಾಶೀಜಲ
ದಿಂದ ನೀರೆರೆಯುತ್ತಿದ್ದರು. ಅದಾದ ನಂತರ ದೇವಾಂಗದ ಸೀರೆ ಚಿತ್ರದ ರವಕೆಗಳನ್ನು
ಉಡಿಸಿ ಹಾರ ಪದಕ ಹರಳೋಲೆ ವಜ್ರದಸರ ತೋರಮುತ್ತಿನ ಮೂಗುತಿ ಭಾರಿಯ
ಸರಪಣಿ ಕಾಂಚೀದಾಮ ಕಾಲಂದುಗೆ ಗೆಜ್ಜೆ ಕಿರುಪಿಲ್ಲಿ ಮೆಂಟಿಕೆ ಮೇಲುಮುತ್ತಿನ ಹಸ್ತ
ಗಟ್ಟು ಸಾಲುಕಟ್ಟುಗೆಯ ಸರ ರತ್ನಮುದ್ರಿಕೆಗಳನ್ನು ತೊಡಿಸಿ ಕಸ್ತೂರಿತಿಲಕ ಚಂದನ
ದೆಣ್ಣೆಗಳಿಂದ ಅಲಂಕರಿಸಿ ಮಲ್ಲಿಗೆದಂಡೆಯನ್ನು ಮುಡಿಸುತ್ತಿದ್ದರು. ಘಟಿಕಾಪಾತ್ರೆ
ಯಲ್ಲಿ ಘಳಿಗೆಬಟ್ಟಲನ್ನು ನೋಡುತ್ತಿರುತ್ತಿದ್ದ ಪುರೋಹಿತರು ಲಗ್ನದ ಹೊತ್ತು
ಸಮೀಪಿಸಿದ ಕೂಡಲೇ ತಿಳಿಸುತ್ತಿದ್ದರು. ಆಗ ಬಾಸಿಂಗ ಸೂಡಿದ ಮದುಮಗ ಮದುವೆ
ಮಂಟಪಕ್ಕೆ ಬರುತ್ತಿದ್ದ. ಚಪ್ಪರದಡಿಯಲ್ಲಿ ಬ್ರಾಹ್ಮಣರು ಅಕ್ಷತೆಗಳನ್ನು ಹಾಕುತ್ತಿ
ರುವಾಗ ಮದುಮಗ ಶಾಲೀತಂಡುಲದ ಮೆಟ್ಟಕ್ಕಿ ಗೂಡೆಯಲ್ಲಿ ಬಲಗಾಲನ್ನು ಇಟ್ಟು
ನಿಲ್ಲುತ್ತಿದ್ದ. ಅತ್ತ ಶೃಂಗಾರವಾದ ವಧುವನ್ನು ಸಖಿಯರು ಮಂಟಪಕ್ಕೆ ಕರೆತಂದು
ಹಸೆಕಲ್ಲನ್ನು ಏರಿಸುತ್ತಿದ್ದರು. ಅಕ್ಕಪಕ್ಕಗಳಲ್ಲಿ ಛತ್ರದ ಮತ್ತು ಅಕ್ಕಿಯ ತಟ್ಟೆಗಳನ್ನು
ಹಿಡಿದು ಸ್ತ್ರೀಯರು ನಿಂತಿರುತ್ತಿದ್ದರು. ಶುಭಲಗ್ನ ಕೂಡಿಬಂದಿತು ಎಂಬುದನ್ನು
ಸೂಚಿಸಲು ವಿಪ್ರರು ಗಂಟೆಯನ್ನು ಬಾರಿಸಲು ವಾದ್ಯಗಳು ಮೊಳಗುತ್ತಿದ್ದವು. ಆಗ
ಸತಿಪುರುಷರು ವಧೂವರರನ್ನು ಸುತ್ತಲೂ ಮುತ್ತಿ ಅವರ ಹಣೆಗಳಿಗೆ ಮುತ್ತಿನ ಅಕ್ಷತೆ
ಇಡುತ್ತಿದ್ದರು. ವಿಪ್ರರು ಚಪ್ಪರದಡಿಯಲ್ಲಿ ಹವನ ಮಾಡುತ್ತಿರಲು ಮದುಮಗನ
ಹಸ್ತದಲ್ಲಿ ಮದನವತಿ ತನ್ನ ಹಸ್ತವಿಟ್ಟು ತ್ರಿಪ್ರದಕ್ಷಿಣೆ ಮಾಡುತ್ತಿದ್ದರು. ಮಾಂಗಲ್ಯ
ಧಾರಣೆ ಮುಗಿದ ಮೇಲೆ ಗಂಡು ಹೆಣ್ಣಿನ ಬಲಗೈ ಬೆರಳನ್ನು ತನ್ನ ಎಡಗೈಯಿಂದ ಹಿಡಿದು
ಮನೆಗೆ ಹೋಗುತ್ತಿದ್ದನು. ಅನಂತರ ಹೆಣ್ಣಿನ ತಾಯಿ ಮುತ್ತೈದೆಯರಿಗೆ ಫಲ ಪುಷ್ಪ
ಗಂಧ ತಾಂಬೂಲ ಮತ್ತು ಪರಿಮಳಗಳಿಂದ ತುಂಬಿದ ಬಾಗಿನ ಕೊಡುತ್ತಿದ್ದಳು.
ಬಂಧುಗಳು ಗಂಡು ಹೆಣ್ಣುಗಳಿಗೆ ಉಡುಗೊರೆಗಳನ್ನು ಕೊಡುತ್ತಿದ್ದರು. ತಂದೆ ಯಾಚಕರಿಗೆ

ದಾನಮಾಡಿ ಅಳಿಯನಿಗೆ ವಿಶೇಷ ವಸ್ತ್ರಾಭರಣಗಳನ್ನು ಪೆಂಡಿಕಟ್ಟಿ ಪೆಟ್ಟಿಗೆಯಲ್ಲಿ ತುಂಬಿ ಇತರ ಅಗತ್ಯವಸ್ತುಗಳನ್ನು ಮೂಟೆಕಟ್ಟಿ ಕಳಿಸಿಕೊಟ್ಟು ಕುದುರೆಗಳನ್ನು ಉಡುಗೊರೆ ಕೊಡುತ್ತಿದ್ದನು. ಅನಂತರ ಎಲ್ಲರೂ ಸೇರಿ ಶುಭಗಳಿಗೆಯಲ್ಲಿ ಗಂಡು ಹೆಣ್ಣುಗಳನ್ನು ಬೀಳ್ಕೊಡುತ್ತಿದ್ದರು.

ಆಗ ಸ್ವಯಂವರ ಪದ್ಧತಿಯೂ ರೂಢಿಯಲ್ಲಿದ್ದಂತೆ, ಕಾವ್ಯದಲ್ಲಿನ ಮುಂಡಿಕೆಯ ಕತೆಯಿಂದ ತಿಳಿಯುತ್ತದೆ. ಅಲ್ಲದೆ ಕನ್ಯಾದಾನ ಪದ್ಧತಿ ರೂಢಿಯಲ್ಲಿದ್ದಂತೆಯೂ ತಿಳಿಯುತ್ತದೆ. ಮದುವೆಗೆ ಮುನ್ನ ಗಂಡಿನವರೇ ಹೆಣ್ಣಿನ ಮನೆಗೆ ಹೋಗಿ ಉಡುಗೊರೆ ಕೊಟ್ಟು ಹೆಣ್ಣು ಕೇಳುತ್ತಿದ್ದರು. ಹೆಣ್ಣನ್ನು ಕೊಡುವಾಗ ಗಂಡಿನ ವಂಶವನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದ ರೂಢಿ ಆಗಲೂ ಇತ್ತು. ಹೆಣ್ಣನ್ನು ಕೊಡಲು ಇಷ್ಟವಿಲ್ಲದಿದ್ದರೆ ಹೆಣ್ಣು ಕೇಳಲು ಬಂದವರಿಗೆ, ಅವರು ತಂದ ಉಡುಗೊರೆಗಳನ್ನು ಹಿಂತಿರುಗಿಸಿ ಕಳಿಸುತ್ತಿದ್ದರು.

ಎಂದಿನಂತೆಯೇ ಅಂದೂ ಸಹ ಪುತ್ರವತಿಗೇ ಸಮಾಜದಲ್ಲಿ ಹೆಚ್ಚಿನ ಗೌರವ. "ನಂದನನಿಲ್ಲದ ಸಂಸಾರ ಸದ್ಗತಿ ಹೊಂದದು" ಎಂಬ ನಂಬಿಕೆ ಇತ್ತು. ತಂದೆ ತಾಯಿಗಳು ತಾವು ಸಾಯುವ ಮೊದಲು ಮನೆಯ ವಸ್ತುಗಳನ್ನೆಲ್ಲ ಮಕ್ಕಳಿಗೆ ಒಪ್ಪಿಸಿ ಸತ್ತರೆ ತಮಗೆ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ನಂಬಿದ್ದರು. ತಮಗೆ ಮಕ್ಕಳಿಲ್ಲದಿದ್ದರೆ ಹೆಂಡತಿಯೇ ಗಂಡನ ಮನವೊಲಿಸಿ, ಹೆಣ್ಣನ್ನು ಹುಡುಕಿ, ಬೇರೊಂದು ಮದುವೆಮಾಡಿಸುತ್ತಿದ್ದಳು. ಬೇರೆ ಹೆಣ್ಣನ್ನು ತಂದರೆ 'ಎರವಾ'ಗುವುದೆಂದು ನಂಬಿದ್ದ ಆಕೆ ತನ್ನ ತಂಗಿಯನ್ನೇ ಮದುವೆಮಾಡುತ್ತಿದ್ದಳು. ಕುಲ ನೋಡಿ ಹೆಣ್ಣು ಕೊಡುತ್ತಿದ್ದರು. ತಮ್ಮ ತಮ್ಮ ಧರ್ಮವನ್ನು ನಂಬಿ ನಡೆದರೆ ಮಾತ್ರ ಮುಕ್ತಿಯೆಂದು ಆ ಜನ ನಂಬಿದ್ದರು. ಮಕ್ಕಳನ್ನು ಚಿಕ್ಕಂದಿನಲ್ಲಿಯೇ ಓದಿಸಿ ಬುದ್ಧಿಗಲಿಸಬೇಕೆಂಬ ಪರಿಜ್ಞಾನವಿದ್ದಿತು.

ಆಗ ರಾಜನು ಸತ್ಯವಂತನೂ ಭೋಗಿಯೂ ತ್ಯಾಗಿಯೂ ಸಿರಿವಂತನೂ ಸ್ವಾಭಿಮಾನಿಯೂ ಚಾಪಪ್ರಿ ವಿದ್ಯಾಪ್ರವೀಣನೂ ಆಗಿದ್ದನು. ಬಂಧುಜನಕೆ ಚಿಂತಾಮಣಿಯಂತಿದ್ದು ಮೊರೆಹೊಕ್ಕವರನ್ನು ಮನ್ನಿಸಿ ಸೊಕ್ಕಿದವರ ಸೊಕ್ಕನ್ನು ಮುರಿಯುತ್ತಿದ್ದನು.

ಅಂದಿನ ರಾಯನ ಓಲಗವನ್ನು ನೋಡುವುದೇ ಒಂದು ಸುಯೋಗವಾಗಿತ್ತು. ರಾಜನ ಓಲಗ ಯಾವತ್ತೂ ಮಾಂಡಲಿಕರು ಮನ್ನೆಯರು ಸಾಮಂತರು ದಂಡನಾಯಕರು ರಾವುತರು ಗಂಡುಗಲಿಗಳು ಭಟರು ವಿದ್ವಾಂಸರು ಕವಿಗಳು ಭಟ್ಟರು ಗಾಯಕರು ಪರಿಹಾಸಕರು ಧರ್ಮಬೋಧಕರು ಗಮಕಿಗಳು ವಾದಿಗಳು ವಾಗ್ಮಿಕರು ವಿವಿಧ ವಿದ್ಯಾಪರಿಣತರು

ವೈದ್ಯರು ರಾಯಭಾರಿಗಳು ರಾಯಸದವರು ಪರದರು ಕುಲದರಸುಗಳು ಸಖಿರು ಜ್ಯೋಯಿಸರು ಶಕುನಿಗಳು ಅಳಿಯಂದಿರು ಅರಸುಮಕ್ಕಳು ಬಂಧುಜನರು ಸುಂದರಿಯರು—ಮುಂತಾದವರಿಂದ ತುಂಬಿರುತ್ತಿದ್ದಿತು.

ಇತಿಹಾಸವನ್ನು ತಿರುವಿದರೆ ಕಾಲದಿಂದ ಕಾಲಕ್ಕೆ ಒಂದೊಂದು ರೀತಿಯ ಯುದ್ಧ ತಂತ್ರಗಳನ್ನು, ಕಾಣುತ್ತೇವೆ. ಜನರಲ್ಲಿ ತಾಂತ್ರಿಕಜ್ಞಾನ ಹೆಚ್ಚಿದಂತೆಲ್ಲ ಯುದ್ಧದ ರೀತಿ, ಬಳಸುವ ಸಾದನಗಳಲ್ಲಿ ಬದಲಾವಣೆಗಳಾಗುತ್ತಾ ಬಂದಿವೆ. ಅಂತೆಯೇ ಸಮ್ಯಕ್ತ್ವಕೌಮುದಿಯಿಂದ ಆ ಕಾಲದ ಕೆಲವು ಯುದ್ಧತಂತ್ರಗಳು ತಿಳಿದುಬರುತ್ತವೆ. ಅಂದು, ಶತ್ರು ಸೈನಿಕರು ಕೋಟೆಗೆ ಲಗ್ಗೆಹತ್ತದಂತೆ ಸಾರಣೆ ಮಾಡಿಸುತ್ತಿದ್ದರು. ಶತ್ರುಗಳ ಮೇಲೆ ಹುಳಿಮರಳನ್ನು ಎರಚುತ್ತಿದ್ದರು. ಹಾವುಗಳನ್ನು ಬಿಡುತ್ತಿದ್ದರು. ಉರಿಯುವ ಹುಲ್ಲಿನ ಹೊರೆಗಳನ್ನು ಹಾಕುತ್ತಿದ್ದರು. ಕಾದಂಬಲಿಯನ್ನು ಸುರಿಯುತ್ತಿದ್ದರು. ಸಂಧಿ ಗುಂಡುಗಳನ್ನಿಟ್ಟು ಕೊಲ್ಲುತ್ತಿದ್ದರು. ಅಲ್ಲದೆ ಸಿಡಿ, ಬೀಸುಬಲೆ, ಕವಣೆ, ಕಲ್ಲುಗುಂಡು ಪ್ರಯೋಗಿಸುವುದು, ಏಣಿಯೇರಿ ತೊಲೆಹಾಕುವುದು, ಕವಲುಗಳಿಂದ ದೂಡುವುದು, ಏಣಗಳನ್ನಿಟ್ಟು ಕೆಡಹುವುದು—ಮುಂತಾದ ವಿಧಾನಗಳಿಂದ ಶತ್ರುಗಳನ್ನು ಎದುರಿಸುತ್ತಿದ್ದರು.

ಅಂದು ನಾಡಿನ ಜನರು ನಾನಾ ವೃತ್ತಿಗಳನ್ನವಲಂಬಿಸಿದ್ದರು. ಪರದರು ದ್ವೀಪಾಂತರಗಳಿಗೆ ಹೋಗಿ ಮುತ್ತು ಮಾಣಿಕ್ಯ ಪಟ್ಟೆ ಚೀನಾಂಬರ ಕುದುರೆ ಆನೆ ಗಂಧ ಕಸ್ತೂರಿ ಕುಂಕುಮ ಮುಡಿವಾಳಗಳನ್ನು ತಂದು ಮಾರುತ್ತಿದ್ದರು. ರಾಜನಿಗೆ ಕೊಟ್ಟು ಬಹುಮಾನ ಪಡೆಯುತ್ತಿದ್ದರು.

ಕಾಲ ಬದಲಾದಂತೆ ಸ್ತ್ರೀಯರ ವೇಷಭೂಷಣಗಳ ರೀತಿ ಬದಲಾಗಿದೆಯೇ ವಿನಾ ಅವರ ಆಕಾಂಕ್ಷೆ ಮಾತ್ರ ಬದಲಾಗಿಲ್ಲ. ಈಗಿನಂತೆಯೇ ಆಗಲೂ ಅವರು ಧರಿಸುತ್ತಿದ್ದ ಆಭರಣಗಳು ಅಪಾರ. ವೈವಿಧ್ಯಮಯ. ಕೊರಳಹಾರ, ಹರಳೋಲೆ, ವಜ್ರದಸರ, ತೋರಮುತ್ತಿನ ಮೂಗುತಿ ಭಾರಿಸರಪಣಿ ಭುಜಕೀರ್ತಿ ಕಂಕಣ ಮುದ್ರಿಕೆ ಮುತ್ತಿನ ಹಾರ ಬೆರಳಿವರಲು ಒಡ್ಯಾಣ ನೊಸಲಬೊಟ್ಟು ಚರಣಾಭರಣ ಕಡಗ ಅಣಿ-ಮೇಲು ಚೌಕಳಿ ಕಂಠಮಾಲೆ ಸಾಲುಂಗುರ ಕಾಂಚೀದಾಮ ಕಾಲಂದುಗೆ ಗೆಜ್ಜೆ ಕಿರುಪಿಲ್ಲಿ ಮೆಂಟಿಕೆ ಮೇಲುಮುತ್ತಿನ ಹತ್ತಗಟ್ಟು ಸಾಲುಕಟ್ಟಾಣಿಸರ ರತ್ನಮುದ್ರಿಕೆ ಕಸ್ತೂರಿತಿಲಕ-ಹೀಗೆ ಹತ್ತಾರು ಬಗೆ. ಆಗ ಆಭರಣ ತೊಡುವುದರಲ್ಲಿ ಹೆಂಗಸರಿಗಿಂತ ಗಂಡಸರೇನೂ ಕಡಿಮೆ ಇರಲಿಲ್ಲ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು : ಹೀರಾವಳಿ ತೋರ ಮುತ್ತಿನ ಜವುಕಳಿ ಸರಪಣಿ ಲುಳಿಸರ ಹವಿಸ್ಮಾರತಾತಿ ಚಿಮ್ಮುರಿ ಮುತ್ತಿನ ಹಸ್ತಗಟ್ಟು-ಇತ್ಯಾದಿ—ಒಟ್ಟಿನಲ್ಲಿ ವಾಯಣ್ಣವ್ರತಿಯ ಸಮ್ಯಕ್ತ್ವ ಕೌಮುದಿ ಒಂದು ಜೈನಧರ್ಮ ಬೋಧಕ ಕಾವ್ಯವಾದರೂ ಅದರಲ್ಲಿ ಅಲ್ಲಲ್ಲಿ ಕವಿಯ ಕಾಲದ ಜನಜೀವನದ ಚಿತ್ರಣವೂ ಮೂಡಿಬಂದಿದೆ.

# ಕಾವ್ಯಸಮೀಕ್ಷೆ

ಸಮ್ಯಕ್ತ್ವಕೌಮುದಿಯೊಂದೇ ಇಲ್ಲಿಯವರೆಗೆ ಉಪಲಬ್ಧವಿರುವ ಕವಿಯ ಕೃತಿ. ಆದರೆ ಈ ಕಾವ್ಯದಲ್ಲಿ ಕವಿ, "ಬಾಲಕಾಲದಿ ಭಾರತೀವರದಿಂದಲಿ ಮೇಲುಕವಿತೆಗಳ ಪೇಳ್ದು ಲೀಲೆಯಿಂದಿರುತಿರ್ದ" ಎಂದಿರುವುದರಿಂದ ಈತ ಇದಕ್ಕಿನ್ನ ಮೊದಲು, ಇದಕ್ಕೆ ಪೂರ್ವಭಾವಿಯಾಗಿ, ಈ ಕೃತಿಗೆ ಮೂಲವಾಗಿ ಬಿಡಿಕವಿತೆಗಳನ್ನು ಬರೆಯುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಸಮ್ಯಕ್ತ್ವಕೌಮುದಿಯ ನಂತರ ಬೇರೆ ಕಾವ್ಯಗಳನ್ನು ಬರೆದನೋ ಇಲ್ಲವೋ ತಿಳಿಯುವುದಿಲ್ಲ. ಕವಿ ತನಗೆ ಐವತ್ತು ವರ್ಷಗಳು ಕಳೆದು, ಸಮ್ಯಕ್ತ್ವ ವ್ಯಾಪಿಸಿ, ಜಿನದೀಕ್ಷೆಯನ್ನು ಪಡೆದನಂತರ ಎಂದರೆ, ತನ್ನ ಜೀವನದ ಕೊನೆಗಾಲದಲ್ಲಿ ಈ ಕಾವ್ಯವನ್ನು ಬರೆದುದಾಗಿ ಹೇಳಿಕೊಂಡಿರುವುದರಿಂದ* ಬಹುಶಃ ಇದೇ ಇವನ ಮೊದಲ ಹಾಗೂ ಕೊನೆಯ ಕಾವ್ಯವಿರಬಹುದು.

ಸಮ್ಯಕ್ತ್ವಕೌಮುದಿಯು ಸಾಂಗತ್ಯದಲ್ಲಿದೆ. ೧೮ ಸಂಧಿಗಳು, ಒಟ್ಟು ೧೯೪೯ ಪದ್ಯಗಳು. ಕಾವ್ಯ ಸುಪಾರ್ಶ್ವನ ಸ್ತುತಿಯಿಂದ ಪ್ರಾರಂಭವಾಗುತ್ತದೆ. ಅನಂತರ ಸಿದ್ಧಾದಿಗಳು, ಭುಜಬಲಿ, ಗಣಧರರು, ಸರಸ್ವತಿ, ಶಾಸನದೇವಿಯರನ್ನು ಸ್ತುತಿಸಿ ಶ್ರವಣಬೆಳಗೊಳದ ಭುಜಬಲಿಯನ್ನು ಸ್ತುತಿಸಿದ್ದಾನೆ :

ಇಳೆಯೆಂಬ ಮನೆಗೆ ಕಳಸವೆನಿಸುವ ಬೆಳು
ಗುಳದ ಬೆಟ್ಟದೊಳರ್ಕಕೋಟಿ
ಬೆಳಗನೇಳಿಪ ತನುವಿಡಿದಿಹ ಭುಜಬಲೀ
ನಳಿನಾಂಘ್ರಿಯುಗಲಕೊಂದಿಪೆನು ೧ ೧೧

ಮುಂದುವರಿದ ಕವಿ, ತಾನು ವರಕವಿಗಳ ಓಜೆವಿಡಿದು ತನ್ನ ಕಾವ್ಯವನ್ನು ರಚಿಸುತ್ತಿರುವುದಾಗಿ ಹೇಳಿ ತನ್ನ ಕಾವ್ಯಕಥೆಯನ್ನು ಪ್ರಾರಂಭಿಸಿದ್ದಾನೆ.

---

* ಈ ಪರಿಯೊಳು ಜಿನದೀಕ್ಷೆಯನಾಂತು ಸಮ್ಯಕ್ತ್ವ
ವ್ಯಾಪಿಸೆ ಮನದೊಳು ಮತ್ತೆ
ವಿಪುಳ್ವ ಸಮ್ಯಕ್ತ್ವಕೌಮುದಿ ಚರಿತೆಯ
ನಾ ಪೇಳ್ವೆ ಕನ್ನಡದಿಂದ ೧-೮೪

## ಸಮ್ಯಕ್ತ್ವಕೌಮುದಿ ಎಂದರೇನು ?

'ಸಮ್ಯಕ್ತ್ವ' ಎಂಬುದಕ್ಕೆ 'ತತ್ತ್ವದಲ್ಲಿ (ಜೈನ ತತ್ತ್ವದಲ್ಲಿ) ಪ್ರೀತಿ ನಂಬಿಕೆ ಶ್ರದ್ಧೆ ಉಂಟಾಗುವುದು ಎಂದರ್ಥ. ಜೈನಧರ್ಮದಲ್ಲಿ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ ಸಮ್ಯಕ್‌ಚಾರಿತ್ರಗಳೆಂದು ಮೂರು ಹಂತಗಳುಂಟು. ಜೈನರು ಇವನ್ನು ರತ್ನತ್ರಯ ಗಳೆನ್ನುತ್ತಾರೆ. ಈ ರತ್ನತ್ರಯಗಳಲ್ಲಿ ಮೊದಲನೆಯದಾದ ಸಮ್ಯಕ್‌ದರ್ಶನವೇ ಸಮ್ಯಕ್ತ್ವ. ಎಂದರೆ ಜೈನತತ್ತ್ವದಲ್ಲಿ ಭಕ್ತಿ ಶ್ರದ್ಧೆ ನಂಬಿಕೆ—ಇವು ಉಂಟಾಗುವ ಕ್ರಿಯೆಯೇ ಸಮ್ಯಕ್ತ್ವ. ಇದು ರತ್ನತ್ರಯಗಳಲ್ಲಿ ಮೊದಲನೆಯದೆಂತೋ ಅಂತೆಯೇ ಪ್ರಮುಖವೂ ಮೋಕ್ಷಕ್ಕೆ ಅಂಕುರವೂ ಹೌದು.

"ಕೌಮುದಿ" ಎಂಬುದಕ್ಕೆ ಬೆಳುದಿಂಗಳು ಎಂದರ್ಥ. ಸಮ್ಯಕ್ತ್ವಕೌಮುದಿ ಯೆಂದರೆ, ಬೆಳುದಿಂಗಳಿನಂತೆ ಪರಿಶುದ್ಧವಾದ ಹಿತಕರವಾದ ಬೆಳಕಾದ ಸಮ್ಯಕ್ತ್ವದ ಮಹಿಮೆಯನ್ನು ನಿರೂಪಿಸುವ ಕಾವ್ಯ. ಎಂದರೆ, ಸಮ್ಯಕ್ತ್ವ ಉದಿಸಿದ ಘಟನೆಗಳನ್ನು ಕಥೆಗಳ ಮೂಲಕ ಹೇಳಿದ ವಿವರಣೆ ಸಂಗ್ರಹವೇ ಸಮ್ಯಕ್ತ್ವಕೌಮುದಿ ಗ್ರಂಥ. ಸಮ್ಯಕ್ತ್ವಕೌಮುದಿಯು ಕಾವ್ಯವಸ್ತುವೆಂದರೆ ದಾನ ಪೂಜೆ ಶೀಲ ಉಪವಾಸಗಳ ಮಹತ್ತ್ವವನ್ನು ಮನವಟ್ಟು ಮಾಡಿ ಧರ್ಮಾನುರಾಗವನ್ನು ವರ್ಣಿಸುವುದು. ಸಮ್ಯಕ್ತ್ವವೆಂದರೆ ಈ ಗುಣಗಳೇ. ಇವುಗಳನ್ನು ಶ್ರದ್ಧೆಯಿಂದ ಪಾಲಿಸುವುದೆಂದರೆ ಮುಕ್ತಿಪಥದಲ್ಲಿ ಮುನ್ನಡೆದಂತೆ.

ಜೈನವಾಙ್ಮಯದಲ್ಲಿ ಕೌಮುದಿಕಥೆಗಳು ತೀರ್ಥಂಕರರ ಕಥೆಗಳು ಮತ್ತು ಆರಾಧನಾಕಥೆಗಳೆಂದು ಮೂರು ಬಗೆಯ ಸಾಹಿತ್ಯರಾಶಿಯನ್ನು ಕಾಣುತ್ತೇವೆ. ಸಲ್ಲೇಖನ ವಿಧಿಯಿಂದ ಸಮಾಧಿಮರಣ ಸಾಧಿಸಿದವರ ಚರಿತ್ರಸಂಗ್ರಹಗಳಿಗೆ ಆರಾಧನಾಕಥೆ ಗಳೆಂದೂ ಕೇವಲಜ್ಞಾನಿಗಳಾದ ತೀರ್ಥಂಕರರ ಚರಿತ್ರೆಗಳಿಗೆ ತೀರ್ಥಂಕರರ ಕಥೆಗಳೆಂದೂ ಮತ್ತು ಚಲಿಸುವ ಚಿತ್ತವನ್ನು ನಿಲ್ಲಿಸಿ, ತತ್ತ್ವಾನುರಕ್ತಿಯನ್ನು ಹೊಂದಿದವರ ಚರಿತ್ರ ಸಂಗ್ರಹಗಳಿಗೆ ಕೌಮುದಿಕಥೆಗಳೆಂದೂ ಹೆಸರು. "ಪ್ರಾರಂಭ-ಮಧ್ಯ-ಮುಕ್ತಾಯಗಳ ಪರಮ ಆದರ್ಶಗಳೇ ದರ್ಶನ-ಜ್ಞಾನ-ಚಾರಿತ್ರ್ಯಗಳು. ಕೌಮುದೀಕಥೆಗಳು ಸಮ್ಯಕ್ತ್ವ (ದರ್ಶನ)ಕ್ಕೆ, ತೀರ್ಥಂಕರರಕಥೆಗಳು ಜ್ಞಾನಕ್ಕೆ, ಆರಾಧನಾ ಕಥೆಗಳು ಚಾರಿತ್ರ್ಯಕ್ಕೆ ಕನ್ನಡಿಹಿಡಿಯುತ್ತವೆ".*

ಉದಿತೋದಯನ ವೈರಾಗ್ಯಕ್ಕೆ ಅರ್ಹದ್ದಾಸ ಮತ್ತು ಅವನ ಮಡದಿಯರ ವೈರಾಗ್ಯಕಾರಣಗಳು ಹೇಗೆ ಪ್ರಚೋದಕವಾದುವು ಎಂಬುದೇ ಇಲ್ಲಿಯ ಮುಖ್ಯ ಕಥಾವಸ್ತು. ಎಂದರೆ. ಅರ್ಹದ್ದಾಸನೆಂಬ ವೈಶ್ಯ ಮತ್ತು ಆತನ ಮಡದಿಯರು ಕೌಮುದೀಮಹೋತ್ಸವದ ದಿನ–ನಂದೀಶ್ವರನೋಂಪಿಯ ಅಷ್ಟೋಪವಾಸ ಸುದಿನ–

* ಸಂ. ಬಿ. ಬಿ. ಮಹೀಶವಾಡಿ, ಮಂಗರಸನ ಸಮ್ಯಕ್ತ್ವಕೌಮುದಿ ಪುಟ : xxxiii.

ತಮತಮಗೆ ಧರ್ಮದಲ್ಲಿ ಸಮ್ಯಕ್ತ್ವ (ನಂಬುಗೆ) ಉಂಟಾದ ಬಗೆಯನ್ನು ಹೇಳುತ್ತಾರೆ. ಇದನ್ನು ಮರೆಯಲ್ಲಿ ನಿಂತು ಲಾಲಿಸಿದ ಉದಿತೋದಯಮಹಾರಾಜ, ಆತನ ಮಂತ್ರಿ ಮತ್ತು ಪಟ್ಟಣದ ಅಂಜನಚೋರನಿಗೆ ಸಮ್ಯಕ್ತ್ವ ಉಂಟಾಗುತ್ತದೆ. ಕೌಮುದೀ ಮಹೋತ್ಸವದ ದಿನ ಅವರಿಗೆ ಸಮ್ಯಕ್ತ್ವ ಉಂಟಾಗುವುದರಿಂದಲೂ ಸಮ್ಯಕ್ತ್ವ ಉಂಟಾದುದೇ ನಿಜವಾದ ಕೌಮುದಿಯ ಮಹೋತ್ಸವದಂತೆ ಆದುದರಿಂದಲೂ ಈ ಕಾವ್ಯಕ್ಕೆ "ಸಮ್ಯಕ್ತ್ವಕೌಮುದಿ" ಎಂಬುದು ಸಾರ್ಥಕನಾಮವಾಗಿದೆ. ಎಂದರೆ ಇಲ್ಲಿ ಉದಿತೋದಯರಾಜನು ಸಮ್ಯಕ್ತ್ವವನ್ನು ಧರಿಸಿ ದೀಕ್ಷಾಬದ್ಧನಾದ ಚರಿತ್ರೆಯಿದೆ ಇಲ್ಲಿ, ಧರ್ಮದಲ್ಲಿ ಶ್ರದ್ಧೆ-ಭಕ್ತಿಗಳು ನೆಲೆಯೂರಿ ನಿಲ್ಲಲು ಕಾರಣವಾದ ಒಂದೊಂದು ಪ್ರಸಂಗಗಳನ್ನು ಒಂದೊಂದು ತತ್ತ್ವದ ಹಿನ್ನೆಲೆಯಲ್ಲಿ ಕಥೆಯ ರೂಪದಿಂದ ಹೇಳಲಾಗಿದೆ. ಎಂದರೆ, ಇದು ಸಮ್ಯಕ್ತ್ವ ಉದಿಸಲು ಕಾರಣವಾದ ಕಥೆಗಳ ಸಂಗ್ರಹ. ಎಂದರೆ ಉದಿತೋದಯನ ವೈರಾಗ್ಯಕ್ಕೆ ಅರ್ಹದ್ದಾಸ ಮತ್ತು ಅವನ ಮಡದಿಯರ ವೈರಾಗ ಕಾರಣಗಳು ಹೇಗೆ ಪ್ರಚೋದಕವಾದುವು ಎಂಬುದೇ ಇಲ್ಲಿಯ ಮುಖ್ಯ ಕಥಾವಸ್ತು.

ಈ ಕಾವ್ಯದ ಉದ್ದೇಶ ಧರ್ಮಾನುರಾಗವನ್ನು ಹುಟ್ಟಿಸುವುದೇ ಆಗಿದೆ. ಕವಿ ಇದನ್ನು ಬರೆದದ್ದು ತನ್ನ ಇಳಿನೆಯ ವಯಸ್ಸಿನ ನಂತರ. ಎಂದಮೇಲೆ ಇದರ ಉದ್ದೇಶ ಕೇವಲ ಮನರಂಜನೆಗಾಗಿಯಾಗಲೀ ಕಥೆ ಹೇಳುವುದಕ್ಕಾಗಿಯಾಗಲೀ ಆಗಿರದೆ, ಜನರಿಗೆ ಧರ್ಮಾನುರಾಗವನ್ನು ಮೂಡಿಸುವುದೇ ಆಗಿದೆ. ಇದನ್ನು ಕವಿಯೇ "ಚಂದದಿ ಪಾಯಣ್ಣವ್ರತಿಗಳು ಪೇಳ್ದರು ಹಿಂದಣ ಅಘ ಕೆಡಲೆಂದು" ಎಂದು ಹೇಳಿದ್ದಾನೆ. ಆದ್ದರಿಂದಲೇ ಈ ಕಾವ್ಯ "ಭವ್ಯಜನಚಿತ್ತಕುವಲಯಚಂದ್ರಮ" "ಸಜ್ಜನರ ಕರ್ಣಾಭರಣ" "ಮುಕ್ತಿಸತಿಯ ರಾವೆನಿಸುವ ವಿತರಣ" "ಕೇಳ್ದರ ಪಾಪ ಹರಣ"ವೆಂದು ಕವಿಯಿಂದಲೇ ಪ್ರಶಂಸಿಸಲ್ಪಟ್ಟಿರುವುದು. ಜತೆಗೆ ಸಾರಹೃದಯರು ಈ ಕಥೆಯನ್ನು ಕೇಳಿ ತಮ್ಮ ಹಿಂದಿನ ಕ್ರೂರಕರ್ಮವನ್ನೆಲ್ಲ ಕಳೆದುಕೊಳ್ಳಲಿಯೆಂಬುದೂ ಇವನ ಉದ್ದೇಶವಾಗಿದೆ. ಕವಿಯ ದೃಷ್ಟಿಯಲ್ಲಿ ದರ್ಶನ ಜ್ಞಾನ ಚಾರಿತ್ರ್ಯ—ಈ ಮೂರನ್ನು ಧರಿಸದ ಮಾನವನ ಪಾಪ ಕಳೆದು ಅವನಿಗೆ ಮೋಕ್ಷಸಾಧನೆಯಾಗದು. ಆದ್ದರಿಂದಲೇ ಅವನ್ನು ಧರಿಸಬೇಕು. ಹಾಗೆ ಮಾಡಲು ಪ್ರಚೋದಕ ಶಕ್ತಿಯೆಂದರೆ ಇವನ ಈ ಕಾವ್ಯ. ಎಂದರೆ, ಈ ಕಾವ್ಯವನ್ನು ಕವಿ ರಚಿಸಿದುದು ಮೋಕ್ಷಕ್ಕಾಗಿ ಜನೋಪಕಾರಕ್ಕಾಗಿ ಅರ್ಥಾತ್ ಕರ್ಮನಿವಾರಣೆಗಾಗಿ, ಪುಣ್ಯಸಂಪಾದನೆಗಾಗಿ. ಅದಕ್ಕಾಗಿ ಜನ (ಸಜ್ಜನರು) ಇದನ್ನು ಓದಿ ನಲಿಯಬೇಕೆಂದು ಕವಿ ಬಯಸುತ್ತಾನೆ.*

---

*ಶಶಿ ರವಿ ಧಸಿ ಸುರಗಿರಿ ವಿಧಿಯಿರುವನ್ನ
ಪಸರಿಸಿ ಮೆರೆಯಲೀ ಕೃತಿಯು
ಜಸವೆತ್ತು ಕೇಳ್ದವರೆಲ್ಲರು ಮುಕ್ತಿಯ
ಶಶಿಮುಖಿಗೊಲ್ಲಭರಹರು   ೧೮-೯೭

ತನ್ನ ಕೃತಿಗೆ ಆಕರವಾವುದೆಂಬುದನ್ನು ಕವಿ ಹೇಳಿಲ್ಲ. ನಾವು ಪರಿಭಾವಿಸಿದರೆ, ಇವನಿಗಿಂತ ಹಿಂದಿನವರಾದ ಮಂಗರಸ ಮತ್ತು ಚಿಕ್ಕಮಲ್ಲಣ್ಣರ ಕೃತಿಗಳು ಆಕರಗಳಾಗಿರುವುದು ಸ್ಪಷ್ಟವಾಗುತ್ತದೆ. ಅದರಲ್ಲಿಯೂ ಮಂಗರಸನ ಸಮ್ಯಕ್ತ್ವಕೌಮುದಿಯನ್ನು ಇವನು ಬಹುವಾಗಿ ಆಧರಿಸಿ ಅನುಕರಿಸಿದ್ದಾನೆ. ಮಂಗರಸ ತನ್ನ ಕಾವ್ಯವನ್ನು ಷಟ್ಪದಿಯಲ್ಲಿ ಹೇಳಿದರೆ ಪಾಯಣ್ಣವ್ರತಿ ಸಾಂಗತ್ಯದಲ್ಲಿ ಹೇಳಿದ್ದಾನೆ. ಅವನು ಕೇವಲ ೧೨ ಸಂಧಿ ೭೮೫ ಷಟ್ಪದಿಗಳಲ್ಲಿ ಮುಗಿಸಿದರೆ ಇವನು ೧೮ ಸಂಧಿ ೧೯೪೯ ಸಾಂಗತ್ಯಗಳನ್ನು ತೆಗೆದುಕೊಂಡಿದ್ದಾನೆ. ಸಂದರ್ಭಗಳ ಅಧಿಕವರ್ಣನೆ, ಉಪದೇಶದ ಹೆಚ್ಚಳ. ಸಾಮಾನ್ಯರೂ ಓದಿ ಅರ್ಥಮಾಡಿಕೊಳ್ಳಬಹುದಾದಂಥ ಸರಳ ನಿರೂಪಣೆ ಪಾಯಣ್ಣವ್ರತಿಯ ವೈಶಿಷ್ಟ್ಯ.

ಇನ್ನು ಕವಿಯ ಶೈಲಿಯ ಬಗ್ಗೆ ಒಂದು ಮಾತು. ಇದು ಮುಖ್ಯ ಅಂಶವೂ ಹೌದು. ಕಾವ್ಯರಚನೆ ಸಂಪ್ರದಾಯಬದ್ಧವಾಗಿದ್ದರೂ ಕಥೆ ಹೇಳುವ ರೀತಿ ಸರಳ. ಕಥೆಗಳಂತೆಯೇ ಜೈನತತ್ತ್ವಗಳನ್ನೂ, ಉಪದೇಶವನ್ನೂ ಸರಳವಾಗಿ ಹೇಳಿದ್ದಾನೆ :

> ದಾನ ಪೂಜೆಯು ಶೀಲೋಪವಾಸದಿಂದಲಿ
> ತಾನೊದಗುವುದು ಸದ್ಗತಿಯು
> ಸಾನುರಾಗದಿ ತಪಸ ಮಾಡಿದಲ್ಲದೆ ಕರ್ಮ
> ಹಾನಿಯಾಗದು ಕೇಳು ನೃಪತಿ
>
> ಕೊಲೆ ಹುಸಿ ಕಳವು ಪಾದರ ಅತಿಕಾಂಕ್ಷೆಯು
> ಬಲುವೆಸನಗಳೇಳ ತೊರೆದು
> ನಲವಿಂದ ಪಂಚೇಂದ್ರಿಯ ವಿಷಯಸುಖಂಗಳ
> ತೊಲಗಿಸಬೇಕು ಕೇಳರಸ

ಇನ್ನೂ ಕ್ಲಿಷ್ಟವಾದ ತತ್ತ್ವಗಳನ್ನು ಆಲಂಕಾರಿಕವಾಗಿ ಹೇಳಿ ಸಾಮಾನ್ಯರಿಗೆ ಅರ್ಥೈಸುತ್ತಾನೆ :

> ಸಿರಿ ಸಂಜೆಗೆಂಪು ಮಿಂಚಿನಮಾಲೆ ಮಂಜಿನ
> ನೆರವಿ ಬಿಸಿಲ ಹದಿರು ಮತ್ತೆ
> ಶರಧಿಯ ತೊರೆನೊರೆವಿಂಡು ಯೌವನ ರೂಪ
> ಸ್ಥಿರವಿಲ್ಲ ಮನುಜರ್ಗೆ ನೃಪತಿ

ಈ ಕಾವ್ಯದಲ್ಲಿ ಕವಿ, ಅರ್ಥಾಂತರನ್ಯಾಸ, ರೂಪಕಾಲಂಕಾರಗಳನ್ನು ವಿಶೇಷವಾಗಿ ಬಳಸಿದ್ದರೂ ಉಪಮಾಲಂಕಾರಕ್ಕೇ ಹೆಚ್ಚಿನ ಒತ್ತು ಕೊಟ್ಟಿದ್ದಾನೆ. ಹತ್ತಾರು

ಮಾತುಗಳಲ್ಲಿ ಹೇಳಬಹುದಾದುದನ್ನು ಒಂದೆರಡು ಉಪಮೆಗಳಿಂದಲೇ ಸೊಗಸಾಗಿ ಪೇಳಿದ್ದಾನೆ. ಉದಾಹರಣೆಗೆ ಬೆಳಗಾದುದನ್ನು ಕವಿ ವರ್ಣಿಸುವ ರೀತಿ ಇದು :

ಆ ಕತ್ತಲೆಯನು ನುಂಗಿ ಅಕ್ಕಿಸಲಾಜಿದೆ
ಕಕ್ಕಿದಂದದಿ ಕಾಡಿಗೆಯ
ಗಕ್ಕನೆ ತೊಲಗಿಸಿ ಜ್ಯೋತಿಗಳೆಲ್ಲವು
ಅರ್ಕೋದಯಕೆ ನಂದಿದವು

ಈಗ ಪುಣ್ಯಕೆಲಸ ಮಾಡಿದರೆ ನಾವು ಇಲ್ಲಿಯವರೆಗೆ ಹೊತ್ತಿರುವ ಪಾಪದ ಹೊರೆ ಹೇಗೆ ಮಾಯವಾಗುತ್ತದೆಂಬುದನ್ನು ಹೀಗೆ ಹೇಳಿದ್ದಾನೆ :

ಹಿಂದೆ ಬರುವ ನೀರ ನಿಲಿಸಿ ಮಡುವಿನೊಳು
ಮುಂದಿರ್ದ ಜಲವ ಕಳೆಯಲು
ಅಂದೊಳಗಿರ್ದ ವಸ್ತುವ ಕಾಣ್ಬಂತೆ ತಾ
ಹಿಂವಣ ಕರ್ಮ ಕೆಡುವದು

ಇದೊಂದು ಕಥಾಪ್ರಧಾನ ಕಾವ್ಯ. ಒಂದು ಕಥಾಕೋಶದಂತಿರುವ ಈ ಕಾವ್ಯದಲ್ಲಿ ಒಟ್ಟು ಹದಿನೆಂಟು ಕಥೆಗಳಿವೆ. ಇವುಗಳಲ್ಲಿ ಪ್ರಧಾನವಾದುದು ಉದಿತೋದಯನ ಕಥೆ. ಅದಕ್ಕೆ ಉಪಕಥೆಗಳೆಂಬಂತೆ ಉಳಿದ ಕಥೆಗಳು ಬಂದು ಸೇರಿವೆ. ಹೊರನೋಟಕ್ಕೆ ಒಂದೇ ಕಥೆಯಂತೆ ಕಾಣುವ ಈ ಕಾವ್ಯದಿಂದ ಒಂದು ಕಥೆಯನ್ನು ಅಗಚಿದರೂ ಪ್ರಧಾನಕಥೆಯ ಓಟಕ್ಕೆ ಭಂಗಬರುತ್ತದೆ. ಅಷ್ಟರಮಟ್ಟಿಗೆ ಕವಿ ಕಥೆಗಳನ್ನು ಹೆಣೆದಿದ್ದಾನೆ. ತಟ್ಟೆಯೊಳಗೆ ತಟ್ಟೆಯನ್ನು ಜೋಡಿಸಿದಂತೆ ಈ ಕಥೆಗಳು ಅಳವಟ್ಟಿವೆ. ಸಮ್ಯಕ್ತ್ವ ಉದಿಸಲು ಕಾರಣವಾದ ಈ ಕಥೆಗಳು ಕಾಂತಾಸಮ್ಮಿತದಂತೆ ತತ್ತ್ವೋಪದೇಶ ಮಾಡುತ್ತವೆ. ಇವು ಕೇವಲ ಕಥೆಗಾಗಿಯೇ ಬಂದಿರದೆ, ಉದಿತೋದಯನು ಹಂತಹಂತವಾಗಿ ಸಮ್ಯಕ್ತ್ವವನ್ನನುಸರಿಸಲು ಪೋಷಕವಾಗಿ ಬಂದಿವೆ.

ಇದು ಕಥಾಪ್ರಧಾನವಾದ ಕಾವ್ಯವಾದರೂ ಕವಿ ಅಲ್ಲಲ್ಲಿ ವರ್ಣನೆಗೆ ಗಮನ ಕೊಟ್ಟಿದ್ದಾನೆ. ಆದರೂ ಇವನಲ್ಲಿ ಕಾಣುವುದು ಸಾಂಪ್ರದಾಯಿಕ ವರ್ಣನೆಗಳು ಮಾತ್ರ. ಉದಾಹರಣೆಗೆ ಉದಿತೋದಯನ ವರ್ಣನೆಯನ್ನು ನೋಡಬಹುದು :

ಸತ್ಯದಿ ಧರ್ಮಜ ನಿತ್ಯಭೋಗದೊಳಿಂದ್ರ
ಮತ್ತೆ ತ್ಯಾಗದೊಳ್ ಕರ್ಣನೆನಿಸಿ
ವಿತ್ತದಿ ಧನಪತಿ ಮಿಗಿಲೆನಿಸಿರ್ದಾ ಭೂ
ಪೋತ್ತಂಸನೊಪ್ಪಿರುತಿರ್ದ

ಇದರಂತೆಯೇ ಸುಂದರಿಯೊಬ್ಬಳ ವರ್ಣನೆ :

ನಡುಸಿಂಹ ಧನುಪುರ್ಬು ಕುಚಕುಂಭ ಮೀನಾಕ್ಷಿ
ಮಡದಿ ಮಕರಪತ್ರದಿಂದ
ಸಡಗರದಿಂ ವಿಡಃಹಸ್ತದಿಂದಲಿ ಕನ್ನೆ
ಬೆಡಗಿಂದೊಪ್ಪಿದಳ್ ರಾಶಿಯಂತೆ

ಆದರೂ ಕವಿ ಕಲ್ಪನಾಶೂನ್ಯನೇನಲ್ಲ. ಒಮ್ಮೊಮ್ಮೆ ಅವನ ವರ್ಣನಾಚಾತುರ್ಯ ಮಿಂಚುತ್ತದೆ :

ತಳಿರೆಲ್ಲ ಉರಿಯಾಗಿ ತಂಪೆಲ್ಲ ಬಿಸಿಯಾಗಿ
ಮೊ[ರೆ]ವಳಿಗಾನ ತಾ ಕಿವಿಗೆ
ಇರಿವವೊಲಾಗಿ ನೋಯಿಸುತಿರೆ ಸ್ತ್ರೀಯರು
ಹೊರಳುತಿರ್ದರು ವನದೊಳಗೆ

ಇಂತಹ ವರ್ಣನೆಗಳೂ ಸಾಕಷ್ಟಿವೆ.

ಒಟ್ಟಿನಲ್ಲಿ ಇದೊಂದು ಒಳ್ಳೆಯ ಕಾವ್ಯ. ಕ್ಲಿಷ್ಟತೆ ಎಲ್ಲಿಯೂ ಇಣುಕಿಯೂ ಇಲ್ಲ. ಸರಳವಾಗಿ ನೇರವಾಗಿ ಕಥೆ ಹೇಳುತ್ತ ಹೋಗಿರುವ ಕವಿ ಬಹು ಚಮತ್ಕಾರಿಕವಾಗಿ ತಿರುವುಕೊಡುತ್ತ ಕಾವ್ಯವನ್ನು ಮುನ್ನಡೆಸುತ್ತಾನೆ, ಓದುಗರ ಕುತೂಹಲವನ್ನು ಕಾಪಾಡುತ್ತಾನೆ. ಕೊನೆಗೆ, ಜನರಲ್ಲಿ ಧರ್ಮಾನುರಾಗವನ್ನು ಮೂಡಿಸುವ ತನ್ನ ಉದ್ದೇಶದಲ್ಲಿ ಸಫಲನಾಗುತ್ತಾನೆ.

# ಹಸ್ತಪ್ರತಿಗಳು

ಈ ಕೃತಿಯ ಸಂಪಾದನೆಗೆ ಒಟ್ಟು ಮೂರು ಹಸ್ತಪತ್ರಿಗಳನ್ನು ಬಳಸಿಕೊಂಡಿದ್ದೇನೆ. ಅವುಗಳಲ್ಲಿ ಒಂದು ಓಲೆಪ್ರತಿ. ಉಳಿದವೆರಡು ಮೈಕ್ರೋಫಿಲ್ಮ್ ಪ್ರತಿಗಳು. ಅವನ್ನು ಕ್ರಮವಾಗಿ ಕ, ಗ ಮತ್ತು ಚ ಎಂದು ಕರೆಯಲಾಗಿದೆ. ಅವುಗಳ ವಿವರ ಹೀಗಿದೆ :

ಕ : ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಓಲೆಪ್ರತಿ. ಕ್ರಮಸಂಖ್ಯೆ ಕೆ. ೯. ಪ್ರತಿಯ ಉದ್ದ ೭.೫″, ಅಗಲ ೨.೩″. ಒಟ್ಟು ೧೬೨ ಪತ್ರಗಳಿವೆ. ಪತ್ರಸಂಖ್ಯೆ ೧ರಿಂದ ೧೭೨ ಎಂದಿದೆ. ಆದರೆ ೧೩೨ರಿಂದ ೧೪೩ನೆಯ ಪತ್ರಸಂಖ್ಯೆಗೆ ಮುಂದುವರಿದು ಪತ್ರಸಂಖ್ಯೆ ತಪ್ಪಾಗಿದೆ. ಅಸಮಗ್ರ ಪ್ರತಿ ; ಎಂದರೆ ಹದಿನಾಲ್ಕನೆಯ ಸಂಧಿ ಪೂರ್ತಿ ಇಲ್ಲ. ಇದರ ಪ್ರತಿ ಪತ್ರದಲ್ಲಿಯೂ (ಒಂದುಕಡೆ) ಸರಾಸರಿ ೯ ಪಂಕ್ತಿಗಳಿದ್ದು ಪ್ರತಿ ಪಂಕ್ತಿಯಲ್ಲಿ ೩೨ ಅಕ್ಷರಗಳಿವೆ. ಬರವಣಿಗೆ ಚೆನ್ನಾಗಿದೆ ಮತ್ತು ಶುದ್ಧವಾಗಿದೆ. ಅಕ್ಷರಗಳು ಸುಂದರವಾಗಿವೆ. ಕೆಲವು ಗರಿಗಳು ಅಲ್ಪಸ್ವಲ್ಪ ತ್ರುಟಿತವಾಗಿವೆ. ಕೊನೆಯ ಪತ್ರದ ಒಂದು ಕಡೆಯ ಅಂಚು ಸ್ವಲ್ಪ ಮುರಿದಿದೆ. ಪ್ರತಿಯ ಕೊನೆಯಲ್ಲಿ, ಗ್ರಂಥ ಮುಗಿದ ಕೂಡಲೇ "ಅಂತು ಸಂಧಿ ೧೮ಕಂ............೯೮೯ಕಂ ಮಂಗಳಮಹಾ ಶ್ರೀಶ್ರೀಶ್ರೀ । ಶುಪಾರಿಶ್ವ ನಾಥಾಯ ನಮಃ । ಶ್ರೀ ಬಟ್ಟಪುರದ ಅನಂತನಾಥ ಸ್ವಾಮಿಯ ಶ್ರೀಪಾದವೆ......ಈ ಪುಸ್ತಕ ಬರದು ಸಂಪೂರ್ಣವಾಗಬೇಕಾದರೆ ಯೆಂನೂ ಕಡ ಉಂಟ್ಟು ಪಾದ ॥ ವಿಕೃತ ಸಂವತ್ಸರದ ಪ......ಶುದ ೬ ಯು ಕುಜವಾರ ಸಂಪೂರ್ಣವಾಯತ್ತು ॥ ಸ್ವಸ್ತಿಶ್ರೀ ವಿಚಾರದ ನೇಮಿಚಂದ್ರವರ್ನಿಯ ......ವರಿಗೆ ॥ ಮೂರರೂರ ಬಸ್ತಿ ನಾಗಪ್ಪನು ಬರದು ವಪ್ಪಿಸಿದ ಸಮ್ಯಕ್ತ್ವಕೌಮುದಿ ಪುಸ್ತಕಕೆ ಆಚಂದ್ರಾರ್ಕ್ಕವ.........ನಿರ್ವಿಘ್ನಮಸ್ತು ಎಂದಿದೆ. ಪ್ರಕೃತ ಗ್ರಂಥದ ಪರಿಷ್ಕಾರಕ್ಕೆ ಇದರಿಂದಲೇ ಪ್ರತಿಮಾಡಿಕೊಳ್ಳಲಾಗಿದೆ.

ಗ : ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಮೈಕ್ರೋಫಿಲ್ಮ್ ಪ್ರತಿ ಕ್ರಮಸಂಖ್ಯೆ ಎನ್. ೧೦೮೧, ಇದನ್ನು ಕಾಗದದ ಪ್ರತಿಯಿಂದ ಫಿಲ್ಮ್ ಮಾಡಲಾಗಿದೆ, ಪತ್ರಸಂಖ್ಯೆ ೧–೧೩೧ ; ಗ್ರಂಥಸಂಖ್ಯೆ ೨೮೦೦ ; ಸಮಗ್ರಪ್ರತಿ. ಬರವಣಿಗೆ ಶುದ್ಧವಾಗಿದ್ದು ಅಕ್ಷರಗಳು ಸುಂದರವಾಗಿವೆ. ಇದು ಹೊಂಬುಚದ ಶ್ರೀಮಠದ ಪ್ರತಿ. ಇದನ್ನು ಫಿಲ್ಮ್ ಮಾಡಿದವರು ಶ್ರೀ ಬಿ.ಎಸ್. ಸಣ್ಣಯ್ಯ

ಮತ್ತು ಸಿ.ಎಸ್. ಶ್ರೀನಿವಾಸನ್ ಅವರು; ದಿನಾಂಕ ೧೯೭೫ ರಂದು. ಇದರ ಪ್ರತಿ ಗರಿಯಲ್ಲೂ ಪತ್ರಸಂಖ್ಯೆಯನ್ನು ಬರೆಯಲಾಗಿದೆ. ಪ್ರತಿಯ ಕೊನೆಯಲ್ಲಿ, ಗ್ರಂಥ ಮುಗಿದ ಕೂಡಲೆ : "ಶಾಲಿವಾಹನ ಶಕವರುಷ ೧೭೭೯ನಿಯ ಸಲ್ಲುವ ನಳಸಂವತ್ಸರದ ಕಾರ್ತಿಕ ಬಹುಳ ೧೨ಯೂ ರವಿವಾರ ತಾಸು ೩ರ ರಲ್ಲು ವೃಷಭಕೀರ್ತಿಯವರು ಸಮ್ಯಕ್ತ ಕೌಮುದಿಯನು ಬರದು ಸಂಪೂರ್ಣ ಮಾಡಿದಕ್ಕೆ ಮಂಗಲ ಮಹಾ ಶ್ರೀಶ್ರೀ ಹೊಂಬುಚದಲು ವಿಚಾರ ಮಾಡುವಾಗ್ಯ ತನಗೆ ಪೋದಿಸಿ ಮಿತ್ರವಾಗಿ ಬರದು ಯಿವರೊಳಗೆ ಹಸ್ತ ದೋಷಯಿದ್ದರೆ ಬಲಂತ ಪ್ರಾಜ್ಞರು ತಿಧಿಮಾಡುವದು ಯೇನು ಬರದು ಇದಾನೆ ಯೆತ್ತ ದುಷನೆ ಮಾಡಬಾರದು ಬಲ್ಲವರು ಅಲ್ಲ"—ಎಂದಿದೆ. ಇದರಿಂದ ಈ ಪ್ರತಿಯ ಕಾಲ ಕ್ರಿ.ಶ. ೨೩-೧೧-೧೮೫೭ ಎಂದು ತಿಳಿಯುತ್ತದೆ.

ಚ : ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಮೈಕ್ರೋಫಿಲ್ಮ್ ಪ್ರತಿ. ಕ್ರಮಸಂಖ್ಯೆ ೨೧೪೪. ಇದನ್ನು ಓಲೆಪ್ರತಿಯಿಂದ ಫಿಲ್ಮ್ ಮಾಡಲಾಗಿದೆ. ಫಿಲ್ಮ್ ಮಾಡಿದವರು ಶ್ರೀ ಬಿ. ಎಸ್. ಸಣ್ಣಯ್ಯ ಮತ್ತು ಸಿ. ಎಸ್. ಶ್ರೀನಿವಾಸನ್ ಅವರು, ದಿನಾಂಕ ೧೭-೧-೭೭ ರಂದು. ಇದು ಶ್ರವಣಬೆಳುಗೊಳದ ಓಲೆಪ್ರತಿ ಎಸ್.ಬಿ. ೪೧೦ ರ ಪ್ರತಿ. ಆದರ ಉದ್ದ ೨೪.೫ ಸೆಂ.ಮೀ. ಅಗಲ ೫.೫ ಸೆಂ.ಮೀ. ಪತ್ರಸಂಖ್ಯೆ ೧-೨೨+೨; ಗ್ರಂಥಸಂಖ್ಯೆ ೩೦೦೦, ಪ್ರತಿ ಸಮಗ್ರವಾಗಿದೆ. ಆದರೆ ಪ್ರತಿಯ ಎಲ್ಲ ಕಡೆಯೂ ಸ್ಪಷ್ಟವಾಗಿ ಕಾಣುವುದಿಲ್ಲ. ಹೀಗಾಗಿ ಅದರಿಂದ ಪೂರ್ಣವಾಗಿ ಪಾಠಾಂತರಗಳನ್ನು ಗುರುತಿಸಿಕೊಳ್ಳಲಾಗಲಿಲ್ಲ. ಎಂದರೆ, ಸ್ಪಷ್ಟವಾಗಿ ಕಾಣುವ ಭಾಗಗಳಿಂದ ಮಾತ್ರ ಪಾಠಾಂತರಗಳನ್ನು ಗುರುತಿಸಿಕೊಳ್ಳಲಾಗಿದೆ. ಪ್ರತಿ ಗರಿಯ ಮೇಲೂ ಪತ್ರಸಂಖ್ಯೆಯನ್ನು ಕೊರೆಯಲಾಗಿದೆ. ಪ್ರತಿಯ ಕೊನೆಯಲ್ಲಿ.... "ಸ್ವಸ್ತಿ ಶ್ರೀವಿಜಯಾಭ್ಯುದಯ. ಶಾಲಿವಾಹನ ಶಕವರುಷಂಗಳು ೧೭೪೯ ನೆಯ ಸರ್ವಜಿತುನಾಮ ಸಂವತ್ಸರದ ಆಶ್ವೀಜ ೧೦ ಲ್ಲು.........ರ ಪೂರ್ವ ಪ್ರತಿಷ್ಠೆಯಾದ ಘಳಿಗೆ ೫ಕ್ಕೆ ಸಲತಕ್ಕ ಧಜ ಲಗ್ನದಲ್ಲಿ ಸಂಘಟ್ಟ ಪುರವರಾಧೀಶ ಶ್ರೀಮನ್ಮಹಾಮಹಾವೀರವರ್ಧಮಾನ ಸ್ವಾಮಿಯವರ ಪಾದಪದ್ಮಾಂಬಕನಾದಂಥ ರಾಯಪ್ಪಾತ್ಮಜ ನಳಿನಾಖ್ಯನು.........ನೇಮಿಸಾಗರ ಸ್ವಾಮಿಯವರಿಗೆ ಬರಕೊಟ್ಟ ಸಮ್ಯಕ್ತ್ವಕೌಮುದಿ ಪುಸ್ತಕಕ್ಕೆ ಭದ್ರಂ ಮಂಗಳಂ"-- ಎಂದಿದೆ. ಇದರಿಂದ ಪ್ರತಿಯ ಕಾಲ ಕ್ರಿ.ಶ. ೧೫-೧೦-೧೮೨೭ ಎಂದು ತಿಳಿಯುತ್ತದೆ. ಪ್ರತಿ ಗರಿಯ ಮೇಲೂ ಪತ್ರಸಂಖ್ಯೆಯನ್ನು ಕೊರೆಯಲಾಗಿದೆ. ಪ್ರತಿಯ ಒಂದು ಓಲೆಯಲ್ಲಿ, ಕೃತಿಯಲ್ಲಿ ಬರುವ ಕಥೆಗಳ ಹೆಸರುಗಳನ್ನೂ ಆ ಕಥೆಗಳು ಇರುವ ಪತ್ರಗಳ ಕ್ರಮಸಂಖ್ಯೆಗಳನ್ನೂ ಕೊಡಲಾಗಿದೆ. ಆದು ಹೀಗೆ : "೧ ವಾಲೆಯಲ್ಲಿ ಪ್ರಥಮಸಂಧಿ। ೫ ವಾಲೆಯಲ್ಲಿ ಪುರವರ್ಣನೆ। ೮ ವಾಲೆಯಲ್ಲಿ ಯಮದಂಡನ ಕಥೆ। ೧೫ ವಾಲೆಯಲ್ಲಿ ಚಂದ್ರಿಕಾವಿಹಾರ। ೧೮ ವಾಲೆಯಲ್ಲಿ ರೂಪ್ಯಖುರನ ಕಥೆ। ೨೨ ವಾಲೆಯಲ್ಲಿ ನಾಗಶ್ರೀ ಕಥೆ। ೨೫ ವಾಲೆಯಲ್ಲಿ ಪದ್ಮ

ಶ್ರೀಯು ಕಥೆ । ೩೦ ವಾಲೆಯಲ್ಲಿ ಮಿತ್ರಶ್ರೀಯು ಕಥೆ । ೩೪ ವಾಲೆಯಲ್ಲಿ ಕನಕಲತೆಯು ಕಥೆ। ೩೭ ವಾಲೆಯಲ್ಲಿ ಪದ್ಮಶ್ರೀಯು ಕಥೆ । ೪೩ ವಾಲೆಯಲ್ಲಿ ಪದ್ಮಲತೆಯು ಕಥೆ । ೫೧ ವಾಲೆಯಲ್ಲಿ ವಿದ್ಯುಲ್ಲತೆಯು ಕಥೆ । ೫೭ ವಾಲೆಯಲ್ಲಿ ಸಮುದ್ರದತ್ತನ ಮದುವೆ । ೩೬ ವಾಲೆಯಲ್ಲಿ ಸಮುದ್ರದತ್ತ ಊರಿಗೆ ಬಂದದ್ದು । ೬೯ನೆಯ ವಾಲೆಯಲ್ಲಿ ಕುಂಡನನ್ನು ಗಗನಗಾಮಿ ಕುದುರೆ ಕೊಲ್ಲುವುದು । ೭೩ನೆಯ ವಾಲೆಯಲ್ಲಿ ಚಿಂತಾಗತಿ ಗಗನಗಾಮಿ ತಂದದ್ದು । ೭೪ನೇ ವಾಲೆ ಸುದಂಡರಾಜ ನಿರ್ವೇಗಸಂಧಿ । ೮೩ನೆಯ ವಾಲೆ......। ೮೭ನೆಯ ವಾಲೆ ಸಂಧಿ ೧೮ । ಬೆಳುಗುಳದ ನೇಮಿ ಸಾಗರ ವರ್ಣಿಯವರ ಪುಸ್ತಕ॥'— ಎಂದಿದೆ.

ಪಾಯಣ್ಣವ್ರತಿಯ ಕಾಲ ಮತ್ತು ಸ್ಥಳದ ಬಗ್ಗೆ ವಿವೇಚಿಸುವಾಗ ಕೆಲವು ಮಾಹಿತಿಗಳನ್ನು ಒದಗಿಸಿ ಸಹಕರಿಸಿದ ಶ್ರೀ ಸೀತಾರಾಮರಾವ್ ಜಾಗೀರ್‌ದಾರ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು
೧-೮-೧೯೮೨

ಎಂ. ಪಿ. ಮಂಜಪ್ಪಶೆಟ್ಟಿ

# ಒಂದನೆಯ ಸಂಧಿ

**ಶಾರ್ದೂಲವಿಕ್ರೀಡಿತ**

ಶ್ರೀಮದ್ಭ[1]ವ್ಯ[1]ನಿಕಾಬ್ಜಮಿತ್ರದಿನಪಂ ಸದ್ಧರ್ಮಚಕ್ರಾಧಿಪಂ
ಕಾಮ ಕ್ರೋಧ ಮದಾದಿ ದೋಷರಹಿ[2]ತಂ[2] ಕೈವಲ್ಯಬೋಧೋದಯಂ
ಸೋಮಾ[3]ರ್ಕರ[3] ಶತಕೋಟಿತೇಜವಪುಸಂ ಗೋತ್ರಾರಿಪೂ[4]ಜ್ಯಾ[4]ಧಿಪಂ
ಪ್ರೇಮಂ ಕೂರ್ತರ್ಗೆ ಸುಪಾರ್ಶ್ವದೇವನೆಮಗಂ ಮುಕ್ತಿಶ್ರೀಸುಖ ಸಂಪದಂ ?

ಶ್ರೀಮತ್ಸರ್ವಸುರೇಂದ್ರವಂದಿತಪದಂ ಸ್ಯಾದ್ವಾದವಿದ್ಯಾಧಿಪಂ
ಕಾಮಾರಣ್ಯಕುಠಾರನೆಂದೆನಿಸುವಂ ಮೋಹಾದಿ ದೋಷಕ್ಷಯಂ
ಧಾಮತ್ಕಾಂತಿಸುಮರಕತಾಂಗನೆನಿಪಂ ಸ್ಯಾದ್ವಾ[5]ದ[5]ವಿದ್ಯಾಧಿಪಂ
ಕ್ಷೇಮಂ ಕೂರ್ತರ್ಗೆ ಸುಪಾರ್ಶ್ವದೇವನೆಮಗಂ ನಿರ್ವಾಣಸಂಪತ್ಕರಂ ೨

**ಸಾಂಗತ್ಯ**

ಶ್ರೀಮದಮರಪ[6]ತಿ[6]ಮಕುಟಕೀಲಿತರತ್ನ । ಸ್ತೋಮಕಿರಣ ರಂಜಿಸುವ
ತಾಮರಸಾಂಘ್ರಿಯುಗಲ ಸುಪಾ[7]ರಿಶ್ವೇ[7]ಶ । ಧಾಮಸುಖವನೀವುದೆಮಗೆ ೩

ಸುರ ನರೋರಗಪತಿಮಕುಟರಂಜಿತರತ್ನ । ಕಿರಣ[8]ಶೋಭಿತ ಚರಣಾಬ್ಜ[8]
ಪರಮಕೋಟಾಕೋಟಿತೇಜಸುಪಾರ್ಶ್ವ । ಅರುಹ ಪಾಲಿಸು ಮುಕ್ತಿಸುಖವ ೪

ಶ್ರೀಸುರ ನರ ನಾಗವಂದಿತಪದಪದ್ಮ । ಭಾಸುರಗುಣಗಣನಿಳಯ
ಸಾಸಿರನಾಮದೊಡೆಯ ಸುಪಾರಿಶ್ವಜಿ । ನೇಶ ಕೊಡೆನಗೆ ಸದ್ಗತಿಯ ೫

ಅಷ್ಟಕರ್ಮವನೆಲ್ಲ ನಿಮಿಷದಿ ಕೆಡಿಸಿ [9]ತಾಂ[9] । ಅಷ್ಟ[10]ನೆ[10]ಲೆಯೊಳು [11]ತಾ ನೆ[11]ಲಸಿ
ಸೃಷ್ಟಿಮೂಜಗಕೆ ಗುರುವಾದ ಸಿದ್ಧರು ಎ[12][ನ್ನ][12] । ಭೀಷ್ಟಸಂಪದವ ಪಾಲಿವುದು ೬

---

[1] ವ್ಯಜ್ಜ (ಕ) [2] ತ (ಚ) [3] ಕ (ಚ) [4] ಜ್ಯೋ (ಗಚ) [5] ದ (ಕ) [6] ತಿಪತಿ (ಗ)
[7] ಶ್ವೇ (ಗ) [8] ರಂಜಿಸುವ (ಚ) [9] ತಾ (ಗ) [10] ನೆನೆ (ಗ) [11] ತಾ (ಗ) [12] ನ್ನ (ಕಗ)

ಆಚಾರ ವ್ಯವಹಾರ ನಿಶ್ಚಯ ಮಾರ್ಗದ । ಆಚಾರಗಳ ಭವ್ಯಜನಕೆ
ಆಚಾರ[1]ವ್ರತದನಿತ್ತು ರಕ್ಷಿಪ ಗುಣವಂತ[1] । ಆಚಾರ್ಯರಡಿಗೆರಗುವೆನು ೭

ಆಗಮ ತರ್ಕ ಶಬ್ದಂಗಳನೆಲ್ಲವ । ಬೇಗ ಭವ್ಯರಿಗೆಲ್ಲ ನಿತ್ಯ
ರಾ[2]ಗ[2]ದಿ ಉಪದೇಶಗೈವ ಉಪಾಧ್ಯರ್ಗೆ । ಬಾಗುವೆ ನಮ್ಮಯ ಶಿರವ ೮

ಮೇದಿನಿಯೊಳು ಪಂ[3]ಚಾ[3]ಚಾರ ತತ್ತ್ವಂಗಳ । ಓದಿ ರತ್ನತ್ರಯಂಗಳನು
ಭೇದವ ತಿಳಿದು ತಪದೊಳು ವರ್ತಿಪ । ಸ[4]ರ್ವ[4] ಸಾಧುಗ[5]ಳಡಿಗೆರಗು[5]ವೆನು ೯

ಅರುಹಂತ ಸಿದ್ಧಚಾರ್ಯರುಪಾಧ್ಯಾಯ । ವರಸರ್ವ ಸಾಧುಸಮಿತಿಯ
ಚರಣಾಬ್ಜಕೆರಗಿ ಪೇಳುವೆ ನನ್ನ ಭವಪಾಶ । ಪರಿದುಪೋಗಲಿಯೆಂದೆನುತ ೧೦

ದಿವ್ಯಭಾಷೆಯ [6]ತಾ[6]ವು ಗ್ರಹಿಸಿ ಧರೆಯೊಳುಳ್ಳ । ಭವ್ಯರಿಗುಪದೇಶಮಾಡಿ
ಅವ್ಯಯತಪ[7]ವ ತೋರುವ[7] ಗಣಧರರಂಘ್ರಿ । ದಿವ್ಯಾಬ್ಜಗಳಿಗೆರಗುವೆನು ೧೧

ಇಳೆಯೆಂಬ ಮನೆಗೆ ಕಳಸವೆನಿಸುವ ಬೆಳು । ಗುಳದ ಬೆಟ್ಟದೊಳರ್ಕಕೋಟಿ
ಬೆಳಗನೇಳಿಪ ತನುವಿಡಿದಿಹ ಭುಜಬಲೀ । ನಳಿನಾಂಘ್ರಿಯುಗಲಕೊಂದಿಪೆನು ೧೨

ಜಿನಮುಖಾಂಬುಜದೊಳು ಜನಿಸಿ ಧಾತ್ರಿಯೊಳುಳ್ಳ । ಜನರಜ್ಞಾನತಿಮಿರವ
ಇನಿಸುಳಿಯದೆ ತೊಲಗಿಸಿದ ವಾಣಿಯ ಪಾದ । ವನರುಹಗಳಿಗೆರಗುವೆನು ೧೩

ಜಿನಮತದೊಳಗುಳ್ಳ ಶಾಸನದೇವಿಯು । ರನುನಯದಿಂದೆನ್ನ ಮನಕೆ
ಘನಮತಿಯನು ಇತ್ತು ನಿರ್ವಿಘ್ನ ಮಾಳ್ಪುದು । ಮನವೊಲಿದೆನ್ನ ಸಂಸ್ಕೃತಿಗೆ ೧೪

ಅ[8]ರುಹ[8]ನ ಮತದಾಗಮವನು ಪೇಳುವ । ವರಕವಿಗಳ ಓಜೆವಿಡಿದು
ಹರುಷದಿಂದಲಿ ಪೇಳುವೆನು ಭವ್ಯಜನರಿಗೆ । ಪರಹಿತಕಾರಣದಿಂದ ೧೫

ಛಂ[9]ದಸ್ಸ[9]ಲಂಕಾರ ಕಾವ್ಯವ ಬ[10]ಲ್ಲವ[10]ರು । ಮುಂದೆ ಪೇಳಿರೆ ನೀವಿದನು
ಇಂದು ಪೇಳ್ವರೆ[11]ಯೆ[11]ನ್ನ ಜ[12]ಡಿಕೆಯು[12] ನನಗೆ ಪುಣ್ಯ । [13]ಬಂದಪ್ಪ[13]ದೆಂದು
ಪೇ[14]ಳಿದೆನು[14] ೧೬

---

[1] ಈ ಭಾಗ (ಕ) ದಲ್ಲಿಲ್ಲ [2] ಗಾ (ಕ) [3] ಚ (ಕ ಗ) [4] ರುವ (ಕ) [5] ಳಿಗೆ ವಂದಿಸು (ಗ) [6] ನಾ (ಕ) [7] ವ (ಕ). [8] ರ್ಹ (ಗ) [9] ದೋ (ಗ) [10] ಅಲ್ಲ (ಗ) [11] ಯಂವ (ಕ) [12] ಕೆ [13] ಬಂದಪ್ಪ (ಕ) [14] ದ (ಕ)

ಆಕಾಶಮಧ್ಯದಿ ವಾಯುತ್ರಯದಿ ಮೂಱು । ಲೋಕವ ಸುತ್ತಿರುತಿಹುದು
ಜೋಕೆಯಿಂ[1]ದೊಂ[1]ದುಯಿಪ್ಪತ್ತುಸಾವಿರಗಾವುದ । ತಾ ಕಾಣಿಸುವುದಂದದಲ್ಲಿ ೧೭

ಲೋಕವಿಹುದು ವಾಯುತ್ರಯದ ಮಧ್ಯದಿ । ತಾ ಕಾಣಿಸುತಿಹುದು ಮೂಱಾಗಿ
ನಾಕ ನರ[ಕ] ನಾಗಲೋಕದೊಳ್ ಮಧ್ಯಮ । ಲೋಕವೊಪ್ಪುತು ಶೋಭೆಯಿಂದ ೧೮

ಆದಿಯೊಳೇಳು ಮಧ್ಯದಿ ಒಂದು ಮೇಲೈದು । ಕಡೆಗೆ[2] ಮೇಲೊಂದು ರಜ್ಜುಗಲ
ಪೊತವಿ ಮೂಱಾಗಿರುತಿಹುದು ಭಾವಿಸಿ ನೋಡೆ । ಕಡುದುಃಖಿ ನರಕ ಕಡೆಯೊಳು ೧೯

ಮಧ್ಯಮಲೋಕದೊಳ್ ದ್ವೀಪಸಮುದ್ರವು ಇದ್ದವನೇಕದಱೊಳಗೆ
ಇರ್ದುದು ತಾ ಜಂಬೂದ್ವೀಪ ಸೌಭಾಗ್ಯದಿಂ । ಹೊದ್ದಿರುತಿಹು[3]ದನೇ[3]ನೆಂಬೆ ೨೦

ಧರೆಯೆಂಬ ಕಮಲಕ್ಕೆ ಕರ್ಣಿಕೆಯಂದದಿ । ಇರುತಿಹ ಮೇರು ದಕ್ಷಿಣ[4]ದ[4]
ಭರತಾರ್ಯಖಂಡದಿ ಶೋಭಿಸುತಿರ್ಪುದು । ಸುರುಚಿರ ಮಗಧದೇಶದೊಳು ೨೧

ರಾಜಿಸುವುದು ಸುರರಾಜನಗರಿಯ । ತೇಜಕ್ಕೆ ಮಿಗಿಲೆನಿಸಿಹುದು
ರಾಜಾದಿರಾ[5]ಜನ[5] ರಾಜಧಾನಿಯವೋಲು । ರಾಜಗೃಹವೆಂಬ ನಗರಿ ೨೨

ಆ ಪುರಾಧಿಪತಿ ಶ್ರೇಣಿಕನೆಂದೆಂಬ । ಭೂಪನಾಥನ ಪಟ್ಟದರಸಿ
ಚಾಪಲನೇತ್ರೆ [6]ಚೇ[6]ಳಿನಿಮಹಾದೇವಿಯು । ಏಪೇಳ್ವೆನವಳ ಸದ್ಗುಣವ ೨೩

ರತಿಯ ರೂಪಿಂದ ಭಾರತಿಯ ವಿದ್ಯದಿ ಕ್ಷೀರ । ಸುತೆಯ ಸೌಭಾಗ್ಯದೇಳ್ಗೆಯಲಿ
ಕ್ಷಿತಿಧರಸುತೆಯ ವಿಲಾಸವ ಸೋಲಿಪ । ಸತಿಯು ಸದ್ಗುಣವನೇನೆಂಬೆ ೨೪

ದಾನ ಪೂಜೆ[7]ವ್ರತ[7] ಶೀಲ ಉಪವಾಸಗಳ ಮಾಡಿ । ಹೀನಕರ್ಮವನೆಲ್ಲ ಕಳೆದು
ಮಾನಿನೀಮಣಿ[8]ಯಿರುತಿ[8]ರ್ದಳು ತಾ ಕಾಮ । ಧೇನು[9]ವೆ[9]ನಿಸಿ ಬಂಧುಜನಕೆ ೨೫

ಇಂತಿರುತಿರ್ದೊಂದು ದಿನದುದಯದೊಳು ಭೂಪ । ಕಂತುಸನ್ನಿಭಶ್ರೇಣಿಕನು
ಸಂತೋಷದಿಂದ ಒಡ್ಡೋಲಗ[10]ಗೊಂಡಿ[10]ರ್ದ । ಎಂತೆಂಬೆ ನೃಪನ ಸಂಪದವ ೨೬

---

1 ದೋಂದೂಂ (ಕ) 2 ಡ (ಗ) 3 ದುವಿ (ಗ) 4 ದಿ (ಕ) 5 ಜ (ಕ) 6 ಓಚೆ (ಕ)
7 ಯ (ಗ) 8 ಯಿ (ಕ) 9 ವೆದೆ (ಗ) 10 ಗೊಟ್ಟಿ (ಗ)

ಮಾಂಡಲಿಕ[1]ರ[1] [2]ಮನ್ನೆಯರ[2] ಸಾಮಂತ[3]ರ[3] । ದಂಡನಾಯಕ[4]ರ[4] ರಾವುತ[5]ರ[5]
ಗಾಡುಗಲಿ ಭಟನಿವಹವಿಂದೆಸೆದಾ ಭೂ । ಮಂಡಲೇಶ್ವರನ ಓಲಗದಿ ೨೬

ಶ್ರೀಪತಿ ಸಿಂಹವಿಷ್ಟರದೊಳು ಇರುವಂತೆ । ಭೂಪನಿರಲು ಓಲಗದಿ
ಏ ಪೇಳ್ವೆ ಚರನೊರ್ವ ನಡೆತಂದು ಹರುಷದಿ । ಭೂಪಗಿತ್ತನು ಕಾಣಿಕೆಯ ೨೮

ತಳಿದು ತಾವರೆಪುಷ್ಪ ಮಾವಿನಫಲ ಪಣ್ಣು । ಹೊಳೆವ ಸೌರಭ್ಯಪುಷ್ಪಗಳ
ನಳಿನಪತ್ರದ ಪೊಟ್ಟಣಗ[6]ಳ ತಾ [6]ಮುಂದಿಟ್ಟು । ಇಳೆಯಾಣ್ಮಗಿಂತು ನುಡಿದ ೨೯

ಎಲೆ ಸ್ವಾಮಿ ನಮ್ಮಯ ವಿಪುಲಾಚಲದ ಮೇಲೆ । ಕಲಿಲವಿಜಯ ವೀರಜಿನನ
ಸುಲಲಿತ ಸಮವಸರಣ ನೆಲಸಿದೆಯೆನೆ । ನಲಿದನು ನೃಪತಿ ಚಿತ್ತದೊಳು ೩೦

ಒಸಗೆ ತಂದವನಿಗೆ ಅಂಗಚಿತ್ತವನಿತ್ತು ಆ । ದೆಸೆಗೇಳಡಿಯಿಟ್ಟು ನಮಿಸಿ
ವಸುಧಾಧೀ[7]ಶನಾ[7]ನಂದಭೇರಿಯ ಹೊಯಿಸಿ । ಶಶಿಮುಖಿಸಹಗಜವೇರಿ ೩೧

ಹರಿಜನ ಪುರಜನ ಬಂಧುಜನಂಗಳು । ಹರುಷದಿಂದಲಿ ಬರಲೊಡನೆ
ಪರಿತಂದು ದೂರದೊಳ್ ಸಮವಸರಣವನು । ಧರಣೀಶ ಕಂಡಾನೆ ಇಳಿದು ೩೨

ಗಂಧಕುಟಿಯ ತ್ರಿಪ್ರದಕ್ಷಿಣೆಗೈದು ತಾ । ಬಂದೊಳಪೊಕ್ಕು ಜಿನರಿಗೆ
ವಂದಿಸಿ ಸಾಷ್ಟಾಂಗವೆರಗಿ ನೊಸಲ್ಗೆ ಕೈ । ತಂದು ಕೊಂಡಾಡಿದನಿಂತು ೩೩

ಕರಿವೈರಿಪೀಠ ಮೂಜಿರ ಮೇಲೆ ರಾಜಿಪ । ಸರಸಿಜಸಾಹಸ್ರದಳಕೆ
ಇರುವ ಕರ್ಣಿಕೆಯ ನಾಲ್ವೆರಳು ಸೋಂಕ[8]ದೆ[8] ನಿಂದ । ಪರಮನ ಸ್ತುತಿಗೈದನಿಂತು ೩೪

ಹರಿಪೀಠ ಛತ್ರ ಚಾಮರ ಭಾಮಂಡಲ । ಸುರದುಂದುಭಿ ಪುಷ್ಪವೃಷ್ಟಿ
ತರುಕಂಕೇಲ್ಲಿ ದಿವ್ಯಧ್ವನಿಯಿಂದಲಿ । ಇರುವ ಜಿನನ ಸ್ತುತಿಗೈದು ೩೫

ಜಯಜಯ ಜನನವಿದೂರ ಜಗನ್ನಾಥ । ಜಯಜ[9]ಯ[9] ಮರಣವಿದೂರಾ
ಜಯಜಯ ತ್ರೈಲೋಕ್ಯವಂದಿತಪದಪದ್ಮ । ಜಯ ಕರ್ಮಾಷ್ಟಕ [10]ವಿ[10]ಮುಕ್ತಾ ೩೬

---

1 ರು (ಕ) 2 ಮಾನ್ಯರು (ಗ) 3 ರು (ಕ) 4 ರಾಸಾ (ಕ) 5 ರು (ಕ)
6 ಳ (ಕ) 7 ಶಾ (ಗ) 8 ದಿ (ಕ) 9 ರ (ಗಚ) 10 ನಿ (ಗ)

ಜಯ ನಿರ್ಮಲರೂಪ ನಿತ್ಯನಿರಂಜನ । ಜಯ ನಿರ್ಲೇಪ ನಿರಘನೇ
ಜಯ ಅ[1]ಷ್ಟಾದಶ[1]ದೋಷರಹಿತ ಸರ್ವಜ್ಞನೇ । ಜಯ ಮೋಕ್ಷಲಕ್ಷ್ಮೀವಲ್ಲಭನೇ ೩೭

ಜಯ ಸುರ ನರ ನಾಗನಮಿತಾಂಘ್ರಿಯುಗಲನೇ । ಜಯ ಕರ್ಮತಿಮಿರಭಾಸ್ಕರನೇ
ಜಯ ಜಯ ಮೋಹಾದಿ ದೋಷವಿನಾಶನೆ । ಜಯ ಕ[ರ್ಮಾ][2]ರಣ್ಯಕುಠಾರಾ ೩೮

ದುರಿತಾರಣ್ಯದವಾಗ್ನಿ ಭವಾಬ್ಧಿಗೆ । ವರನೌಕ್ರನೆನಿಸಿ ಭವ್ಯರಿಗೆ
ಸ್ಥಿರಪದವೀಯುನೀವ ಚಿನ್ಮಯರೂಪನೆ । ಶರಣು ಶರಣು ಜಗದೀಶಾ ೩೯

ಸಮವಸರ[3]ಣಕ್ಕಧಿ[3]ನಾಥನೆನುತ ಜನ । ಕಮಲಭಾಸ್ಕರನೆ ನೀಯೆನ್ನ
ಕಮಲಹೃದಯದೊಳು ನೆಲಸಿ ಸದ್ಗತಿಯ[4]ನು[4] । ಮಮತೆಯಿಂದಲಿ ಪಾಲಿಸಭವಾ ೪೦

ಕಾರುಣ್ಯಪುರುಷನೆ ಕರ್ಮವಿನಾಶನೆ । ಸಾರಹೃದಯ ಸ್ಮರಹರನೇ
ಮೇರುಪರ್ವತದೊಳು ಕ್ಷೀರಾಬ್ಧಿಯನು [5]ಮಿಂದ[5] । ವೀರಜಿನಪ ರಕ್ಷಿಸೆನ್ನ ೪೧

ಕರುಣಾಸುಧಾಬ್ಧಿ ವರ್ಧನಚಾರುಚಂದ್ರನೇ । ಪರಮಪಾವನಮುಕ್ತಿಯರಸಾ
ಸ್ಥಿರಸುಖವನು ನೀನು ಪಾಲಿಸಯೆ[6]ನ್ನ[6]ಯ । ಗುರುವೆ [7]ಶ್ರೀವೀರಜಿನೇಶಾ[7] ೪೨

ಕಾಮವಿಜಯ ಕರ್ಮನಿರ್ಮೂ[8]ಲ[8] ಸುಜನರ್ಗೆ । ಪ್ರೇಮದಿ ಮುಕ್ತಿಯನೀವ
[9]ಸ್ವಾಮಿತ್ರ[9]ಜಗದೀಶ ನಿಮ್ಮಂಘ್ರಿ ಸಂಬಿದೆ । ಕಾಮಿತಾರ್ಥವ ಪಾಲಿಸಭವಾ ೪೩

ಇಂತು ರೂಪಸ್ತವ ಗುಣಸ್ತವ ವಸ್ತುಸ್ತವ । ಕಂತುವೈರಿಯ ಕೊಂಡಾಡಿ
ಸಂತೋಷದಿಂದ ಗೌತಮರಾದಿ ಮುನಿಗಳ । ಸಂತತಿಗಳ[10]ಗೊಂದಿಸಿದ[10]ನು ೪೪

ವ ಸುಷ್ಠುಕೋಷ್ಠದೊಳು ದಂಪತಿಗಳು ಕುಳಿತಿರ್ದು । ಮುನಿಪತಿಯೊಡನೆ ಧರ್ಮವನು
ಮನಪಾರೆ ಕೇಳಿ ಚೇಳಿನಿ ಇಂತು ನುಡಿದಳು । ಮುನಿಮುಖ್ಯರೊಡನೆ ಭಕ್ತಿಯೊಳು ೪೫

ಸಂಸಾ[11]ರ[11]ಜೀವಕ್ಕೆಲ್ಲಕ್ಕೆ ಮಿಥ್ಯತ್ವದಿ । ಸಂಶಯವಾಗಿದೆ ನಮಗೆ
ಸಂಶಯಹರಮಪ್ಪ ಧರ್ಮೋಪದೇಶವ । ಹಂಸನಾಥನೆ ಪೇಳೆಂದೆನಲು ೪೬

---

1 ಷ್ಟ (ಕ) 2 ರ್ಮ (ಕಗಪ) 3 ಣಕ್ಕಾದಿ (ಕ) 4 ನ್ನು (ಕ) 5 ಮಿಂಧಾ (ಕ)
6 ನ (ಗ) 7 ರಕ್ಷಿಸು ವೀರ ಜಿನ ಪಾ (ಕ) 8 ಲ್ಯ (ಗ) 9 ತ್ರಿ (ಗ) 10 ಗೆಜಗುವೆ (ಕ)
11 ರ (ಕ)

ಕೇಳೆಲೆ ಮಗಳೆ ಧರ್ಮಕೆ ನಾಲ್ಕು ಪಥಗಳು । ಪೇಳುವೆ ನಿನಗದಿಂತು
ವೇಳಾಶಯನ ಅರಸಿ ಗೆಲ್ವ ಬಾಲೆಗೆ । ಪೇಳ್ದರಿಂತೆಂದು ಲೀಲೆಯೊಳು ೪೭

ದಾನ ಪೂಜೆಯು ಶೀ[1]ಲ ಉ[1]ಪವಾಸ[2]ವೀ[2] ನಾಲ್ಕು । ಮಾನವರಿಗೆ ಮುಕ್ತಿಪಥವು
ಸಾನುರಾಗದಿ ಸರ್ವರಿಗೆ ಸಮ್ಯಕ್ತ್ವವು । ಸಾರಿ ಸದ್ಗತಿಯನೆಯ್ದುವರು ೪೮

ಇಂತೆಂದು ಪೇಳಿದ ಮುನಿಪತಿಯೊಡನೆ ಭೂ । ಕಾಂತನರಸಿ ಕೇಳ್ದಳಿಂತು
ಓಂತೆ ಸಮ್ಯಕ್ತ್ವ[3]ಸು[3]ಜ್ಞಾನದಿ ಸದ್ಗತಿ । ಯಾಂತವರಾರೆಲೆ ಸ್ವಾಮಿ ೪೯

ಮೊದಲು ಸಮ್ಯಕ್ತ್ವದಿಂದಲಿ ಸುಗತಿಯ ತಾವು । ಮುದದಿಂದ ಪಡೆದರ ಕಥೆಯ
ಮದನನಿಜಯ ಪೇಳೆಂದು ಕೈಮುಗಿ[4]ದಳ[4] । ಚದುರೆ ಕೇಳಲು ಪೇಳ್ದರಿಂತು ೫೦

ಧರೆ[5]ಯ[5] ಪೊನ್ನಿನ ಹರಿಸೊಸಲತಿಲಕದಂತೆ । ಇರುತಿಹ ಮಧುರಾಪುರದ
ಇರವನು ಪೊಗಳ್ವಡೆ ಅಹಿರಾಜಗಲ್ಲದೆ । ನರಕವಿಗಳಿಗೆ ಗೋಚರವೆ ೫೧

ರಾಜಾಧಿರಾಜನ ನಗರದ ಸೊಬಗನು । ತೇಜದಿಂದಲಿ [6]ಸೋ[6]ಲಿಸುವ
ರಾಜೀವಭವ ತನ್ನ ನೆ[7]ಲೆ[7]ಯೊಂದು ರಚಿಸಿದ । ಮೂಜಗಕತಿಚೆಲುವಾಗಿ ೫೨

ಸುರಪತಿಪಟ್ಟಣಕೆಣೆಯಾದ ಮಧುರಾ । ಪುರದ ಚೆಲ್ವಿಕೆಯ ಪೇಳುವರೆ
ಧರೆಯೊಳಗುಳ್ಳ ಕವಿಗ[8]ಳಿ[8]ಲ್ಲ ಒಂದಾಗಿ । ಒರೆಯಬಲ್ಲರೆ ಪುರದಿರವ ೫೩

ಆ ಪುರವನು ಬಳಸಿರು[9]ತಿ[9]ಹ ವನವನು । ಐಪೇಳ್ವೆ [10]ಅ ಪು[10]ರಾಧಿಪನ
ಕಾಪಿನ ಖಾಂಡವನಕೆ ಮಿಗಿಲೆನಿಪುದು । *ನಾ ಪೊಗಳ್ವಡೆ ಬಂದಪುದೆ* ೫೪

ಕದಳಿ ಖರ್ಜೂರ ದಾಡಿಮ ದ್ರಾಕ್ಷಿ ಕಿತ್ತಳೆ । ಮಧುರಮಾವಿನ ಪಣ್ಣು ಪನಸು
ಸದಮಲತೆಂಗು ನೇರಿಲು ಕೌಂಗು ಫಲದಿಂದ । ಮುದವನೆಯ್ದಿಪುದು ನೋಳ್ಪರಿಗೆ ೫೫

ಸಾರವಾದಲಫಲ ಜಂಭೀರ ಬಾದಾಮಿ । ವಿರಾಜಿ ಬೆಳೆದ ಜಾಜಿಫಲವ
ತೋರುತಿಹವು ನಾನಾವಿಧ ವೃಕ್ಷವ । ನಾರು ವರ್ಣಿಸಬಲ್ಲರವನು ೫೬

---

1 ಲೋ (ಕ) 2 ಲು (ಕ) 3 ಸ (ಗ) 4 ದಳು (ಕ) 5 ವೆ (ಗ) 6 ಸ (ಕ) 7 ರೆ (ಗ)

8 ಳಿ (ಕ) 9 ತ್ತಿ (ಕ) 10 ಅಮ (ಕ) * ಈ ಭಾಗ (ಕ) ದಲ್ಲಿಲ್ಲ

ಮರುಗ ಮಲ್ಲಿಗೆ ಮತ್ತೆ ಸುರಗಿ ಸೇವಂತಿಗೆ । ವರಚಂದನಗಿಲು ಕುಂಕುಮದ
ಪಿರಿದೆನಿಸುವ ಸಂಪಗೆ ಪಾರಿಜಾತವು । ತರುಗಳಿದ್ದವು ಶೋಭೆ[1]ಯಿಂದ[1] ೫೭

ನಾಗಸಂಪಗೆ ಜಾಜಿ ಸುರಹೊನ್ನೆ ಕೇತಕಿ । ರಾಗಕಂಕುರಿಸುವ ತಿಲಕ
ಭೋಗಿಗಳಿಗೆ ಹಿತವಾದ ಪುಷ್ಪಗಳೆಲ್ಲ । ಆಗುತಿಹವು ಅನುದಿನವು ೫೮

ಪುನ್ನಾಗ ತಿಲಕ ಅಶೋಕೆ ಕುರ್ವಕದಿಂದ । ಸನ್ನುತದವನ ಗೋರಂಟೆ
ಇನ್ನೇನವೊಗಳ್ವೆ ವಸಂತರಾಜನು ಇಪ್ಪ । ಸನ್ನುತನಗರಿಯಂತಿಹುದು ೫೯

ಆ ವನದೊಳಗೆ ಸರೋವರವಿಪ್ಪವು । ತಾವರೆ ನೈದಿಲುಪುಷ್ಪ
[2]ತೀವಿ[2]ರುತಿರೆ ಅಳಿನಿಕರ ಸುಗಂಧಕ್ಕೆ । ತಾವೆಐಗುತ ಇರ್ದವಲ್ಲಿ ೬೦

ಅಲ್ಲಲ್ಲಿ ತಾವರೆಕೊಣಗಳು ಇರ್ಪವು । ಅಲ್ಲಲ್ಲಿ ಲತೆಯು ಮಾಡಗಳು
ಅಲ್ಲಲ್ಲಿ ತರುಮೂಲದೊಳು ವಜ್ರವೇದಿಕೆ । ಸೊಲ್ಲಿಸಲೆನ್ನಳವಹುದೆ ೬೧

ಸುರಪತಿ ಖಾಂಡವನ[3]ಕ್ಕೆ[3] ಪಾಸಟಿಯಾದ । ಪುತದ ಸುತ್ತಣ ನಂದ[4]ನ[4]ದಿ
ತರು ಪುಷ್ಪ ಫಲ ಪಿಕನಿಕರದಿಂದಾ ವನ । [5]ಪಿ[5]ರಿದು ಶೋಭೆಯೊಳೊಪ್ಪುತಿಹುದು ೬೨

ಆ ವನದೊಳಗೆ ಸಾರಂಗ ನವಿಲು ಹಂ[6]ಸೆ[6] । ಪಾವನ ಶುಕ ಪಿಕನಿಕರ
ಭಾವಿಸಿನೋಡೆ ನಾನಾವಿಧ ಖಗ ಮೃಗ । ತೀವಿರುತಿರ್ದವಾ ವನದಿ ೬೩

ಮಂದಮಾರುತ ಕಂದರ್ಪವಸಂತನು । ಚಂದದೆ ಬಂದೊನದೊಳಗೆ
ಚಂದದಿಂದಲಿ ತನ್ನ ಬಳಗನ ನೋಡುತಾ । ನಂದದೊಳಿತಿರ್ದನಾಗ ೬೪

ಸುರಮಿಥುನಗಳೆಲ್ಲ ಹರುಷದಿಂದಲಿ ಬಂದು । ಸರಸಿಯೊಳ್ ಜಲಕ್ರೀಡೆಯಾಡಿ
ವಿರಹದಿಂದಲಿ ಲತಾಮಂಟಪವನು ಹೊಕ್ಕು । ಸುರತಸುಖದೊ[7]ಳಿರು[7]ತಿಹರು ೬೫

ಶಾಲಿಯವನ ಪುರವನು [8]ಬಳಸಿ[8]ರೆ ಬಂದು । ಸಾಲಿಟ್ಟು ಶುಕಪಿಕ[9]ನಿಕರ[9]
ಜೋಲುತೆನೆಗಳ ಕಡಿದು ಕಚ್ಚಿಯಿರಲವ । ಬಾಲೆಯರ[10]ದ[10] ಸೋಹುತಿಹರು ೬೬

---

[1] ಯಿಂ (ಕ) [2] ಇ (ಕ) [3] ಕ (ಗ) [4] ನನ (ಕ) [5] ಪ (ಗ) [6] ಗಂಸೆ (ಕ) [7] ಳ (ಕ)

[8] ಸು (ಕ) [9] ರಾಗಿ (ಕ) [10] ವ (ಕ).

ಮುತ್ತಿನಸರ ಕಸ್ತೂರಿರಾಜಾನ್ನ ಕೆಂ। ಬತ್ತಿ ಶಾಲಿಯು ಗದ್ದೆ ಇರಲು
ಮತ್ತೆ ಪಾಮರಿಯರ ಕಾಪಿನೊಳಾ ವನ। ಸುತ್ತಿರುತಿರ್ದುದಾ ಪುರವ ೬೭

ತನ್ನ ನಂದನೆ ಪುರದೊಳಗಿರೆ ಕ್ಷೀರಾಬ್ಧಿ। ಸನ್ನಿಯಿಂದಪ್ಪಿದಂದದೊಳು
ಪನ್ನಗಲೋಕವ ಮುಟ್ಟುವ ಜಲಖಾಂತಿ। ತನ್ನೊಳವನೆ ತೋಱದಿಹುದು ೬೮

ಅರಿಭೂಪರೆದೆತರುಗಳನು ಪಾಲಿಸುತಿರ್ಪ। ಗರಗಸದಂತೆ ಶೋಭಿಸುತ
ಪುರದ ಸುತ್ತಣ ಕೋಂಟೆ ರವಿಯ ಬಿಂಬವ ಸೋಂಕಿ। ಇರುತಿರ್ದುದೇನ ಹೇಳುವೆನು ೬೯

ಅಷ್ಟದಿಕ್ಕಲಿ ಅಟ್ಟಣೆಗ[1]ಳು [1]ಇರ್ದವು। ಅಷ್ಟದಿಗ್ಗಜಗಳಂತೆ
ದುಷ್ಟನೃಪರ ಎದೆಯೊಳಗಿರ್ದ ಮದವನು। ನಷ್ಟಮಾಡು[2]ತಲಿ[2]ರ್ದವಾಗ ೭೦

ಆಳುವೇರಿಯ ಮೇಲೆ ಸಾಲು ಅ[3]ಟ್ಟ[3]ಣೆಗಳು। ಪೇಳಲಳವೆ ಧರೆಯೊಳಗೆ
ಭೂಲೋಕದೊಳಗೆಣೆಗಾಣೆನು ಕೋಂಟೆಯು। ಮೇಲಣ ಸೌಂಣೆಯಿರವ ೭೧

ಆ ಪುರ[4]ದಧಿ[4]ಪತಿ ಉದಿತೋದಯನತಿ। ರೂಪ ಕಲಾನ್ವಿತಯುತನು
ಪಾಪ[5]ಭೀ[5]ತನು ಪರಹಿತಗುಣನೃಪಕುಲ। ದೀಪಕನೆನಿಸಿ ರಾಜಿಪನು ೭೨

ಅರಿನೃ[ಪ][6]ವೀರಮಾರ್ತಾಂಡನು ಜಿನಮತ। ಶರಧಿಶಶಾಂಕನೆಂದೆನಿಪಾ
ಧುರಧೀರ ವಿನಯಜನ[7]ಕೆ[7] ಕಲ್ಪಭೂರುಹ। ದೊರೆಗಳ ದೇವನೊಪ್ಪಿದನು ೭೩

ಹರಿಕುಲ ಗಗನಭಾಸ್ಕರನೆಂದೆನಿಪನು। ಹರಿವಿತರಣ ಶೌರ್ಯಯುತ[8]ನು[8]
ಮೊಱೆ[3] ಹೊಕ್ಕವರಿಗೊಜ್ರಪಂಜರ ರಿಪುರಾಯ। ಶರಧಿಗೆ ಕುಂಭಸಂಭವನು ೭೪

ಸತ್ಯದಿ ಧರ್ಮಜ ನಿತ್ಯಭೋಗದೊಳಿಂದ್ರ। ಮತ್ತೆ ತ್ಯಾಗದೊಳ್ ಕರ್ಣನೆನಿಸಿ
ವಿತ್ತದಿ ಧನಪತಿ ಮಿಗಿಲೆನಿಸಿ[9]ರ್ದ[9] ಭೂ। ಪೋತ್ತಂಸನೊಪ್ಪುತಿರ್ದ ೭೫

ಮಾನದುರ್ಯೋಧನ ದಾನದಿ ಶ್ರೇಯಾಂಸ। ಭೂನುತ ಶೌರ್ಯಕಿರೀ[10]ಟಿ[10]
ಏನ ಹೇಳುವೆ ಚೌಪಷ್ಟಿವಿ[11]ದ್ಯ[11]ಗಳ। ತಾನು ಲಾಲಿಸಿ ಮೆಚ್ಚ[12]ನೀವ[12] ೭೬

---

[1] ಳ (ಕ) [2] ತ್ತಿ ಇ (ಕ) [3] ಠ (ಕ) [4] ದ (ಕ) [5] ಹಿ (ಕ) [6] ಪತಿ (ಕಗಜ) [7] ಕ್ಕೆ (ಕ)
[8] ಕ್ತ (ಕ) [9] ದಾರ್ (ಕ) [10] ಟ (ಕ) [11] ದ್ಯ (ಗ) [12] ನಿವರ (ಕ)

ಮಂಡಲದೊ[1]ಳು[1] ತನ್ನ ಪೊಗ[2]ಳದ[2] ಭಂಟರ । ಗಂಡನೆಂದೆನಿಸಿ [3]ಘೇ[3]ದಿಸುವ
ಕೊಂಡಾಡಿದವರ ಮನ್ನಿ[4]ಸಿ[4]ರ್ದ ಭೂಪರ । ಗಂಡ[5]ನೆಂದೆನಿ[5]ಸಿಕೊಂಡಿರುವ ೭೭

ಬಾಂಧವಜನ[6]ಕೆ[6] ಚಿಂತಾಮಣಿಯೆನಿಸುವ । ಮಂದಾರಧೀರನುಧಾರ
ಕಂದರ್ಪವಿಜಯನ ಪಾದಾಬ್ಜಭೃಂಗನು । ತಂದೆಯಾದನು ಸಜ್ಜನರಿಗೆ ೭೮

ಸೊಕ್ಕಿದ ರಾಯರ ಹಿಡಿತಂದು ಸೆಬಿ[3]ಯನು । ಇಕ್ಕಿ ಅವರ ಸೊಕ್ಕಮುಬಿ[3]ದು
ಗಕ್ಕನೆ ತನ್ನಡಿಗೆಱ[7]ಗಿ[7]ದವರ[8]ನೆಲ್ಲ[8] । ಅಕ್ಕರದಿಂದ ಬೀಳ್ಕೊಡುವ ೭೯

ಸುತ್ತಣ ರಾಯರ ಗೃಹದೊಳು ಇರುತಿಹ । ಉತ್ತಮಗಜ ಹಯ ಖಡ್ಗ
ಮು[9]ತ್ತಾ[9] ಸ್ತ್ರೀರತ್ನಾಭರಣವಿರಲು ಪಾದ । ದೊತ್ತಿಗೆ ತರಿಸುವಾಕ್ಷಣದಿ ೮೦

ಮೊಱ[3]ಹೊಕ್ಕವರ ಮನ್ನಿಸುವನು ಮಲತರ । ಶಿರವ ಚೆಂಡಾಡಿ ಮತ್ತವರ
ಪುರವನು ಸೆಳಕೊಂಡು ಠಾಣ್ಯವನಿಕ್ಕುವ । ದೊರೆಯ ಶೌರ್ಯವನೇನೆಂಬೆ ೮೧

ಭುವ[10]ನಾ[10]ಧಿಪತಿ ಅರಮನೆಯ ಚೆಲ್ವಿಕೆಯನು । ವಿವರಿಸಲೆನ್ನಳವಲ್ಲ
ಭುವನವ ಪೊತ್ತವಗಲ್ಲದೆ ಕವಿಗಳ । ನಿವಹಕ್ಕೆ ಗೋಚರವಹುದೆ ೮೨

ಸುತ್ತ ಪೊಮ್ಮ[11]ದಿ[11]ಲಿಂದಲಿ ನವರತ್ನ । ಕೆತ್ತಿಮಾಡಿಸಿದ ಗೃಹಗಳು
ಸುತ್ತ ರಾಜಿಸುತಿರೆ ಭೂಪನ ಕರುಮಾಡ । ಮತ್ತು ವಿಚಿತ್ರವಾಗಿಹುದು ೮೩

ರಾಜಭವನವೆಂಬ ಕಮಲದ ಮಧ್ಯದಿ । ರಾಜಿಪ ಕರ್ಣಿಕೆಯಂತೆ
ರಾಜನ ಕರುಮಾಡ ಶೋಭಿಸುತಿರ್ಪುದು । ರಾಜರಾಜನ ವಾಸದಂತೆ ೮೪

ಇಂದ್ರ[12]ನ ಧನು[12]ವೆ ಸ್ಥಿರವಾದಂತೆ ರತ್ನಾದ್ರಿ । ಬಂದು ನಿಂತಿತೋ ಎಂಬಂತೆ
ಚಂದ್ರಾರ್ಕರಿಗೆ ಪದಗೊಡದೆ ಗಗನದೊಳು । ಅಂ[13]ದವ[13]ತ್ತಿರೆ ಕರುಮಾಡ ೮೫

ಭೋಜನಶಾಲೆ ಮಜ್ಜನಶಾಲೆ ಜಪಶಾಲೆ । ರಾಜನ[14]ಧ್ಯಾಯನ[14]ಶಾಲೆ
ವಾಜಿಯಶಾಲೆ ವಾರಣಶಾಲೆ ಮುಂಗಡೆ । ರಾಜಿಪ ಪಟ್ಟಶಾಲೆಗಳು ೮೬

---

1 ಳ (ಗ) 2 ಳ್ದ (ಕ) 3 ಬ (ಗ) 4 ಸದಿ (ಕ) 5 ನೆ (ಕ) 6 ಕ್ಕೆ (ಕ) 7 ಗಸಿ (ಕ) 8 ನೆ (ಕ)
9 ತ್ತು (ಗ) 10 ನ (ಕ) 11 ಡ (ಕಚ) 12 ನು (ಕ) 13 ದೆ (ಗ) 14 ಧ್ಯಯದ (ಕ)

ಮಾರಜನ್ಮಭರೂಪ ವಾರಿಧಿಗಂಭೀರ । ಮೇರುಸಮಾನಸುಧೀರ
ಸಾರಸದ್ಗುಣಮಣಿಭೂಷಣ ಕುಲದೀಪ । ಧೀರಪದ್ಮೋದಯನೆಸೆದ ೫೯

ಶ್ರೀದಿವಿಜೇಂದ್ರವಂದಿತಪಾದಪದ್ಮನೆ । ಬೋಧಸಾಗರ ಚಂದ್ರಮನೆ
ಸಾಧುವಂದಿತ ಸ ಪಾರಿಶ್ವಜಿನೇಶನ । ಪಾದಾರವಿಂದಕೊಂದಿಸೆನು ೬೦

ಕ್ಷೀರಸುತೆಯಾಪತಿಸುತನಾಯುಧನೈದ । ದೂರಿಸಿ ಧರೆಗೆ ಧರ್ಮವನು
ಸೇರಿಸಿ ನಿಶ್ರೇ[1]ಯ[1]ಪಥವ ತೋಱುವನಂಘ್ರಿ । ವಾರಿಜಗಳಿಗೆಱಗುವೆನು ೬೧

---

[1] ಯಸವ (ಠ)

# ಐದನೆಯ ಸಂಧಿ

ಧರಣೀಪಾಲಕ ಪದ್ಮೋದಯ ಒಂದುದಿವಸದಿ । ಹರಿಪೀಠದೊಳು ಕು[1]ಳಿತಿ[1]ರ್ದ
ಹರಿವಿತರಣಶೌರ್ಯಯುತ ರಿ[2]ಪುಮನ್ಯಪ[2]ವನ । ಶರಧಿಗೆ ಕುಂಭಸಂಭವನು ೧

ಮಾಂಡಲೀಕ[3]ರ[3] ಮನ್ನೆಯ[4]ರ[4] ಸಾಮಂತ[5]ರ[5] । ದ[೦]ಡನಾಯಕರ ರಾವುತರ
ಗಂಡುಗಲಿ[6]ಯ ಭ[6]ಟನಿವಹವಿದ್ದುದು ಭೂ । ಮಂಡಲೇಶ್ವರನ ಓಲಗದಿ ೨

ವಿಪ್ರೇಳ್ಗೆ ಸಂಭಿನ್ನಮತಿ ಮಂತ್ರಿಯೊಡಗೂಡಿ । ಭೂಪನಿದ್ದನು ಓಲಗದಿ
ಆ ಪುರದೊಳಗೊರ್ವ ರೂಪ್ಯಖುರನೆಂಬ । ಪಾಪಚರಿತನಿರುತಿಹನು ೩

ನೆತ್ರ ಪಗಡೆ ಚದುರಂಗ ಗಿರಿಜೆ ಬಾ[ರಾ][7] । ಗುತ್ತ್ರಯಾತ್ರವು ಮಂತ್ರ ತಂತ್ರ
ಮತ್ರ ವೆಸನವೇಳರೊಡಗೂಡಿ ಖಳ ತಾನು । ವರ್ತಿಸುತಿರ್ದನಾ ಪುರದಿ ೪

ಪಾಪಿ ಕಣ್ಣಿಗೆ ಅಂಜನವಿಟ್ಟು ಪುರದೊಳು । ವಿಪ್ರೋತ್ತು ಕದ್ದು ವಿತ್ತವನು
ರೂಪುಜೀವಿಯರಿಗೆ ಇತ್ತು ಮತ್ತವರೊಳು । ಪಾಪಚರಿತನಿರುತಿಹನು ೫

ಒಂದುದಿವಸ [8]ರೂಪ್ಯಖುರ[8] ಪೇಟೆಯೊಳ್ ಮುದ । ದಿಂದ ಜೂಜಾಡಿ ಸೋತು
ಒಂದಕ್ಕೆರಡ ಗೆಲಿದಿರ್ದೊಡೆ ವಿಪಾಸೆಯು । ಲ್ಲಿಂದು ಮತ್ತಾಡಿ ತಾ ಸೋ[9]ತ[9] ೬

ಈ ಪರಿ ರೂಪ್ಯಖುರ[10]ನು ತಾನು[10] ಜೂಜಾಡಿ । ತಾ ಪೋಗುತಿರೆ ಕ್ಷುಧೆಯಿಂದ
ಭೂಪನ ಗೃಹದ ಬಾಗಿಲ ಮುಂದೆ ನಡೆವಾಗ । ಪಾಪೋದಯವು ತೋಜಿತವಗೆ ೭

ಭೂಸುದತೀಶನ ಗೃಹದೊಳ್ ಕಜ್ಜಾಯವ । ಲೇಸಾಗಿ ಮಾ[11]ಡೆ[11] ಸೌರಭ್ಯ
ಓಸರಿಸದೆ ದೆಸೆದೆಸೆಗೆ ಹೀಡಲು ಅದ । ವಾಸಿಸಿದನು ಚೋರ ಅಂದು ೮

---

1 ಳ್ಳ (ಗ) 2 ಪು (ಕ) 3 ರು (ಕ) 4 ರು (ಕ) 5 ರು (ಕ) 6 ಭ (ಗ)

7 ರ (ಕಜ) ರು (ಗ) 8 ಸ (ಕ) 9 ತು (ಕ) 10 ರ (ಕ) 11 ಡಿ (ಕ)

ಇಂತಪ್ಪ ಕಜ್ಜಾಯದ ಬಗೆಯನು [1]ನಾ[1]ನು । ಚಿಂತೆ ಕಂಡವನಲ್ಲ ಇದನು
ಸಂತೋಷದಿಂ[2]ದ ನಾ[2] ಕಾಣ್ಬುದಜಿ[3]ದೆ[3] ಎಂದು । ಭ್ರಾಂತ ಕಣ್ಣಂಜನವಿಟ್ಟು ೯

ಬಾಗಿಲ ಒಳಪೊಕ್ಕು ಪೋಗುವಾಗಲು ಚೋರ । ತಾಗದೆ ತಾನು ಒಬ್ಬರನು
ರಾಗದಿ ಪೋಗುತ್ತ ಅದೃಶ್ಯದಿಂದಲಿ । ಸಾಗಿದನೊಳಬಾಗಿಲನು ೧೦

ಆನಂದದಿಂದಲಿ ಆ ಪಾಪಿ ತಾನಾಗ । ಭೂನಾಥನರಮನೆ ಹೊಕ್ಕು
ಮಾನಿನಿಯರು ಉಡುತೊಡುವುವ ಕಣ್ಣಾರೆ । ತಾನು ಕಂಡನು ಮುದದಿಂದ ೧೧

ಅಲ್ಲಿಂದ ಅರಸಿನಾರೋಗಣೆ ಗೃಹಕಾಗಿ । ನಿಲ್ಲದೆ ಪೋ[4]ಗಿ ಆ[4] ಖಳನು
ಸಲ್ಲೀಲೆಯಿಂದವ ದಿಂಡೆಯೊಳ್ ನಿಂದನು । ಖುಲ್ಲಮನುಜ ಕುಟಿಲದೊಳು ೧೨

ಅಲ್ಲಿ ಅರಸು ತಾನು ಅಡ್ಡಣಿಗೆಯ ಮುಂದೆ । ಉಲ್ಲಾಸದಿಂದ ಕುಳ್ಳಿರಲು
ಫುಲ್ಲಾಕ್ಷಿಯರು ತಂದು ಬಡಿಸುವ ಬಗೆಗಳ । ನುಲ್ಲಾಸದಿಂ ನೋಡುತಿದ್ದ ೧೩

ಅರಸನ ಮುಂದಿದ್ದ ಅಡ್ಡಣಿಗೆಯ ಮೇಲೆ । ತರುಣಿಯರ್ ತಂದು ತಾವಾಗೆ
ಶರತರದೊಳು ತಟ್ಟೆ ಹರಿವಾಣ ಬಟ್ಟಲು । ಇರಿಸಿದರತಿ ಜತನದೊಳು ೧೪

ಶಶಿಮುಖಿಯರು ತಂದು ಹೊಸಹೊನ್ನ ಪಾತ್ರೆಯೊಳ್ । ಬಿಸಿಯನ್ನ ತೊ[ವ್ವೆ][5]
ಪಳಿದ್ಯವನು
ಹೊಸತುಪ್ಪ ಕಜ್ಜಾಯ ಪಾಯಸ ತಾಳಿಲು । ಷಡುರಸಾಯನ ಬಡಿಸಿದರು ೧೫

ಹಪ್ಪಳುಪ್ಪಿನಕಾಯಿ ಹಾ[6]ಲು[6] ಮೊಸರು ಹಣ್ಣು । ಒಪ್ಪದಿ ಕಟ್ಟನ್ನಗಳನು
[7]ತಪ್ಪದೆ ತು[7]ಪ್ಪ ಸಕ್ಕ[8]ರೆ[8] ಷಡುರಸಗಳ । ನೆಪ್ಪದಿನಜಿದು ಬಡಿಸಿದರು ೧೬

ಚಿಂದದಿ ತಂದಿಡೆ ಕಂಡು ಕಳ್ಳನು ತಾನು । ತಂದು ಬಾಯೊಳು ನೀರ ಮತ್ತೆ
ಬಂದುದು ಬಲಿದಜಿಂದಲೆನುತ ಪಾಪಿ । ಬಂದು ಕುಳಿತ ನೃಪನೆಡೆಗೆ ೧೭

ಮಾನಿನಿಯರು ತಂದು ಬಡಿಸುವ ಕೈಗಳ । ತಾನು ಸೋಂಕದೆ ಜತನದೊಳು
ಭೂನಾಥನೊಡನುಂಡು ಸಂತೋಷದಿಂದಲಿ । ತಾನು ಪೋದನು ತನ್ನ [9]ಮನೆಗೆ[9] ೧೮

---

[1] ತಾ (ಕ) [2] ದ (ಕ) [3] ದು (ಕ) [4] ಗಿ (ಕ) [5] ಯೆ (ಕ) ಯು (ಗಜ) [6] ಲ (ಗ)
[7] ತು (ಕ) [8] ರೆಸತು (ಗ) [9] ಗೃಹಕೆ (ಗ)

ಕುರಿ ಬಾಳೆಹಣ್ಣನು ಮೆಚ್ಚಿದಂದದಿ ಚೋರ । ಅರಸಿನೊಡನೆ ನಿರ್ಭಯದಿ
ಇರದಾಜುತಿಂಗಳು ಭುಂಜಿಸೆ ಭೂಪಗೆ । ಕರಗಿತು [1]ತನು[1] ಕಾಂತಿಗುಂದಿ ೧೯

ಈ ಪರಿಯೊಳು ತನು ಬಡವಾದುದನು ಕಂಡು । ಭೂಪಗೆ ಮಂತ್ರಿಯಿಂತೆಂದ
ಆ[2]ಪ[2]ತ್ತು ತನುವಿನೊ[3]ಳೇನೆ[3]ಂದು ಕೇಳ್ದೊಡೆ । ಭೂಪನಿಂತೆಂದ ಮಂತ್ರಿಯೊಳು ೨೦

ಏನೆಂದರಿಯೆ ನಾನುಂಬ[4]ನಿತಶ[4]ನವು । ತಾನಿಲ್ಲ ಹರಿವಾಣದೊಳಗೆ
ಮಾನಿನಿಯರು ಬಡಿಸಿದ ಅಶನದೊಳರ್ಧ । ತಾನು ಮಾಯವು ಆಗುತಿದೆಕೋ ೨೧

ಅದರಿಂದ ತನು ಬಡವಾದುದು ಈಗಲು । ಅವನ ಸೊರಲು ನಾಣ್ಚಿಯಿರ್ದೆ
ಚತುರಮಂತ್ರಿ ಇಂತೆಣಿಸಿದ ಮನದೊಳು । ಇದು ಭೂತವಲ್ಲವೆಂದರಿದ ೨೨

ಭೂತಗಳಿಗೆ ಆಹಾರ ಎಳ್ಳನಿತಿಲ್ಲ । ಪ್ರೀತಿನೋಟವು ಹೊರತಾಗಿ
ಪಾತಕಮನುಜನು ಅದೃಶ್ಯ[5]ವನ[5] ತಾಳ್ದು । ಪ್ರೀತಿಯಿಂದಲಿ ಉಣುತಹನೆ ೨೩

ಈ ಪುರದೊಳಗೆ ಈ ವಿದ್ಯೆ ಅನ್ಯರಿಗಿಲ್ಲ । ರೂಪ್ಯಖುರನು ತಪ್ಪದೆಂದು
ಪಾಪಿಯು ಹಿಡಿವುದಕೊಂದು ಯುಕ್ತಿಯ ತಾನು । ಭೂಪನ ಸಚಿವ ತಾ ನೆನೆದ ೨೪

ಎಕ್ಕೆಯ ಮುಗುಳ್ಗಳ ತರಿಸಿ ಘಟದಲಿ ಕೆಂ[6]ಡ[6] । ಇಕ್ಕಿ ಜಟ್ಟಿಗ[7]ಳ[7] ಈರ್ವರನು
ಚೊಕ್ಕಧೂಪದ ಚೂರ್ಣವ ಪರಾತಿ ಭೋಜನ । ಕಿಕ್ಕಿದರೊಂದು ಗೂಡದೊಳು ೨೫

ಅಂದರ[8]ಸಿನ[8] ಆರೋಗಣೆಗೃಹದೊಳು । ತಂದು ಹರಹಿ ಎಕ್ಕೆಮುಗುಳ
ಬಂದು ಕಳ್ಳನು ಕಾಲಿಡುವಾಗ ಚಟಿಲೆನೆ । ಹೊಂದಿಸಿದರು ಕದಗಳನು ೨೬

ಘ ದ ಕೆಂಡಕೆ ಧೂಪವಿಕ್ಕಲಾ ಧೂಮದಿ । [9]ಕಟಕಟ[9]ನುದುರೆ ಕಣ್ಣೀರು
ಚಟುಲನೇತ್ರದ ಅಂಜನ ಕರಗಲು ಕಳ್ಳ । ಪಟುವಾಗಿ ತೋರಿದನಾಗ ೨೭

ತೊಟ್ಟನೆ ಅಡಗಿದ ಭಟರೆಯ್ದಿ ಹೆಡಗೆಯ್ದು । ಕಟ್ಟಿ ಕಳ್ಳನ ಬಾಯ ತಟ್ಟಿ
ಕಟ್ಟಿಕೊಂಡೋಗದೆ ಭಂಡಾರವನು ದ್ರೋಹಿ । ಹೊಟ್ಟೆಯ ಹೊರೆದೆ ಈ ತೆರದಿ ೨೮

---

[1] ನರು (ಕ) [2] ಪೊ (ಗ) [3] ಳೆ (ಕ) [4] ರಿತೆರ (ಕ) [5] ವ (ಕ) [6] ಡವ (ಕಗ)
[7] ಳನು (ಕಗ) [8] ಹಿದ (ಕ) [9] ತಟ್ಟ (ಕ)

ಎಂ[ದು] ಮೂದಲಿಸಿ ಪೇಟೆಯೊಳು ಮೆಱೆಸುವಾಗ । ಬಂದು ನೋಡುವ ಜನರೆಲ್ಲ
ಇಂದು ಈ ಚೋರನ ಬಾಳು ವಿಪ್ರನ ವ್ಯಾಘ್ರ । ತಿಂದ ತೆಱನು ಆಯಿತೆನಲು ೨೯

ಭೂಸುರನನು ವ್ಯಾಘ್ರ ತಿಂದುದನೊರ್ವನು । ಲೇಸಾಗಿ ಕೇಳೆ ಮತ್ತವಗೆ
ಓಸರಿಸದೆ ಅವನಿಂತೆಂದು ಪೇಳ್ದನು । ಮಾಸದ ಕಥೆಯ ಕೇಳೆಂದು ೩೦

ಒಂದು ಪಟ್ಟಣದೊಳು ಅರಸಿನ ಸುತೆ ತಾನು । ಸೌಂದರವತಿ ಓದುತಿರಲು
ಬಂದು ದೇಶಾಂತರಿ ವಿಪ್ರನವಳ ಕಂಡು । ಚೆಂದಕೆ ತಾ ಮಱುಳಾಗಿ ೩೧

ಇವಳನೊ[1]ಯ್ವು[1]ದಕೊಂದು ತಂತ್ರವನೆಣಿಸಿ ತಾ । [2]ಭುವ[2]ನೇಶನೆಡೆಗೆಯ್ದಿ ಬಳಿಕ
ಸವಿನುಡಿಯಿಂದ ಆಶೀರ್ವಾದ ಮಾ[3]ಡಿ[3] । [ಕೊವಿದರು][4] ಮೆಚ್ಚುವಂದದೊಳು ೩೨

ಏನು ವಿದ್ಯವ ಬಲ್ಲಿ[5]ರಿ[5] ನೀವು ಎನೆ ವಿಪ್ರ । ನಾನಱಿಯದ ಶಾಸ್ತ್ರವಿಲ್ಲ
ಭೂನಾಥ ಕರೆಸು ನಿನ್ನಯ ಪುತ್ರರೆಲ್ಲರ । ನಾನು ನೋಡುವೆ ಹಸ್ತಗಳನು ೩೩

ಅರಸು ಕರೆಸಿದನು ಸುತರನು ಸುತೆಯರ । ಕರವ ಪಿಡಿದು ನೋಡಿ ದ್ವಿಜನು
ಹರುಷದಿ ಇವರೆಲ್ಲ ಸುಖದೊಳು ಬಾಳ್ವರು । ಕೊಱತೆಯಿಲ್ಲಪರಂಗದೊಳಗೆ ೩೪

ಭುವನೇಶ ಕಿಱಿಯ ಸುತೆಯ ಕರೆಸಲು ನೋಡಿ । ಇವಳು ನೆಱೆವ ಸಮಯದೊಳು
ಇವಳು ಹುಟ್ಟಿದ ಮನೆ ಹಾಳಾಗಿ ಹೋ[6]ಹು[6]ದು । ಇವಳ ತಂದವರು ಕೆಡುವರು ೩೫

ಅರಸು ಶಾ[7]ಸ್ತ್ರಿಯು[7] ನುಡಿ[8]ಗೇಳೆ[8] ತಾ ಭಯದಿಂದ । ಒರೆದನು ವಿಪ್ರನೊಳಿಂತು
ಪರಿಹರ ಇದಕೇನೆಂದು ಕೇಳ್ದೊಡೆ ವಿಪ್ರ । ಒರೆಯಲಂಜುವೆನೆಂದ ನೃಪಗೆ ೩೬

ನೀವು ಅಂಜುವುದೇಕೆ ಪೇಳೆಂದು ಶಾಸ್ತ್ರಿಗೆ । ಈವೂರ ಮುಂಗಡೆ ಪರಿವಾ
ದೇವಗಂಗೆಯೊಳಮವಾಸೆಯೊಳ್ ಬಿಟ್ಟೊಡೆ । ಆವ ದೋಷವು [9]ನಿ[9]ಮದಿಲ್ಲ ೩೭

ಅಂದು ತಾ ಪೋಗಿ ಗಾವುದಯೆ[ರ]ಡರೊಳ್ ಮುದ । ದಿಂದಮವಾಸೆ ಪರ್ವದೊಳು
ಚೆಂದದಿ ಕಾದಿರೆ ಇತ್ತ ನೃಪಾಲನು । ಮಂದಾಸ ಮಾ[10]ಡಿ[10]ಸಿ ಬಳಿಕ ೩೮

---

1 ಯಿವು (ಕಗ) 2 ವ (ಕ) 3 ಡ (ಗ) 4 ಕೋವಿದರೆಲ್ಲ (ಕಗಚ) 5 ರೆ (ಕ) 6 ಗುವ (ಗ)

7 ಸ್ತ್ರ (ಕ) 8 ಕೇಳುತ (ಕ) 9 ನ (ಕ) 10 ಡ (ಕ)

ತವಕದಿ ಸುತೆಯನು ಮಂದಾ[1]ಸದೊ[1]ಳಗಿಟ್ಟು । ಭುವನೇಶ ಬಿಡಿಸಿ ಹೋಗೆಯೊಳು
ಲವಲವಿಕೆಯೊಳ್ ಬರುತಿರೆಯೆಡೆಯೊಳಗೊರ್ವ । ಭುವನೇಶ ಬೇಟೆಗೆ ಪೋಗಿ[2]ರ್ದ[2] ೩೯

ಬಂದು ಬಾಯ್ಗಾ[3]ಜಿ[3] ನೀರ್ಗುಡಿವಾಗ ಮಂದಾಸ । ಚಂದದಿ ಬರುತಿರೆ ಕಂಡು
ಕುಂದದೆ ತರಿಸಿ ಮುಚ್ಚಳ ತೆಗೆಯ[4]ಲು ಅ[4]ಲ್ಲಿ । ಚಂದ್ರಮುಖಿಯ ಕಂಡನೊಳಗೆ ೪೦

ಅವಳ ತೆಗೆದುಕೊಂಡು ಅದಱ[3]ೊಳು ಪುಲಿಯನು । ಅವನಿಟ್ಟು ಬಿಡೆ ನದಿಯೊಳಗೆ
ತವಕದಿ ಬರುತಿರೆ ಕೆಳಗೆ ತಾ ಕಾದಿರ್ದ । ಅವ[5]ನೀ[5]ಸುತ ಕಂಡನದನು ೪೧

ನನ್ನ ಉಪಾಯಕ್ಕೆ ಸರಿಯುಂಟೆ ಧರೆಯೊಳು । ನನ್ನ ಪುಣ್ಯಕೆ ಎಣೆ[6]ಗಾಣೆ[6]
[7]ಕನ್ನೆ[7] ಕೈಸೇರಿದಳೆನುತ ಮಂದಾಸನು । [8]ತ[8]ನ್ನ ಮನೆಗೆ ಒಯ್ದು ಬಳಿಕ ೪೨

ಮುಚ್ಚಳ ತೆಗೆಯೆ ನಖದಿ ವ್ಯಾಘ್ರ ಬಡಿಯಲು । ಒಚ್ಚೊತ್ತು [9]ಕೈ[9]ರಿಸು ಎಂದ
[10]ಮು[10]ಚ್ಚು ದುರುಳವಿಪ್ರನ ತಿಂದು ಪೋದುದೆಂದಾ । ರಚ್ಚೆಯ ಮನುಜರಾಡಿದರು ೪೩

ಸುತ್ತ ಮೆಱೆ[3]ಸಿ ಶೂಲಕೆ ಹಾಕಿ ಇವನೊಳು । ಮತ್ತೆ ಮಾತಾಡಿ[11]ದ[11]ವರನು
ಕುತ್ತಿಹಾಕೆಂದು ಕಾವಲನಿಟ್ಟು ಇರುತಿರೆ । ಸತ್ತು ಹೋಗದೆ ಅಸುತಿರ್ದ ೪೪

ಕಾಯವಿಜಯನ ಪೂಜಿಸಿ ನವ[12]ದ್ಯಾ[12]ನು । ಪ್ರೀಯದಿ ಮನೆಗೆಯ್ದುತಿರಲು
ಬಾಯಗಾಜಿಂದೆ ನಾನು ಜಿನವಸ್ತ್ರ ಈಗಲು । ತೋಯುವ ತಂದೀವುದೆನಲು ೪೫

ನೀನು ರಾಜದ್ರೋಹಿ ನಿನಗುದಕವನೀಯೆ । ಭೂ[ನಾ]ಥ ದಂಡಿಪ ನನ್ನ
ನಾನುದಕವ ತರಲಾಗದೆಂದೊಡೆ ಚೋರ । ತಾನಿಂತು ಪೇಳ್ದ ನೀತಿಯನು ೪೬

ಬೇರುವೆರಸಿ ಕಿ[13]ತ್ತ[13]ವರಂಗರೋಗವ । ಹಱಿಸುವಂತೆ ಭೈಷಜ್ಯ
ವಾರಿಧಿಯುದಕ[ವ] ಪೊತ್ತ[14]ಂ[14]ದು [15]ಮೇಘವು[15] । ಧಾರಿಣಿ ಬೆಳಸ ಮಾಳ್ಪಂತೆ ೪೭

ಕಡಲು ಮೋಱೆ[3]ಯು ವಿಶಾಲ[3] ಕನಕಾದ್ರಿ ಕಂಪಿಸೆ । ಪಡುವಲುದಿಸೆ ಭಾನು ಮು[16]ತ್ತೆ[16]
ಪೊಡವಿಯು ಹೊತ್ತ ಕರ[17]ದ್ದು[17] ತಪ್ಪಲು ಬಿಡುವರೆ ಗುಣವ ಸಜ್ಜನರು ೪೮

---

1 ಸಿನೊ (ಗ) 2 ದರ್ (ಕ) 3 ರಿಸಿ (ಕ) 4 ಲ (ಕ) 5 ನಿ (ಕ) 6 ಯಿಲ್ಲ (ಗ)
7 ನನ್ನ (ಕ) 8 ನ (ಕ) 9 ಸ (ಕ) 10 ಹು (ಕಚ) 11 ದರ (ಗ) 12 ಯ್ಯ (ಗ)
13 ತ್ತ (ಕ) 14 ದ (ಕ) 15 ಬೆಳವುದಾ (ಕ) 16 ತ್ತು (ಗ) 17 ವ (ಕ)

ಪೊಡವಿಯು ಸೆಳೆಕೊಂಡು ಕಪ್ಪುರವ ಜೂಜಿದ । ಗಡಿಯು [1]ದಾಟಿಸಿದ[1] ಧರ್ಮಜನು
ಕಿಡೆನುಡಿಯದೆ ಕೇಡನೆಣಿಸದ ಕಾರಣ । ಬಿಡದೆ ರಾಜ್ಯವನಾಳ್ದುದಱಿಯು ೪೯

ಇವು ಮೊದಲಾದ ಅನೇಕ ನೀತಿಯ ಚೋರ । ವಿವರಿಸೆ ನಮ್ಮಯ್ಯನವಗೆ
ಸವಿನಯದಿಂದಲಿ ಪೇಳ್ದನು ಸ್ವರ್ಗದ । ಯುವತಿ ವಲ್ಲಭನಪ್ಪ ತೆಱನ ೫೦

ಏನು ಕೇಡಾದೊಡೆ [2]ಸಜ್ಜನರ್[2] ಗುಣಗಳ । ಹೀನ ಮಾಳ್ಪರೆಯೆಂದು [3]ಖಳಗೆ[3]
ತಾ ನುಡಿದನು ನನ್ನ ಗುರುವಿನ ಸೇವೆಯ । ಸಾನುರಾಗದಿ ಮಾಡಲೆನಗೆ ೫೧

ದಿವ್ಯಮಂತ್ರವನೊಂದ ಉಪದೇಶಗೈದೊಡೆ । ದಿವರಾತ್ರೆ ಪರಿಸುತಲಿ[4]ಹೆ[4]ನು
ತವಕದಿ ಉದಕವ ತರ[5]ಪೋದಡೆ[5] ಸ್ಮೃತಿ । ವಿವರಿಸೆ ತರಲಾಗದೆಂದ ೫೨

ಆ ಮಂತ್ರದ ಫಲವನು ನನ್ನೊಳುಸುರಿ[6]ದ[6] । ಪ್ರೇಮದಿ ಕೇಳಿ ನಮ್ಮಯ್ಯ
ಧಾಮಪ್ರೀತಿಯೊಳ್ ಪಂಚಪದದ ಸಾಮರ್ಥ್ಯವ । ಆ ಮಹಿಮಗೆ ಪೇಳ್ದನಿಂತು ೫೩

ಚೋರ ಮಾಱಿಸು ದುಃಖ ದಾರಿದ್ರ ಬಾಧೆಯ । ಹಾಱಿಸಿ ಮುಂದಣ ಭವಕೆ
ಸಾರಸುಖವನೀವ ಸ್ವರ್ಗಾಪವರ್ಗವ । ತೋಱಿಸುವುದು ನಿಮಿಷದೊಳು ೫೪

ಏನ[7] ಹೇಳುವೆ ಮುನ್ನ ಬಾವಿಯೊಳಗೆ ಬಿದ್ದು । ಶ್ವಾನ ತಾ ಕೇಳಿ ಕಲ್ಪದೊಳು
ಮಾನಿನಿಯರಿ[8]ಗೆ ವಲ್ಲಭನಾದ ಇದ ನೀನು । ಸಾನುರಾಗದಿ ಲಾಲಿಸೆಂದ ೫೫

ಜೋಗಿ ಕೂಪದೊಳು ಕೆಡಹಿ ತಾನು ಪೋದೊಡೆ । ನೀಗುತಿರಲು ಪ್ರಾಣವನು
ಬೇಗಲು ಚಾರುದತ್ತನು ಪೇಳೆ ಮಂತ್ರದಿ । ಪೋಗಿ ಜನಿಸಿದ ಸ್ವರ್ಗದೊಳು ೫೬

ಬಲುವೆಸನಗಳಿಂದ ಕುಲಗೆಟ್ಟು ಖಳ ತಾ[9]ನು[9] । ನೆಲಹ ಕುಯ್ಯಲು ಶ್ರದ್ಧೆಯಿಂದ
ಸುಲಲಿತ ಸುಖವೀವ ಸ್ವರ್ಗಾಪವರ್ಗವ । ನಲವಿಂದ ಪಡೆದ ಕೇಳೆಂದ ೫೭

ಬಾಗಿಲ ಮುಂದೆ ಬಿದ್ದಿರೆ ಶ್ವಾನನ ಕಂಡು । ನಾಗಶ್ರೀ ಪಂಚಪದವನು
ರಾಗದೊ[10]ಳಗೆ[10] ಬೇಗ ಪೇಳಲು ಕೇಳಿ ತಾ । ನಾಗ ಪೋ[11]ದನು[11] ಸ್ವರ್ಗದೊಳಗೆ ೫೮

---

[1] ದಾಂಟಿಸಿ (ಗ)  [2] ಡಾರ (ಗ)  [3] ದುಸುಡಿದಾ (ಕ)  [4] ಹ (ಕ)  [5] ಟೋಂ (ಗ)

[6] ದ (ಕ)  [7] ನು (ಗ)  [8] ಗೊ (ಕ)  [9] ಸ (ಗ)  [10] ಳ (ಕ)  [11] ಗಬು (ಕ)

ಅಂತಾದೊಡಾ ಮಂತ್ರ ಉಪದೇಶಗೈದೊಡೆ । ಸ[ಂ]ತೋಷದಿಂ ಪೇಳುತಿರ್ದ
ಕಂತುಸನ್ನಿಭ ನೀನು ನೀರ ತಂದಿತ್ತೊಡೆ । ಪಿಂತೆ ಪೇಳ್ದಂತೆ ಒಪ್ಪಿಸುವೆ ೫೯

ಇದು ಪ್ರಾಣಗತ ವೇಳ್ಯವೆಂದು ತಿಳಿದು ತಾನು । ಮುದದಿಂದ ಪಂಚ[1]ಮಂತ್ರ[1]ವನು
ಸದಮಲಗುಣನಿಧಿ ಪೇಳಿಪೋಗಲು [2]ಈತ[2] । ಅದ ಪಠಿಸುತ ಗತವಾದ ೬೦

ಆ[3]ಗಲಾ[3] ಪಂಚಮಂತ್ರದ ಫಲದಿಂದಲಿ । ಪೋಗಿ ಪುಟ್ಟಿದ [4]ಸೌಧರ್ಮದೊಳು
ಬೇಗ ವಿಮಾನದ ಬಾಗಿಲು ತೆರೆಯಲು । ರಾಗದಿ ಬಂದರೂಳಿಗ[5]ರು[5] ೬೧

ತೋಱಿತು ಅವಧಿಬೋಧವು ಮೂಱು ಗಳಿಗೆಯೊಳ್ । ಸಾರಮಂತ್ರದ ಫಲದಿಂದ
ಸೇರಿದೆ ಜಿನದತ್ತನಿಂದುಪಕಾರಿಗ । ಳಾರೆಂದು ಭಾವಿಸುತಿರ್ದ ೬೨

ಇತ್ತಲು ಜಿನದತ್ತ ನೀರ ತಂದಾಗಲು । ಸತ್ತುಹೋ[6]ದುದ[6] ನೋಡಲವನ
ಉತ್ತಮ ವದ[7]ನವು[7] ಕಳೆಗೂಡಿಯಿರುತಿರೆ । ಮತ್ತು ಸದ್ಗತಿಯಾಯಿತೆಂದು ೬೩

ಜಿನವಾಸಕೆಯ್ದಿ ಜಿನೇಂದ್ರಗೆಱಗಿ ವ[ಂ]ತ್ರೆ । ಜಿನಚಂದ್ರಾಚಾರ್ಯರ ಪದಕೆ
ವಿನಯ[8]ದಿ[8] ವಂದಿಸಿ ಇಂದಿಗೆ ಉಪವಾಸ । ಎನುತ ಕೈಕೊಂಡ ಭಕ್ತಿಯೊಳು ೬೪

ಮತ್ತೆ ಸ[9]ದ್ಧ[9]ರ್ಮವ ಕೇಳುತ ಬಸದಿಯೊ । ಳುತ್ತಮ ಜಿನದತ್ತನಿರಲು
ಅತ್ತ ಕಾವಲಭಟರೆಯ್ದಿ ಭೂಪಾಲಗೆ । ಬಿತ್ತರಿಸಿದರಿಂತೆಂದು ೬೫

ಜಿನದತ್ತ ಬಂದು ಮಾತಾಡಿದಾಕ್ಷಣ ಕಳ್ಳ । ತನುವನಳಿದು ಪೋದನೆನಲು
ಘನಕೋಪದಿಂದಲಿ ಜಿನದತ್ತಪರದನ । ಮನೆಯ ಸೂಱಿ ತಾಯೆಂದ ೬೬

ಬಿಡದೆ ಭಟರು ಬರುತಿರೆ ಸುರ[10]ಪತೀತ[10] । ನಡುನಡುಗುತ್ತ[11]ವಿರುತಿ[11]ರಲು
ಕಡೆಯದೆ ಅಮರೇಂದ್ರ ಅ[12]ವಧಿ[12]ಯಿಂದಱಿದಾಗ । ಕಡುಕೋಪದಿಂ ಧರೆಗಿಳಿದು ೬೭

ವೃದ್ಧಮಾನುಷರೂಪ ಕೈಕೊಂಡು ಪರದನು । ಇರ್ದ ಮನೆಯ ಬಾಗಿಲ್ಮುಂದೆ
ಉದ್ದಂಡತನದೊಳು ನಿಂದಿರೆ ಭೂಪನ । ಮುದ್ರೆಯ ಭಟರು ಬಂದಾಗ ೬೮

---

1 ಪದ (ಕ) 2 ಇತ್ತ (ಗ) 3 ಪ (ಕ) 4 ಧ (ಕ) 5 ಪು (ಗ) 6 ಗಲು (ಕ)

7 ನ 8 ದಿಂ (ಕ) 9 ಧ (ಕಗ) 10 ಪೀಠದಿ (ಕ) 11 ಲಿ (ಗ) 12 ದಿ (ಕ)

ನಿಷ್ಠಿ ನೀವಾ[1]ರು[1] ಬರುವರೆಂದು ಕೇಳಲು । ಸೊಲ್ಲಿಸದೈತರುತಿರಲು
ಎಲ್ಲರೀ ಕೋಲಿಂವ ಬಡಿವೆನೆನುತ ತಾನು । ಹಲ್ಲ ಕಡಿದು ಘರ್ಜಿಸಿದನು ೬೯

ಉರುಹಿದೊಡ್ಡಿಕ್ಷಂತೆ ಇರುತಿಹೆ [2]ನೀನೀ[2]ಗ । ಅರಸಿನೊಳಿಗದವರ್ಮೇಳಲಿ
ಕರವನಿಡಲು ನಿನ್ನ ಶಿರವ ಕಡಿವೆನೆಂದು । ಬರುತಿರೆ ಬಡಿದ ಕೋಲಿಂದ ೭೦

ಘುಡುಘುಡಿಸಲು ಮತ್ತೆ ಅವರೋ[3]ಡು[3]ತ ಕ್ಷಣ । ಪೊಡವಿಪಾಲಗೆ ಪೇಳ್ದರೊಡನೆ
ಕಡುಕೋಪದಿಂ ಶತಭಟರನು ಬಿಟ್ಟಡೆ । ಘುಡುಘುಡಿಸುತ ಬಂದರಾಗ ೭೧

ಎತ್ತಲೀಯದೆ ಕೈಕಾಲ್ಗಳ ಸ್ತಂಭಿಸಿ । ಮತ್ತೆ ಕೋಪದೊಳಿರುತಿರ್ದ
ಅತ್ತ ಭೂಪೇಂದ್ರನು ಚತುರಂಗಬಲಸಹ । ಎತ್ತಿಬಂದವನ ಮುತ್ತಿದರು ೭೨

ಎಲ್ಲ ವಾಹಿನಿಯನು ಮೂರ್ಛೆಯಿಂ ಕೆಡಹಿ ತಾ । ನುಲ್ಲಾಸದಿಂ ನೃಪತಿಯನು
ಕೊಲ್ಲುವೆನೆನುತ ರಾಕ್ಷಸರೂ[4]ಪ ಕೈ[4]ಕೊಳ್ಳೆ । ನಿಲ್ಲದೋಡಿದ ನೃಪ ಭಯದಿ ೭೩

ಎತ್ತ ಪೋದಡೆ ನಿನ್ನ ದೇಹವ ಭೇದಿಸಿ । ಮತ್ತೆ ದಿಗ್ಬಲಿಯ ಹಾಕುವೆನು
ಉತ್ತಮಜಿನದತ್ತಪರದನ ಮೊ[3]ಜಿ[3,5]ಹೋಗೆ । ಮತ್ತೆ ಬಿಡುವೆನೆಂದನಸುರ ೭೪

ಇಂತು ಭೇತಾಳ ಮೂದಲಿಸೆ ರಾಜೇಂದ್ರನು । ಕಂತುಹರನ ಗೃಹಕೆಯ್ದಿ
ಭ್ರಾಂತ ತಾ ನಡುಗುತ್ತ ಜಿನದತ್ತ ಶೆಟ್ಟಿಯೊ । ಳಿಂತು ನುಡಿದ ಭಯದಿಂದ ೭೫

ಗಕ್ಕನೆ ಭೇತಾಳ ನಿನ್ನ ಮೊಜಿ[3]ಯ ನಾನು । ಹೊಕ್ಕರೆ ಬಿಡುವೆನಲ್ಲದೊಡೆ
ದಿಕ್ಕುದಿಕ್ಕಿಗೆ ಬಲಿಗೊಡುವೆನೆನುತ ಈಗ । ಕೆಕ್ಕರಿಸುತ ಬರುತಹನೆ ೭೬

ಸಜ್ಜನ ಪರದನ ಮೊಜಿ[3]ಹೊಕ್ಕನೆನುತಲಿ । ವರ್ಜಿಸಿ ವೈಕುರ್ವಣೆಯನು
ನಿರ್ಜರಪತಿ ನಿಜರೂಪ ತಾಳಿದ ಕರ್ಮ । ವರ್ಜಿತನಾಲಯಕೆಯ್ದಿ ೭೭

ಜಿನದತ್ತ ಶೆಟ್ಟಿಗೆಜಿಗಿ ಸ್ತುತಿಗೆಯ್ದು ತಾ । ಜಿನಪತಿಗೊಂದಿಸಿ ಬಳಿಕ
ಜಿನಮುನಿಗಳಿಗೆ ನಮಿಸಿ ಕಂಡು ಭೂಪಾಲ । ಮನವೊಲಿದಿಂದ್ರಗಿಂತೆಂ[6]ದ[6] ೭೮

---

[1] ರ (ಗ) [2] ನಿನಗೀ (ಗ) [3] ಡಿ (ಕ) [4] ಪವ (ಕ) [5] ನೆ (ಗ) [6] ದು (ಕ)

ಅ[1]ರುಹ[1]ಗೆ ವಂದಿಸದೆ ಆಚಾರ್ಯರ್ಗೆ ನಮಿಸದೆ । ಪರವಂಚಿಸುವರೆ ಮುಂದೆ
ಮರಳಿ ಗಳಲ್ಲವೆ ಸ್ವರ್ಗದವರುಯೆಂದು । ಧರಣೀಶ ಇಂದ್ರನ ಹಳಿದ ೭೯

ಇಂತೆಂ[2]ದ[2] ಭೂಪಗೆ ಕೇಳಿಸುತಲಿ ದೇವ । ಸಂತೋಷದಿಂದ ಪೇಳಿದನು
ಭ್ರಾಂತಿಯಿಂ ನಿನ್ನೊಡನುಂಡು ಶೂಲಕೆ ಬಿದ್ದು । ಅಂತವಿಲ್ಲದೆ ನೋವುತಿರಲು ೮೦

ಪಂಚಮಂತ್ರ[3]ವ[3] ಜಿನದತ್ತ ಪೇಳಲು ಕೇಳಿ । ಚಂಚಲವಿಲ್ಲದೆ ಸತ್ತು
ಮುಂಚೆಜಿಗಿದೆ ಅವರಿಂದ ನಾ ಜಿನನಿಗೆ । ಹಿಂಚಿಜಿಗಿದೆ ಕೇಳು ನೃಪತಿ ೮೧

ಆವಾವ ಪಾತಕ[4]ವನು[4] ವಹ[5]ದೆ[5] ನರಕಕ್ಕೆ । ಓವದೆ ಪೋಪಾಗಲೆನ್ನ
ದೇವರು ಗುರುಗಳು ತಿದ್ದಿದಿಲ್ಲದರಿಂದ । ದೇವಗ[6]ದೆ[6]ನಂತ್ಯದೊಳು ೮೨

ಈತು ಪ್ರತ್ಯಕ್ಷವ ಕಂಡು ಭೂಪತಿ ತಾನು । ಕಂತುವೈರಿಯೆ ಶರಣೆಂದು
ಸಂತೋಷದಿಂದಲಿ ಜಿನದತ್ತ ಭೂಪಾಲ । ಶಾಂತರಾದರು ಮನದೊಳಗೆ ೮೩

ತನ್ನ ಸುತಗೆ ಪಟ್ಟವಗಟ್ಟಿ ಭೂಭುಜ । ಸನ್ನುತ ಜಿನದತ್ತವೆರಸು
ಮುನ್ನೂರ್ವರರಸುಮಕ್ಕಳು ಮಂತ್ರಿಸಹವಾಗಿ । ರನ್ನ ಮೂಜ[7]ನು[7] ಪಡೆವುದಕೆ ೮೪

ಜಿನಚಂದ್ರ ಭಟ್ಟಾರಕ ಸ್ವಾಮಿಗಳ ಕೈಯ । ಜಿನದೀಕ್ಷೆಯಾಂತು ತಾವೆಲ್ಲ
ಘನತಪವನು ಮಾಡಿ ಸ್ವರ್ಗಾಪವರ್ಗವ । ಅನುವಾಗಿ ಪಡೆ[8]ದರು[8] ಕಂಡು ೮೫

ನನಗೆ ಸಮ್ಯಕ್ತ್ವ ಪುಟ್ಟಿತುಯೆಂದು ಪೇಳಲು । ವನಿತೆಯುರಿಬ್ಬಾಯಿಯೆನಲು
ಜಿನುಗುವಾತಿಗೆ ನಾನು ಇಚ್ಛಾಯಿಯೆಂಬೆನೆ । ತನುಮನವಚನ ಶುದ್ಧಿಯೊಳು ೮೬

ಇಂತೆಂದು ಕುಂದಲತೆಯು ಪೇಳ್ದ ನುಡಿಯ ಭೂ । ಕಾಂತ ಮಂತ್ರಿಯು ಕೇಳಿ ತಾವು
ಚಿಂತೆ ಯಾವೆಲ್ಲರು ಕಂಡುದ ಪುಸಿಯೆಂ[9]ದ[9] । ಕಾಂತೆಯ ಬ[10]ಡಿ[10]ಸಬೇಕೆಂದ ೮೭

ಪೊತ್ತು ಮೆಟ್ಟಿದ ಮೇಲೆ[11]ಯಾ[11] ತೊತ್ತ ಹಿಡಿದು । ಕತ್ತೆಯ ಮೇಲಿಟ್ಟು ಮೆರೆಸಿ
ತೊತ್ತಿಗೆ ತೊತ್ತ ಮಾಡುವೆನೆಂದು ಭೂಪಾಲ । ಚಿತ್ತದೊಳೆಣಿಸಿದ[12]ನಾ[12]ಗ ೮೮

ಇದು ಭವ್ಯಜನಚಿತ್ತ ಕುವಲಯಚಂದ್ರಮ । ಇದು ಸಜ್ಜನರ ಕರ್ಣಾಭರಣ
ಇದು ಮುಕ್ತಿಸತಿಯು ತ[13]ಪ್ಪಲಿ[13]ಸುವ ವಿರಣ । ಇದ ಕೇಳ್ದ[14]ವ[14]ರ ಪಾಪ ಹರಣ ೮೯

---

[1] ರ್ಹ (ಗ) [2] ದು (ಕ) [3] ವು (ಕಗ) [4] ಕ (ಕ) [5] ಣವೆ (ಕ) [6] ಗಿ (ಕ) [7] ನೆ (ಗ)
[8] ದ (ಗ) [9] ದು (ಕ) [10] ಡಿದು (ಕ) [11] ಯಾ (ಕ) [12] ನೋ (ಕ) [13] ವನಿ (ಕ) [14] ರ (ಕ)

# ಆರನೆಯ ಸಂಧಿ

ಸುರ ನ[1]ರ ನಾ[1]ಗವಂದಿತಚರಣಾಬ್ಜ । ಪರಮಪಾವನ ಮುಕ್ತಿಯರಸ
ಕರುಣಾಸಾಗರಚಂದ್ರಮ ಸುಪಾರ್ಶ್ವೇಶ । ಶರಣು ಶರಣು ಜಗದೀಶ ೧

ಮನಸಿಜನಿಭರೂಪ ಅರುಹದ್ದಾಸನು ತನ್ನ । ವನಿತಾಮಣಿ ನಾಗಶ್ರೀಯು
ನಿನಗೆ ಸಮ್ಯಕ್ತ್ವ[2]ವು[2] ಜನಿಸಿದ ಬಗೆಯನು । ನನಗುಸುರೆನೆ ಪೇಳ್ದಳಿಂತು ೨

ಧರೆಯೊಳಧಿಕವಾದ ಕಾಶ್ಮೀರ ದೇಶದೊಳ್ । ಮೆರೆ[ವ]ವಾರಣಾಸೀ ಪುರವ
ಪರಿಪಾಲಿಸುವ ಜಿತಶತ್ರು ಭೂಪಾಲನ । ತರುಣಿ ಕಾಂಚನಚಿತ್ರೆಯಾ[3]ಗೆ[3] ೩

ಅಂಥವರಿರ್ವರ ಗರ್ಭದೊಳ್ ಪುಟ್ಟಿದ । ಕಾಂತೆ ಮುಂಡಿಕೆಯೆಂಬ ಸುತೆಯು
ಪಿಂತಣ ಅಘವಶದಿಂದ ಮೃತ್ತಿಕೆಯನು । ತಾಂ ತಳುವದೆ ತಿನ್ನುತಿಪಳು ೪

[4]ಪ್ರೋ[4]ರ್ದಿ ವೇ[5]ಯ್ಯೊಳ್[5] ರೋಗದಿಂದಲಾ ಕಾಂತೆಯು । ಇರ್ದ ಪಗಲು ಕಂಡು ನೃಪತಿ
ನೀರ್ದಾಟಿಸಲು ಕನ್ನೆ ಮತ್ತೊಂದು ತಾಣದಿ । ಪೊರ್ದಿ ಬಳಿವುತಿರ್ದಳಂದು ೫

ಬಣ್ಣವಳಿದು ಕನ್ನೆ ರೋಗದಿ ನರಳುತ್ತ । ಕಣ್ಣಲಿ ನೋಡದಂತಾಗೆ
ಹೆಣ್ಣಿಗೆ ರೂಪು ವಿಕಾರವಾಗಲು ಅಂಗ । ಬಣ್ಣವಳಿದು ಮುಜುಗಿದಳು ೬

ಇಂತಿರುತಿರೆ ಆ ಪುರದ ಉದ್ಯಾನದೊಳ್ । ಕಂತಿಕೆಯರು ಭವ್ಯಜನಕೆ
ಸಂತೋಷದಿಂದ ಶ್ರಾವಕರಿಗೆ ಧರ್ಮವ । ತಾಂ ತಳುವದೆ ಪೇಳ್ವ ಬಳಿಕ ೭

ನಾನಾ ಪ್ರಶಂಗಳ ಕೊಡಲು ಕಂತಿಕೆಯರು । ಸಾನುರಾಗದಿ ಕೈಕೊಂಡು
ಆನದೆ ಪೋಗುತಿರಲು ಕಂಡು ಮುಂಡಿಕೆ । ತಾನಲ್ಲಿಗೆಯ್ದಿದಳಾಗ ೮

---

1 ರೋಶ (ಗ)  2 ವ (ಗ)  3 ಗಿ (ಕ)  4 ಪ (ಕಿ)  5 ಯ್ಯೊ (ಗ)

ಸಂತೋಷದಿಂದ ತನ್ನಯ ಪಾಪ ಕೆಡಲೆಂದು । ಕಂತಿಕೆಯರ ಪಾದಕೆಱಗಿ
ಪಿಂತಣ ಅಘವೆಲ್ಲ ಕೆಡುವಂತೆ ವ್ರತವೊಂದ । ಅಂತರಿಸದೆ ಈವುದೆನಲು ೯

ಚೆಂದವಾಯಿತು ನೀನು ನೆನೆದ ಕಾರ್ಯವು ಮತ್ತೆ । ಹಿಂದೆ ಮಾಡಿದ ದೋಷ ತೊಲಗಿ
ಮುಂದೆ ಸುಖವು ನಿನಗಪ್ಪುದುಯೆಂದಾಗ । ಚೆಂದದಿ ಕೊಟ್ಟ[1]ರೀ[1] ವ್ರತವ ೧೦

ಹಿಂದಕ್ಕೆ ತಿಂದುದು ಹೋಗಲಿ ನೀನಿನ್ನು । ಮುಂದಕೆ ವೃತ್ತಿಕೆಯಿನಿಸ
ಎಂದಿ[2]ಗು[2] ಮೆಲ್ಲದಿರೆಂದು ವ್ರತವನೀಯೆ । ಅಂದು ಕೈಕೊಂಡಳಾ ಜಾಣೆ ೧೧

ಕನಕಪುತ್ಥಳಿಯ ಸೋಂಕಿದ ಪಾದರಸ ತಾನು । ಅ[3]ನ[3]ಲಮುಖದಿ ಕೆಡುವಂತೆ
ವನಿತೆ ವ್ರತ[4]ವ[4] ಧರಿಸಲು ತನುವಿನೊಳಿದ್ದ । ಘನವ್ಯಾಧಿ ತೊಲಗಿತಾಕ್ಷಣವೆ ೧೨

ನೀರೆ ವ್ರತವ ನಿಷ್ಠೆಯಿಂದ ನಡೆಸುತ್ತಿರೆ । ಹಾಱಿಪೋದುದು ಮೆಯ್ಯ ರೋಗ
ಗಾರುಡಿಗನ ಕಂಡ [5]ಹಾವು[5] ತಾ ಪುತ್ತವ । ಸೇರಿದಂತಾಗಲಾ [6]ಕಾಂತೆ[6] ೧೩

ಅಂಗದ ರೋಗ ಕೆಡಲು ಮುಂದಿಕೆ ತಾನು । ಶೃಂಗಾರ ಜವ್ವನ[7]ವೇಱೆ[7]
ಕಂಗೊಳಿಸುತ್ತಯಿರ್ದಳು ನೋಳ್ಪರ ಕಣ್ಣಿಗೆ[8] । [illegible]ಂಗಡಲಣುಗೆಯೆಂಬಂತೆ ೧೪

ತುಂ[9]ಬು[9]ದಿಂಗಳ ಮೊಗ ತುಱುಗಿವೆ ಅಲರ್ಗಣ್ಣು । ತುಂಬಿಗುರುಳು ತೊಂಡೆವಾಯಿ
ಕೆಂಬಲ್ಲು ಪೊಳೆವ ಕದಪು ಉಂಗುರನಡು । ಬಿಂಬಾಧರೆ [10]ಯೊಪ್ಪಿದಳಂದು[10] ೧೫

ಎಳೆವಾವಳ್ದುಟಿ ಅಳಿಕುಂತಳ ಹೇಮದ । ಕಳಸಕುಚದ ಕಂ[11]ಬು[11]ಗೊರಳ
ಥಳಥಳಿಸುವ ತಾರಾಸಖ ಮಂದಯಾನದ । ನಳಿನಾಕ್ಷಿಯೊಪ್ಪಿದಳಂದು ೧೬

ಭಾರಿಯಮುಡಿ ಬಟ್ಟಮೊಲೆ ಹರಿಮಧ್ಯದ । ಸಾರಂಗ[12]ಸಭ[12]ಲೋಚನದ
ಕ್ಷೀರವಾ[13]ಣಿಯು[13] ಮಾರನರಸಿಯು ಸೊಭಗನು । ಹಾಱಿಸುವಳು ಸೊಭಗಿನೊಳು ೧೭

ಎಳೆವಳ್ದುಟಿ ತಳಿ[14]ರಡಿ[14] ನಳಿತೋಳಿನ । ಥಳಥಳಿಸುವ ಚಂದ್ರಮುಖದ
ಪೊಳೆವ ಪೊಂಬಾ[15]ಳೆ[15]ದೊಡೆ[16]ಯು[16] ಸುಳಿನಾಭಿಯ ।
ನಳಿನಾಕ್ಷಿ[17]ಯೊಪ್ಪಿದಳಂತು[17] ೧೮

---

1 ರೆ (ಕ) 2 ಗೆ (ಗ) 3 ನಿ (ಕ) 4 ವು (ಗ) 5 ಉರಗ (ಗ) 6 ಕನ್ಯೆ (ಗ)
7 ವೆರಸಿ (ಕ) 8 ಣ್ಗೆ (ಗ) 9 ಬಿ (ಗ) 10 ಗೊಪ್ಪಿದವು (ಗ) 11 ಬ (ಗ) 12 ಭ (ಕ)
13 ರಣಿಯಾ (ಕ) 14 ರ (ಗ) 15 ಳಿಜು (ಜ) 16 ಯಿ (ಕ) 17 ಗೊಪ್ಪಿದಪಂದು (ಗ)

ರತಿಯೊ ಭಾರತಿಯೊ ಪಾರ್ವತಿಯೊ ಕ್ಷೀರಾಬ್ಧಿಯ। ಸುತೆಯೊ ಸೀತೆಯೊ ದ್ರುಪದಿಯೊ
ಕ್ಷಿತಿಯೊಳಗಿವಳಾರೆಂದು ಜನಂಗಳು। ಅತಿಪ್ರೀತಿಯಿಂದ ನೋಡಿದರು ೧೯

ಈ ಪರಿಯಲಿ ಸೊಬಗಾಂತ ಸುತೆಯ ಕಂಡು। ಭೂಪಾಲ ಮನೆಗೊಯ್ದು ಸುತೆಯ
ಚಾಪಲಾಕ್ಷಿಗೆ ಸರ್ವಾಭರಣವನಿತ್ತನು। ಏಪೇಳ್ವೆ ನೃಪನ ಉತ್ಸಹವ ೨೦

ಹಾರ ಪದಕ ಹರಳೋಲೆ ವಜ್ರದ ಸರ। ತೋರಮುತ್ತಿನ ಮೂಗುತಿಯು
ಭಾರಿಯ ಸರಪಣಿ ಕಡಗ ಕಾಲುಂಗುರ। ನಾರೀಮಣಿಗೆಯೊಪ್ಪಿದವು ೨೧

ಚಿಂತಾಕ ಪದಕ ಬಂದಿಯು ತೋಳಭಾಪುರಿ। ಕಾಂತಿವಿಡಿದ ಭುಜಕೀರ್ತಿ
ಅಂತರಿಸದೆ ಕಾಲ್ಗೊಪ್ಪುವಾಭರಣದಿ। ಕಾಂತೆಯೊಪ್ಪಿದಳ್ ರತಿಯಂತೆ ೨೨

ಸಾರಸದ್ಗುಣಮಣಿಭೂಷಣಿ ರತಿರೂಪೆ। ನಾರಿಯರಿಗೆ ಶಿರೋರನ್ನೆ
ಮಾರನ ಕೈಯರಗಿಣಿಯನು ಈಗಲು। ಆ[1]ರಿಗು ಕೊಡೆಯೆಂದನಾಗ[1] ೨೩

ಇನ್ನು ಸ್ವಯಂವರದೊಳು ಮನಬಂ[2]ದಂ[2]ತಾ। ಕನ್ನೆ ಮಾಲೆಯ ಸೂಡಿದವಗೆ
ಸನ್ನುತದಿಂದಲಿ ಮದುವೆ ಮಾಡುವೆನೆಂದು। ತನ್ನ ಚಿತ್ತದಿ ಯೋಚಿಸಿದನು ೨೪

ಈ ವಾರ್ತೆಯ ಭಗದತ್ತ ಭೂಪಾಲನು। ಓವದೆ ಕೇಳಿ ಮಂತ್ರಿಗಳ
ನೀವೀಗ ವಾರಣಾಸಿಗೆ ಪೋಗಿ ಕನ್ನೆಯ। ನೀವು ಕೇಳ್ವುದು ಎಂದು ಕಳುಹೆ ೨೫

ಮಂತ್ರಿಗಳ್ ವಾರಣಾಸಿಯ ಪುರವನು ಬಂದು। ಚಿತ್ತಶುದ್ಧದಿ ಪೊಕ್ಕು ಬಳಿಕ
ಉತ್ತಮ ಚರರನುಮತದಿ ಓಲಗಕೆಯ್ದಿ। ಇತ್ತುಡುಗೊರೆ[3]ಯ ಕೈಮುಗಿದು ೨೬

ಇತ್ತ ಬಾರೆಂದು ಭೂಪಾಲನು ಕರೆಯಲು। ಹತ್ತಿರಕೆಯ್ದಿ ಕುಳ್ಳಿ[3]ರ್ದು[3]
ಬಿತ್ತರಿಸಿದನು ತಾ ಬಂದ ಕಾರ್ಯಂಗಳ। ಚಿತ್ತಶುದ್ಧದೊಳಿಂತೆಂದು ೨೭

ಧರಣೀಶ ಕೇಳ್ ನಿಮ್ಮ ತನುಜಾತೆಯ ನಮ್ಮ। ಧರಣೀಶ ಭಗದತ್ತನೃಪಗೆ
ಹರುಷದಿ ವಿವಹವ ಮಾಡಿಕೊಡುವುದೆಂದು। ಒರೆದನು ಸಚಿವ ಪ್ರತಿಯೊಳು ೨೮

---

[1] ರು ಬೇಡಲು ಕೊಡೆನೆಂದ (ಗ) [2] ದ (ಗ) [3] ರಲಾ (ಕ)

ಉಡುಗೊರೆ ಮುಂದಿಟ್ಟು ಕೇಳಿದ ಮಂತ್ರಿಗೆ । ಒರೆದನು ಜಿತಶತ್ರುಭೂಪ
ವರಪುತ್ರಿಯನು ಸ್ವಯಂವರದೊಳಲ್ಲದೆ ನಾವು । ಬರಿದೆ ಕೊಡುವರಲ್ಲವೆಂದ ೨೯

ಅರಸ ತನ್ನಯ ಮಂತ್ರಿಯ ಮೊಗವನು ನೋಡಿ । ಒರೆದನು ಭಗದತ್ತನೃಪನ
ವರಮಂತ್ರಿಯೊಳು ಇಂತೆಂದು ಕೇಳಿದ ನಿಮ್ಮ । ದೊರೆಯ ವಂಶವು ಎಷ್ಟದೆಂದು ೩೦

ವಂಶವಿದ್ದರೆ ಏನು ಸದ್ಗುಣವಿಲ್ಲದೆ । ಸಂಶಯಹೃದಯರಾಗಣವ
ಕಂಸನು ವಂಶವಾಗಿರ್ದೇನು ತನ್ನಯ । ವಂಶ ನಿರ್ನಂಶ ಮಾಡಿದನು ೩೧

ಚಿಪ್ಪಿನೊಳಗೆ ಮುತ್ತು ಪಂಕದಿ ಪದ್ಮವು । ತಪ್ಪದೆ ಮೃಗದಿ ಕಸ್ತೂರಿ
ಒಪ್ಪದೆ ಚಮರಿ ಗೋರೋಚನ ದಧಿಯೊಳು । ಒಪ್ಪಾಗದಿಹುದೆ ಸರ್ವರಿಗೆ ೩೨

ಮತ್ತೆ ಜನ್ಮಸ್ಥಾನದಿಂದಲಿ ಫಲವೇನು । ಉತ್ತಮಗುಣವುಳ್ಳವರನು
ಮತ್ತೆ ಸರ್ವರು ಮೆಚ್ಚುವರು ಗುಣಹೀನರ । ವ್ಯರ್ಥವಲ್ಲವೆ ವಂಶವೆಲ್ಲ ೩೩

ರೂಪು ಯೌವನ ಚತುಷ್ಷಷ್ಟಿಕಲೆಯು ಪ್ರ । ತಾಪ ದಾನ ತ್ಯಾಗಭೋಗದೊಳು
ಏಪೇಳ್ವೆ ಸಕಲಸೌಭಾಗ್ಯದಿಂ ಭಗದತ್ತ । ಭೂಪಗೆಣೆಯೆ ಪರನೃಪರು ೩೪

ಪೊಡವಿಯೊಳ್ ವಂಶವಿಲ್ಲದ ನೃಪರಿಗೆ ಹೆಣ್ಣ । ಕೊಡುವವರಲ್ಲ ನೀ ತಂದ
ಉಡುಗೊರೆಯನು ಕೊಂಡುಪೋಗೆನೆ ಮಂತ್ರಿ ತಾ । ನುಡಿದನಿಂತೆಂದು ಕೋಪದೊಳು ೩೫

ಇಂದು ನಾನೆಯ್ದ ಕನ್ನೆಯನೀವುದಿಲ್ಲನೆ । ಬಂದು ಮುತ್ತುವ ನಿಮ್ಮ ಪುರವ
ಸಂದ ಸ್ನೇಹದೊಳು ಕೂಸ ಕೊಡದಿರ್ದೊಡೆ ಕಷ್ಟ । ಬಂದಪುದೆಂದು ಪೇಳಿದನು ೩೬

ಒಂದು ಮುತ್ತಲಿ ಬಲ[ವೆಲ್ಲ]ವ ನಿಮಿಷದಿ । ಕೊಂದು ನಿಮ್ಮೊಡೆಯನ ಮತ್ತೆ
ಕಂದರವನು ಚೆಂಡಾಡದಿರ್ದೊಡೆ ಮೀಸೆ ಹೊತ್ತವನ । ಲ್ಲೆಂದನಾ ಸಚಿವ ೩೭

ಕಡುಬೇಗದಿಂದಲಿ ಪೋಗಿ ಈ ವಾರ್ತೆಯ । ನುಡಿಯಲು ಭಗದತ್ತನೃಪತಿ
ಸಿಡಿಲಧ್ವನಿಯ ಕೇಳ್ದ ಸಿಂಹದಂದದಿ ಮೀಸೆ । ಹಿಡಿದು ಖಡ್ಗವ ತಾ ಜಡಿದು ೩೮

ತತ್ಕ್ಷಣದೊಳು ರಣಭೇರಿಯ ಪೊಯ್ಸಿ ತಾ । ಸಾಕ್ಷಾತ್ ಯಮರಾಜನಂತೆ
ಈ ಕ್ಷಿತಿ ಹೊಗಳುವ ಚಾತುರ್ಬಲ ಸಹ ರಣ । ರಾಕ್ಷಸನೈತಂದನಾಗ ೩೯

ಗಡಿಯ ಕೋಂಟೆಯ ಕೆಡವುತ್ತ ತುಱುಕಱಿ[3]ಗಳ । ಹಿಡಿದು ತಡೆದ ಮನ್ನೆಯರ
ಕಡಿದು ತಾ ಬಂದಾಗ ವಾರಣಾಸಿಯ ಕೋಂಟೆ । ಬಿಡದೆ ಮುತ್ತಿದ ಜೇನಿನಂತೆ ೪೦

ಬಂಡ ಅಬ್ಬರದೊಳು ಕೋಂಟೆಗೆ ಏಣಿಯ । ತಂದು ಹಾಕಿದರು ಸಾವಿರವ
ಹಿಂದುಮುಂದನು ನೋಡದೆ ಬಲವೆಲ್ಲ ಕೋ । ಯೆಂದು ಏಱಿದರು ನಾಲ್ದೆಸೆಯ ೪೧

ಈ ಪರಿಯನು ಕಂಡು ಜಿತಶತ್ರು ಭೂಪಾಲ । ಕೋಪದಿ ಕಾರಣೆಗಳನು
ಏಪೇಳ್ವೆ ಕೋಟೆಯೊಳಗೆ ಮಾಡಿಸಿದನು । ಲೋಪವಿಲ್ಲದೆ ನಿಮಿಷದೊಳು ೪೨

ಹು[1]ರಿ[1]ಮಳ[2]ಲಿ[2]ಂದ ಉರಗನ [3]ಹೇ[3]ಳಿಗೆಯಿಂದ । ಉರಿವ ಹುಲ್ಲಿನ ಹೊಱೆ[3]ಯಿಂದ
ಸುರಿವ ಕಾದಂಬಲಿ ಹಂದಿಗೊಱಡಿಯಿಂದ । ಕಿರಿದು ಬಲವ ಕೊಂದರಂದು ೪೩

ಸಿಡಿಯಿಂದ ಬೀಸುವಬಲೆಯಿಂದ ಕವಣೆಯಿಂ । ದಿಡುವ ಕಲ್ಲಿಂದ ಗುಂಡಿಂದ
ಬಿಡದೆ ಏಣಿಯ ಮೇಲೆ ಹಾಕುವ ತೊಲೆಯಿಂದ । ಕ[4]ಡೆ[4]ಗೆ[5] ನೂ[5]ಕುವ ಕವಲಿಂದ ೪೪

ಚೂಟಿಯಿಂದಲಿ ಏಣಿ ಹತ್ತುವ ಬಲವನು । ಕೋಟಿಯ ಕೊಂದರಾಕ್ಷಣವೆ
ಏಸಾಟಿನ ಬಲ ಮತ್ತೆ ಏಣಿಯನೇಱಲು । [6]ತಾ[6]ಟಿಸಿದರು ಮೇಲಿಂದ ೪೫

ಆ ಸಮಯದಿ ಜಿತಶತ್ರು ಭೂಪಾಲನು । ಓಸರಿಸದೆ [7]ಹೆಬ್ಬಾ[7]ಗಿಲನು
ಲೇಸಾಗಿ ತೆಗೆ[8]ಸಿ ತಾ[8] ಚತುರಂಗಬಲಸಹ । [9]ಸಾ[9]ಸಿಗ ಪೊಱಮಟ್ಟ ಪುರವ ೪೬

ಕಾಲಭೈರವನಂತೆ ಅತಿರೌದ್ರದಿಂದಲಿ । ಕಾಲನ ಪುರಕರಿಬಲವ
ಲೀಲಾಮಾತ್ರದೊಳು ಸೇರಿಸೆ ಕಂಡು ಭಗದತ್ತ । ಆಲಿ ಬೊಬ್ಬಿಱಿದು ಬಂದಾಗ ೪೭

ಹತ್ತುವ ವೀರಭಟರಿಗೆಲ್ಲ ಭಗದತ್ತ । ಇತ್ತನು ನಂಬುಗೆಗಳನು
ಸತ್ತ ಭಟರ ಸ[10]ತಿ[10]ಸುತರಿಗುಂಬಳಿಯೀವೆ । ಹತ್ತಿ ಹತ್ತೆಂದು ಪೇಳಿದನು ೪೮

ಮೇಲೆ ಹತ್ತಿದ ಭಟರನು ಹೊಯ್ಕೆ ತನೆಯೊಳು । ಕಾಲು ಸಿಕ್ಕಿ ಜೋಲುತಿರ್ದು
ಮೇಲಕ್ಕೆ ಹತ್ತಿಯೆಸುತ ತಮ್ಮ ಕೈಗಳ । ಲೀಲೆಯಿಂ [11]ಕೂ[11]ಡುತಿರ್ದರಾಗ ೪೯

---

[1] ಬಿದ (ಗ) [2] ಜನಿಂ (ಗ) [3] ಹೊ (ಕ) [4] ಡಿ (ಗ) [5] ಪಾ (ಕ) [6] ದಾ (ಕ)

[7] ಹೆಂಬಾ (ಕ) [8] ಸಿ (ಕ) [9] ಸಹ (ಕ) [10] ತಿಯ (ಕ) [11] ಕೊಂ (ಗ)

ಒಗೆಯುಲು ಮೇಲಿಂದ ಬಿದ್ದ ಹೆಣಗಳಿಂದ । ಅಗಳು ತುಂಬಿತು ಯುದ್ಧದಿಂದ
ಮಿಗೆ ಹರು[1]ಷದಿ[1] ವೀರ[2]ಸ್ವರ್ಗ[2]ದ ಸತಿಯರು । ಬಗೆಬಗೆಯಲಿ ಪೊಗಳಿದರು ೫೦

ಬಂದು ಮರುಳುತಂಡ ಇಂದು ನಮಗೆ ಹಬ್ಬ । ಎಂದು ಕೊಂಡಾಡಿ ಭೂಪರನು
ಅಂದು ಶಾಕಿನಿ ಡಾಕಿನಿಯರು ಹೆಣಗಳ । ಒಂದುಳಿಯದೆ ತಿಂದ[3]ರಾ[3]ಗ ೫೧

ಅತಿಕೋಪದಿಂದಲಿ ಜಿತಶತ್ರು ಭೂಪನಾ । ಚತುರಂಗಬಲವೆಲ್ಲವನು
ಹಿಂಸುತಿರಲು ದೊರೆಯನು ಬಿಟ್ಟು ಬಲವೆಲ್ಲ । ಮತಿಗೆಟ್ಟು ಓಡಿತಾಕ್ಷಣವೆ ೫೨

ಈ ಪರಿ ಯುದ್ಧವ ಕಂಡು ಕೋಟೆಯ ಬಲ । ಭೂಪ ಸಿಕ್ಕಿದನೆಂದು ಮರುಗೆ
ಚಾಪಲನೇತ್ರೆ ಮುಂಡಿಕೆ ತಾನು ಮನದೊಳು । ಸ್ಥಾಪಿಸಿ ಜಿನರ ಪಾದವನು ೫೩

ಈಗ ನನಗೆ ಬಂದ ಉಪಸರ್ಗ ಪರಿಹಾರ । ವಾಗುವ ಪರಿಯಂ[3]ತ್ರ[3] ನನಗೆ
ಆಗದು ಚತುರ್ವಿಧ ಆಹಾರವೆಂದಾಗ । ರಾಗದಿ ಕೈಕೊಂಡು ಬಳಿಕ ೫೪

ಊರ ಮುಂದಣ ಮಡು[4]ವಿನೊಳು[4] ತಾ ಕೈಯೆತ್ತಿ । ವಾ[5]ರವಿ[5]ಡಯ ಶರಣೆಂದು
ನೀರೇಜಮುಖಿ ಧ್ಯಾನಿಸುತ್ತಿರೆ ತಕ್ಷಣ । ಊರ ದೇವತೆಗಳು ನೆರೆದು ೫೫

ಹರಿಪೀಠ[6]ವನು[6] ನಿರ್ಮಿಸಿ ಮುಂಡಿಕೆಯನು । ಕರೆದು ಕುಳ್ಳಿರಿಸಿ ಪಾತ್ರವಳ್ಗೆ
ವಿರಚಿಸಿ ವಸ್ತ್ರಾಭರಣವನಿತ್ತಾಗ । ಸುರಿದರು ಪೂವಿನ ಮಳೆಯ ೫೬

ಭಗದತ್ತ ಭೂಪನ ಬಲವನೆಲ್ಲವ ತಾವು । ಅಗಲಿಸಿ ದೆಸೆದೆಸೆಗಳಿಗೆ
ನಗರದೇವತೆಗಳು ಭೂಪನ ಬೆನ್ನನು । ಒಗೆಯೆ ಬಾಧೆಗೆ ಅಂಜಿ ಬಳಿಕ ೫೭

ಒಯ್ಯಾರವನು ಬಿಟ್ಟು ಬಂದು ತಾ ಭಗದತ್ತ । ಕಾಯೆ ರಕ್ಷಿಸು ಎಂದೆನುತ
ಪ್ರಿಯದಿ ಮುಂಡಿಕೆಪಾದಯುಗಲವೆಂಬ । ತೋಯಜಗಳಿಗಿಟ್ಟ ಹಣೆಯ ೫೮

ಈ ಪರಿಯನು ಕಂಡು ಜಿತಶತ್ರು ಭೂಪಾಲ । ತಾಪವ ತಾ ಪರಿಹರಿಸಿ
ಐಪೇಳ್ವೆ ಭಗದತ್ತ ಭೂಪನ ಬೀಳ್ಕೊಟ್ಟು । ತಾ ಪುರವನು ಪೊಕ್ಕನಾಗ ೫೯

---

1 ಸಗ್ಗ (ಗ) 2 ವಾ (ಗ) 3 ತ (ಕ) 4 ನೊ (ಗ) 5 ದಾರಿ (ಗ) 6 ವ (ಕ)

ಇಂತಿದೆಲ್ಲವ ಪುರ[1]ವರದ[1] ಭವ್ಯರು ಕಂಡು । ಸಂತೋಷದಿಂ ಬಂದು ಬಳಿಕ
ಚಿಂತಾಮಣಿಯನು ಕೊಂಡಾಡಿ ಮನಗಿ ನಿ । ಶ್ಚಿಂತರಾದರು ಸರ್ವಜನರು ೬೦

ಜಿತಶತ್ರು ಭೂಪಾಲ ತನ್ನ ಸುತೆಗೆ ಪಟ್ಟವ । ಅತಿಪ್ರೀತಿಯಿಂದಲಿ ಕಟ್ಟಿ
ವ್ರತವ ಧರಿಸಲೆಂದೆರಡು ಸಾಸಿರ ರಾಜ । ಸುತರು ಬಂದರು ತನ್ನೊಡನೆ ೬೧

ಆ ಪುರದೊಳಗಣ ಭವ್ಯರೆಲ್ಲರು ತಾವು । ಭೂಪನೊಡನೆ ದೀಕ್ಷೆ ಧರಿಸಿ
ಪಾಪವ ಕೆಡಿಸಬೇಕೆಂದು ಬೇಗದಿ ಪುಷ್ಪ । ಚಾಪವಿಜಯಗೆಱಗಿದರು ೬೨

ಜಿತಶತ್ರು ಭೂಪಾಲ ಶ್ರುತಸಾಗರರೆಂಬ । ಯತಿಗಳ ಕೈಯ ದೀಕ್ಷೆಯನು
ಅತಿ[2]ಪ್ರೀತಿಯಿಂದ[2]ಲಿ ಕೈಕೊ[ಂ]ಡು ತಪದೊ[3]ಳೊ[3]ರ್ತಿ । ಸುತಿರಲಿ[4]ತ್ತ ಮುಂಡಿಕೆಯು[4] ೬೩

ಜನನಿಸಹಿತ ಜಿನದೀಕ್ಷೆಯ ಧರಿಸಿ ತಾ । ಘನತಪವನು ಮಾಡಿ ಬಳಿಕ
ತನುವ ಬಿ[5]ಸುಟ[5] ಈಶಾನಕಲ್ಪದಿ ಪುಟ್ಟಿ । ಇನದೇವನಾದ ಮತ್ತಿತ್ತ ೬೪

ಭೂಪರು ಭವ್ಯರು ತಪಮಾಡಿ ತಮ್ಮಾಯು । ಪಾಪಸಮೂಹವೆಲ್ಲವನು
ಲೋಪವ ಮಾಡಿ ಸ್ವರ್ಗದ ಸತಿಯರಿಗೆಲ್ಲ । ಓಪರಾದರು ಪುಣ್ಯದಿಂದ ೬೫

ಈ ಪರಿಯನು ಕಂಡು ನನಗೆ ಸಮ್ಯಕ್ತ್ವವು । ತಾ ಪುಟ್ಟಿತೆನಲು ನಾಗಶ್ರೀ
ಚಾಪಲಾಕ್ಷಿಯರಿಚ್ಛಾಮಿಯೆ[6]ನ್ನ[6]ಲು ಮತ್ತೆ । ಓಪ ಸಂತಸವ ತಾಳಿದನು ೬೬

ಖುಲ್ಲರ ಮಾತಿಗೆ ಬಲ್ಲವರೆಲ್ಲರು । ಉಲ್ಲಾಸ ಮಾಳ್ಪರೆ ಮನದಿ
ಸಲ್ಲದ ಮಾತಿಗಿಚ್ಛಾಮಿಯೆಂಬೆ[7]ನೆಯೆಂದು[7] । [8]ಸೊಲ್ಲಿ[8]ಸಿದಳು ಕುಂದಲತೆಯು ೬೭

ತಾನು ಕಂಡುದ ನುಡಿಯಲು ಪುಸಿಯೆಂ[9]ದೆಂಬ[9] । ಹೀನತೆಯೊತ್ರನು ಸೂರ್ಯೋದಯಕೆ
ಮಾನಭಂಗವ ಮಾಡಿ ಬಡಿಸಬೇಕೆಂದಾಗ । ಭೂನಾಥ ಮಂತ್ರಿಯಾಡಿದರು ೬೮

ಮರದ ಮೇ[10]ಲಣ[10] ಚೋರನಿಂತೆಣಿಸುತಲಿರ್ದ । ಕಾಱ ಕಬ್ಬನೊಲ್ಲದೆ ಹೊಱಗೆ
ಇರುವ ಸೋಗೆಯ ತಿಂಬಂತೆ ಪಾಪಿಗಳ್ ಧರ್ಮ । ದಿರವ ಬಲ್ಲರೆ ಧರೆಯೊಳಗೆ ೬೯

---

[1] ದ (ಗ) [2] ಮುದದಿಂ (ಗ) [3] ಳಿಂ (ಗ) [4] ತ (ಕ) [5] ಟ್ಟು (ಗ) [6] ನ (ಗ)

[7] ನೆ (ಕ) [8] ಸೋಲಿ (ಗ) [9] ದೊ (ಕ) [10] ಗಳ (ಗ)

ದಿನಕರತೇಜನು ವನಧಿಗಾಂಭೀರ್ಯನು । ಘನಪುಣ್ಯಪುರುಷನುತ್ತಮನು
ವನಿತಾಜನಕೆ ಚಿತ್ತಜನರ್ಹದ್ದಾಸ । ಜಿನಮತಗಗನಭಾಸ್ಕರನು ೭೦

ಮಾರಸನ್ನಿಭರೂಪ ವಾರಿಧಿಗಂಭೀರ । ಮೇರುಸಮಾನಸುಧೀರ
ಸಾರಸದ್ಗುಣಮಣಿಭೂಷಣಕು[1]ಲ[1]ದೀಪ । ಧೀರನರ್ಹದ್ದಾಸನೆಸೆದ ೭೧

ಶೃಂಗಾರಹಾರನು ಸು[2]ಜನ[2]ರ ಮಿತ್ರನು । ಅಂಗನೆಯರಿಗೆ ಚಿತ್ತಜನು
ಮಂಗಲಮೂರ್ತಿ ಅ[3]ರ್ಹ[3]ದ್ದಾಸನೊಪ್ಪಿದ । ಸಂಗೀತಶರಧಿಚಂದ್ರಮನು ೭೨

ಪದ್ಮವದನೆ ಪದ್ಮನಯನೆ ಪದ್ಮಾನನೆ । ಪದ್ಮಗಂಧದ ಪದ್ಮನಾಭೆ
ಪದ್ಮಹಸ್ತೆ ಪದ್ಮಪಾದೆ ನನ್ನಯ ಮುಖ । ಪದ್ಮದಿ ನೆಲಸಿ[4]ರು[4] ವಾಣೀ ೭೩

ನಿನ್ನಯ ದಯದಿಂದ ಕನ್ನಡದೊಳಗೊಂದು । ಸನ್ನುತಚರಿತೆಯ ಪೇಳ್ವೆ
ನನ್ನಯ ಹೃದಯಾಬ್ಜದೊಳಗಿದ್ದು ಮತಿಯನು । ಚೆನ್ನಾಗಿ ಪಾಲಿಸು ವಾಣೀ ೭೪

ಮತ್ತೆ ಸತಿಯು ತಾನು ಹೊತ್ತಿರುವನ ಪಗೆ । ಪೆತ್ತವಳಣ್ಣನ ತಾಯ
[5]ಹೊ[5]ತ್ತಂದು ನೆತ್ತಿಗೆಜಿ[3]ಯ ಮೀಂದಭವಗೆ । ಚಿತ್ತಶುದ್ಧದಿ ವಂದಿಸುವೆನು ೭೫

ಇದು ಭವ್ಯಜನಚಿತ್ತಕುವಲಯಚಂದ್ರಮ । ಇದು ಸಜ್ಜನರ ಕ[6]ರ್ಣಾ[6]ಭರಣ
ಇದು ಮುಕ್ತಿಸತಿಯ ತಾ ಒಲಿಸುವ ವಿತರಣ । ಇದ ಕೇಳ್ದವರ ಪಾಪಹರಣ ೭೬

---

1 ಲಿ (ಕ) 2 ಗುಣಾ (ಕ) 3 ರುಹ (ಗ) 4 ರ್ದಿರು (ಕ) 5 ಪೆ (ಕ) 6 ರಣಾ (ಗ)

# ಏಳನೆಯ ಸಂಧಿ

ಸುರನ[1]ರೋರ[1]ಗ ವಂದಿತ ಚರಣಾಬ್ಜ । ಪರಮಪಾವನ ಮುಕ್ತಿಯರಸ
ಕರುಣಾಸಾಗರ ಚಂದ್ರಮ ಸುಪಾರ್ಶ್ವೇಶ । ಶರಣು ಶರಣು ಜಗದೀಶ ೧

ಕಡುಜಾಣರ ದೇವನರುಹದ್ದಾಸನು ತನ್ನ । ಮಡದಿ ಪದ್ಮಶ್ರೀಯ ಕೇಳ್ದ
ಉಡುಪತಿವದನೆ ನಿನಗೆ ಸಮ್ಯಕ್ತ್ವವು । ಬಿಡದುದಿಸಿದನು ಪೇಳೆನಲು ೨

ಸರಸಿಜಮುಖಿ ಪದ್ಮಶ್ರೀ ವಲ್ಲಭನಿಗೆ । ಕರಗಳ ಮುಗಿದು ಹರುಷದಿ
ಒರೆದಳು ತನಗೆ ಸಮ್ಯಕ್ತ್ವ ಸಂಜನಿಸಿದ । ಪರಿಯ ಪೇಳಿದಳು ಇಂತೆಂದು ೩

ಕುರುಜಾಂಗಣ ವಿಷಯದೊಳಿರ್ಪ ಹಸ್ತಿನಾ । ಪುರದಧಿಪತಿ ಭೂಭೋಗನಿಗೆ
ತರುಣಿ ಭೋಗಾವತಿಯೊಡಗೂಡಿ ಸುಖದೊಳ । ಗಿರುತಿರಲಾ ಪುರದೊಳಗೆ ೪

ಅರಸಗೆ ಅತಿಹಿತವಾಗಿರುತಿರ್ದನು । ವರಪುಣ್ಯನಿಧಿ ಗುಣಪಾಲ
ಸರಸಿಜಮುಖಿ ಗುಣವಂತೆ ವಲ್ಲಭೆಯಾಗೆ । ಹರುಷದಿಂದಿರುತಿರ್ದನಾಗ ೫

ಆ ಪುರದೊಳಗೊರ್ವ ಬಡವ ಬ್ರಾಹ್ಮಣ ತಾನು । ಕೋಪವರ್ಜಿತ ಸೋಮದತ್ತ
ನೋಪಳು ಸೋಮಿಲೆ ಇರ್ವರಿಗುದಿಸಿದ । ರೂಪಿನೊ[2]ಳ್[2] ರತಿಗೆಣೆಯೆನಿಸಿ ೬

ಸೋಮೆಯೆಂದೊಬ್ಬ ಸುತೆಯು ಪುಟ್ಟಿ ಬೆಳೆವುತ್ತ । ಕಾಮನ ಅಧಿದೇವಿಯಂತೆ
ಭಾಮಿನಿಯರಸಿ [3]ತಾ[3] ರನ್ನೆ ಸದ್ಗುಣಮಣಿ । ರಾಮೆ ರಂಜಿಸುತಿರ್ದಳಾಗ ೭

ತೋರದುಬ್ಬು ತೊಂಡೆವಣ್ದುಟಿ ಹರಿಮಧ್ಯ । ವಾರಿಜಮುಖಿ ಗಜಗಮನೆ
ಮಾರನ ಕೈಯರಗಿಣಿಯಂತೆ ಜವ್ವ[4]ನ[4] । ವೇಱಿ ಬೆಳೆದು ರಂಜಿಸಿದಳು ೮

---

[1] ರನಾ (ಕ) [2] ಳು (ಗ) [3] ದೊ (ಕ) [4] ನೆ (ಗ)

ಇಂತಿರುತಿಹ ವಿಪ್ರವಧುವನು ಬೇಗವೃ । ಅಂತಕನೊಯ್ಯಲಾ ದ್ವಿಜನು
ಸಂತೋಷವಿಲ್ಲದೆ ಚಿಂತೆಯಿಂ ಸುತೆಸಹ । ಭ್ರಾಂತಿನಿಂದಿರುತಿರ್ದನಾಗ ೯

ಈ ಪರಿಯೊಳು ಚಿಂತಿಸುತ್ತಿರ್ದ ವಿಪ್ರಗೆ । ಕೋಪರಹಿತ ಜಿನಮುನಿಪ
ವಿಪ್ರೋತ್ತಮ ಧರ್ಮವ ಪೇಳಿ ಶೋಕಾಗ್ನಿಯ[1] । ತಾ[2]ಪವ ಪರಿಹರಿಸಿದನು[3] ೧೦

ಭಿಕ್ಷೆಯ ಬೇಡಿ ತಂದಾಗ ಬ್ರಾಹ್ಮಣ ತಾನು । ನಿಷ್ಠೆ ನೇಮದೊಳಿರುತಿಹನು
ಕಷ್ಟ ದಾರಿದ್ರ್ಯದೊಳ್ ನಿಷ್ಠೆ ನೇಮಗಳು ತಾ । ಬಿಟ್ಟುದಿಲ್ಲೆಂದು ಮೆಚ್ಚುವರು ೧೧

ಇಂತಿರುತಿರ್ದ[4] ವಿಪ್ರನ ಕಂಡು ಗುಣಪಾಲ । ಸಂತೋಷದಿಂ ಪೇಳ್ದನಿಂತು
ಪಿಂತಣ ಅಘವಾಸದಿಂದಲಿಂತಾಯಿತು । ಚಿಂತಿಸದಿರು ಎಂದು ಪೇಳ್ದ ೧೨

ನೀನು ಮಾಡುವ ನಿಷ್ಠೆ ನೇಮಕ್ಕೆ ಮೆಚ್ಚಿದೆ । ನಾನುಂಬನಿತ ಪೊನ್ನನೀವೆ
ಸಾನುರಾಗದೊಳಿರುಯೆಂ[5]ದಾಗ ವಿಪ್ರನು[5] । ತಾನಿಂತು ನುಡಿದ ಪ್ರೀತಿಯೊಳು ೧೩

ಬಂದುದು ವೃದ್ಧಾಪ್ಯಕಾಲ ಹಿಂದಣ ಕರ್ಮ । ಒಂದಿನಿಸಿಲ್ಲದೆ ಕಡಿವ
ಕಂದರ್ಪವಿಜಯನ ದೀಕ್ಷೆಯ ಧರಿಸುವೆ । ತಂ[6]ದೆ ಕೇಳೆನ್ನ[6] ನುಡಿಯನು ೧೪

ನನ್ನ ಕುಮಾರಿ ಸೋಮೆಯು ನಿನ್ನ ಗೃಹಕೊಯ್ಯು । ಚೆನ್ನಾಗಿ ರಕ್ಷಿಸಿ ಬಳಿಕ
ನಿನ್ನ ಮನಕೆ ಬಂದವಗೆ ಮದುವೆಯ ಮಾಡು । ನನ್ನ ದೀಕ್ಷೆಗೆ ಕಳುಹೆಂದ ೧೫

ಸೋಮಶರ್ಮನು ಜಿನದೀಕ್ಷೆ ಧರಿಸಿದನು[7] । ಸೋಮೆಯು ಗುಣಪಾಲಶೆಟ್ಟಿ
ಪ್ರೇಮದಿ ತನ್ನ ಸುತೆಯಪೊಲು ಸಲಹುತ್ತ । ಧರ್ಮಪ್ರೀತಿಯೊಳಿರುತಿರ್ದ ೧೬

ಏಪೇಳ್ವೆ ಕೆ[illegible]ಬನವಾಂತು ಸೊಬಗಿನಿಂದ । ರೂಪು ವಿದ್ಯೆ ವಿಲಾಸದೊಳು
ಶ್ರೀಪತಿಸತಿಯ ಭಾರತಿಯನು ತಾ ಗೆಲ್ದು । ಚಾಪಲನೇತ್ರೆ [8]ಬಿಪ್ಪಿ[8]ವಳು ೧೭

ಶಶಿಮುಖಿ ಸೋಮೆಯುಷ್ಟಮೀಪರ್ವತಿಥಿಯೊಳು । ಬಸದಿಗೆ ಪೋಗುವೇಳೆಯೊಳು
ಉಪುರಲಳವೆ ರುದ್ರದತ್ತವೆಸರ ದ್ವಿಜ । ಒಸೆದು ನೋಡಿದ ಮೋಹದಿಂದ ೧೮

---

[1] ಗ್ನಿ (ಗ) [2] ಪ (ಕ) [3] ರು (ಗ) [4] ಹ (ಕ) [5] ದವೈಶ್ಯಗೆ ವಿಪ್ರ (ಗ) [6] ದೆ (ಕ)
[7] ನುಮತಿತ್ತ (ಗ) [8] ಬೆಳ (ಕ)

ಪಾಪವ ಪರಿಹರಿಸುವ ನಂದೀಶ್ವರ । ನೋಂಪಿಯ ಮಾಡಲೆಂದೆನುತ
ರೂಪುಸಂಪನ್ನೆ ಬಸದಿಗೈದುತಿರೆ ಜನ । ವ್ಯಾಪಿಸಿ ನೋಡಿದರಾಗ ೧೯

ರತಿಯೊ ಭಾರತಿಯೊ ಪಾರ್ವತಿಯೊ ಕ್ಷೀರಾಬ್ಧಿ[1]ಯ[1] । ಸುತೆಯೊ ಸೀತೆಯೊ [2]ದ್ರೌ[2]ಪದಿಯೊ
ಕ್ಷಿತಿಯೊಳಗಿವಳಾರೆಂದು ಜನಂಗಳು ಅತಿ । ಪ್ರೀತಿಯಿಂದ ನೋಡಿದರು ೨೦

ಶುಭ[3]ಗ[3]ತಿಯನು ತಾನು ಪಡೆವೆನೆನುತ ಸೋಮೆ । ಶುಭತಾರೆ ತಿಥಿವಾರದಂತೆ
ಶುಭರಾಶಿಯ ಪುಷ್ಪಳಿಯಂತೆ ಒಪ್ಪಿರ್ದ । ಅಭವನಾಲಯಕೆಯ್ದುವಾಗ ೨೧

ಕುಂತಳ ನೀಲ ಕುಲಿಶ ದಂತ[4]ವ[4] ರತ್ನ । ಕಾಂತಿವಿ[5]ಡಿದ[5] ಪವಳ್ದುಟಿ[6]ಯ[6]
ಕಾಂತೆಯ ಮೈ ಪುಷ್ಪರಾಗದ್ವೈಡೂರ್ಯದ । ವರ್ಣವೊಪ್ಪಿತು ರತ್ನದಂತೆ ೨೨

ನಡುಸಿಂಹ ಧನುಃಪುರ್ಬು ಕುಚಕುಂಭ ಮೀನಾಕ್ಷಿ । ಮಡದಿ ಮಕರಪತ್ರದಿಂದ
ಪಡಗರದಿಂ ನಿಡುಹಸ್ತದಿಂದಲಿ ಕನ್ಯೆ । ಬೆಡಗಿಂದೊಪ್ಪಿದಳು ರಾಶಿಯಂತೆ ೨೩

ಇಂದುನಯನ ರತ್ನದಾನ ವ್ರತಂಗಳು । ಬಂಧು[7]ದರ್ಶ[7]ನ ತತ್ತ್ವ[8]ಗಳನು[8]
ಚೆಂ[9]ದದಿ[9] ಧರ್ಮದ ಪುಣ್ಯ[10]ಕಥನವಿ[10] ನಾರಿ । ಕುಂದದೊಪ್ಪಿದಳು ರತಿಯಂತೆ ೨೪

ಭರಣಿಯು ಬಾಯಿ ರೋಹಿಣಿಗೆಣೆ ಹಸ್ತವು । ತರುಣಿ ಶ್ರವಣಶುಭಚಿತ್ರೆ
ಧರಣಿಯ ಸತಿಮರ್ಗೆ ಜೇಷ್ಠೆ ಪುರ್ಬುಗಳಿಂದ । ತರುಣಿಯೊಪ್ಪಿದಳ [11]ತ್ರಾ[11]ರೆಯಂತೆ ೨೫

ರೂಪು ವಿಲಾಸ ಸೊಬಗು ಗಾಡಿ ಮೋಡಿಯೊಳ್ । ಪ್ರೌ[12]ಪವ[12]ಳಿವಳಾರೆಂದು
ವಿಪೇಳ್ವ ನೋಡುವ ವಿಪ್ರನು ಕೇಳದ । ಪಾಪಭರಿತ ರುದ್ರದತ್ತ ೨೬

ದುರುಳ ದುರ್ಜನ ಕಾಮುಕ ವೇಶ್ಯ ಜಾರಿಯು । ನೆಜ[13]ಜೂಜುಗಾಜ ವಿಚಾರ
ಸ್ಮರನಧಿದೇವಿಯಂತೈದುವಳಾರೆಂದು । ಮರಳಿ ಕೇಳಿದ ಮೋಹದಿಂದ ೨೭

ನೆರೆದ ಸಭೆಯು ಕೇಳಲವರಿಂತು ಪೇಳ್ದರೆ । ಪುರದ ಸೋಮಶರ್ಮದ್ವಿಜನ
ವರಸುತೆ ಸೋಮೆಯು ಗುಣಪಾಲಗೊಪ್ಪಿಸಿ । ಧರಿಸಿದ ಜಿನದೀಕ್ಷೆಯನು ೨೮

---

1 ಯೋ (ಕ) 2 ದ್ರುವು (ಗ) 3 ಪೊ (ಕ) 4 ದರ (ಗ) 5 ಡಿ (ಗ) 6 ಯು (ಕ)
7 ದರುಶ (ಗ) 8 ಳು (ಗ) 9 ದ (ಗ) 10 ಧರ್ಮದಿಂದಲಿ (ಗ) 11 ತೊ (ಕ)
12 ಪ (ಕ) 13 ? (ಗ)

ಇಂತು ಪೇಳಿದ ಸಭೆಯವರಿಗೆ ಆ ರುದ್ರ । ದತ್ತ ತಾನಿಂತು ನುಡಿದನು
ಎಂತಾದೊಡೆ ಇವಳ ನಾ ಮದುವೆಯಾಗುವೆನೆಂದು । ಭ್ರಾಂತ ಪೇಳಿದ ವಿಪ್ರಸಭೆಗೆ ೨೯

ಉತ್ತಮ ಶೀಲಸಂಪನ್ನಗಲ್ಲದೆ ವೈಶ್ಯ । ಮತ್ತೆ ಕೊಡನು ವಣಿ ದುರ್ಜನಗೆ
ಚಿತ್ತಶುದ್ಧದಿ ಕೊಡನೆಂದವರೊಳಾ ರುದ್ರ । ದತ್ತ ಸಭೆಯೊಳಿಂತು ನುಡಿದ ೩೦

ಉತ್ತಮ ಸೋಮೆಯ ಮದುವೆಯಾಗದೊಡೆ[1] । ಪೃಥ್ವಿವ[2] ವಿಪ್ರರೊಲ್ಲೆಂದು
ಮತ್ತೆ ಪಂಥವ[3]ನಾಡಿ[3] ತನ್ನ ಮನೆಗೆ ಪೋಗಿ । ಹತ್ತೆಂಟು ದಿವಸದ ಮೇಲೆ ೩೧

ದೂರದೇಶಕೆ ಪೋಗಿ ಜಿನಮಾರ್ಗ[4]ವೆಲ್ಲ[4]ವ । ಅರೈದು ತಿಳಿದು ಚೆನ್ನಾಗಿ
ಧಾರಿ[5]ಣಿಯೊಳ್[5] ಬ್ರಹ್ಮಚಾರಿ ವೇಷವ ತಾಳಿ[6] । ಊರಿಗೆ ಬರುತ ಬಟ್ಟೆಯೊಳು ೩೨

ಕುಂದದೆ ಜಿನಮಾರ್ಗದೊಳ್[7] ವನಜಾ[7]ದು ಶೀಲ । ದಿಂದಲಾಚರಿಸುತಲಿದ್ದು
ಚಂದದಿ ಮಡಿಯ[8]ನು ಉಟ್ಟು ತಮ್ಮೂರಿಗೆ । ಬಂದನು ದುರುಳ ದುರ್ಜನನು ೩೩

ಪಟ್ಟಣದೊಳಗಿರ್ದ ಅನಿಲ[9]ಆ[9]ರಣ್ಯವ । ಮುಟ್ಟಿಬಿಡದೆ ಸುಮ್ಮನಿರದೆ
ಕೆಟ್ಟ ಪಾಪಿಯು ಎದೆಯೊಳಗಿರ್ದ ಕಲ್ಮರು । ಕಟ್ಟಿಕೊಳ್ಳುವರೆ ನರಕವನು ೩೪

ಉತ್ತಮ ಗುಣಪಾಲ ಶೆಟ್ಟಿ ನಿರ್ಮಿಸಿಯಿರ್ದ । ಚಿತ್ರ ಜಿನಜಯನಾಲಯಕೆ
ಮತ್ತೆ ಬ್ರಹ್ಮಚಾರಿ ಬಂದು ಜಿನೇಶಗೆ । ಚಿತ್ತ[10]ದಿ[10]ಕಳ ವಂದಿಸಿದನು ೩೫

ಹರುಷದಿ ಮುನಿಗಳಿಗೆಜಿಗಿ ಕುಳ್ಳಿರೆ ಮತ್ತೆ । ಪೋದ ಬಂದನು ಜಿನಗೃಹಕೆ
ಪರಮಗೆಜಿಗಿ ಮುನಿಗೊಂದಿಸಿ ನಡಿದನು । ವರಬ್ರಹ್ಮಚಾರಿಗಿಚ್ಛಾ[11]ಕರ[11]ವ ೩೬

ದರುಶನ [12]ವೃ[12]ದ್ಧಿರಸ್ತೆಂದು ಪರಸಿ ಮತ್ತೆ । ಪರದನಿಂತೆಂ[13]ದ[13] ವಿಪ್ರನಿಗೆ
ಸ್ಮರರೂಪ ನೀನಾರ ಸುತನು ನೀನಿರುತಿರ್ಪ । ಪುರವಾವುದೆನ[14]ಲು ಇಂ[14]ತೆಂದ ೩೭

ಈ ಪುರದೊಳು ಸೋಮಶರ್ಮಾಖ್ಯ ವಿಪ್ರನ । ಓಪಳು ಗಾಂಧಾರಿಯವರ್ಗೆ
ನಾ ಪುಟ್ಟಿ ಬೆಳೆಯುತಿರಲು [15]ಮಾತಾ[15]ಪಿತೃಗಳ್ । ಆ [16]ಪ್ರಾ[16]ಪ್ತನೊಳು ಗತವಾಗೆ ೩೮

---

1 ಪೆಪ್ಪ (ಕ) 2 ತಾದು (ಕ) 3 ನಾ (ಗ) 4 ದೊಳಗ (ಗ) (ಚ) 5 ಣಿ (ಕ) (ಚ)
6 ಳ್ದ (ಗ) 7 ಳಗ (ಕ) 8 ನಂ (ಕ) 9 ಅ (ಕ) 10 ಪ (ಕ) 11 ರಿಗಿಚ್ಛಾನ (ಕ)
12 ಬು (ಗ) 13 ದ (ಕ) 14 ಲಿಂ (ಗ ಚ) 15 ಮಾತ್ರಾ (ಕ) 16 ಪ (ಕ)

ಈ ಪಟ್ಟಣದೊಳ ರಲಾಜಿದೊರ್ವನೆ । ತಾಪದೊಳ್ ಪೋಜಿಮುಟ್ಟು ಪೋಗಿ
ವಿಪೇಕ್ಷೆ ನಾನಾದೇಶಂಗ[1]ಳ[1] ತೊಳಲಿದೆ । ರೂಪುಸಂಪನ್ನ ಕೇಳಿಂ[2]ದ[2] ೩೯

ನನ್ನ ಹೆಸರು ರುದ್ರದ[3]ತ್ತನೆಂ[3]ಬರು ಈಗ । ಮು[4]ನ್ನಜ[4] ಬರೆದ ಲಿಪಿಯನು
ಇನ್ನಾ[5]ರು[5] ವಿಸಾಜಬಲ್ಲರು ಧರೆಯೊಳಗೆಂದು । ಬನ್ನಬ[6]ಡುತ ಬರು[6]ತ್ತಿರಲು ೪೦

ವಾರಣಾಶಿಯೊಳ್ ಜಿನತಂತ್ರಭಟ್ಟಾರಕ । ವಸಾರವಿಜಯನ ಮಾರ್ಗವನು
ತೋಜಿದ ಕಾರಣ ಸಂಸಾರದೋಳಗಿರ । ಬಾರದೆನುತ ವಿರಕ್ತಿಯೊಳು ೪೧

ಈ ಪರಿಯೊಳು ಬ್ರಹ್ಮಚಾರಿವೇಷವ ತಾಳಿ । ಪಾಪವ ನೀಗುವೆನೆಂದು
ಒರ್ವನೆ ತೀರ್ಥವಂದನೆಗಳ ಮಾಡುತ । ಈ ಪುರಕೈತಂದೆನೀಗ ೪೨

ಅರಮಲ್ಲಿಮುನಿ ಸುವ್ರತ ತೀರ್ಥಂಕರ । ದರುಶನ ಕಾರಣವಾಗಿ
ಪರಮಬಂಧುವೆ ನಿಮ್ಮ ನೋಡುವಭೀಷ್ಟೆಯೊಳ್ । ಹರುಷದಿಂ ಬಂದೆ ಕೇಳೆಂದ ೪೩

ಈಗ ನಿನ್ನಯ ದರುಶನದಿಂದ ಹೃದಯಕ್ಕೆ । ರಾಗ ಪುಟ್ಟಿತು ನನದೀಗ
ಯಾಗವ ಮಾಡಿ ಕರ್ಮವನೆಲ್ಲ [7]ಕ[7]ಡಿಸಿ ತಾ । [8]ಸ್ವಾ[8]ಗಸೇಕೆಂ[9]ದ[9] ಸದ್ಗತಿ[10]ಗೆ[10] ೪೪

ಕಾಮಸನ್ನಿಭ ನಿಮ್ಮ ಬ್ರ[11]ಹ್ಮಚ[11]ರ್ಯವು ತಾನು । ನೇಮವ್ರತವೊ ಯಮವ್ರತವೊ
ನಾಮವಿಲ್ಲದೆ [12]ಪೇಳೆಂದು[12] ಕೇಳಲು ವಿಪ್ರ । ನೇಮದಿ ಪೇಳ್ದನಿಂತೆಂದು ೪೫

ನೇಮ ವ್ರತವು ಎರಡೊರುಷ ಮಾಡಿದೆ ಈಗ । ಕಾಮಿನಿಯರ [13]ಮಾ[13]ಯುಗಳನು
ಭೂಮಿಯೊಳಗೆ ಪೇಳಲಳವಲ್ಲ ಸ್ತ್ರೀಯರ । ಮೋಹದಿಂದಲಿ ಸುಖವುಂಟೆ ೪೬

ಸ್ತ್ರೀಯರಿಂದಲಿ ಬ್ರಹ್ಮ [14]ತಪ[14]ಕೆಟ್ಟ ಹರ ತಾನು । ಕಾಯವನಿತ್ತಸಂಗನೆಗೆ
ತೋಯಜಾಕ್ಷಿಗೆ ಸೋತು ಹರಿ ತುರುಗಳ ಕಾಯ್ದ । ಕಾಯುವ ಕೆಡಿಸಿದನಿಂದ್ರ ೪೭

ಅಕ್ಕಟಕ್ಕಟ ರಾವಣ ಕೀಚಕರಾದಿ । ಲೆಕ್ಕವಿಲ್ಲದೆ ಮೋಹಿಜನರು
ಸಿಕ್ಕಿ ದುಃಖವನುಂಡರೆಂದು ಎನ್ನಯ ಮನ । ಕೊಕ್ಕರಿಸುತಲಿಂತುಯೆಂದ* ೪೮

---

1 ಳಲಿ (ಕ) 2 ದು (ಕ) 3 ನು ಎಂ (ಕ) 4 ನ್ನ (ಗ) 5 ರ (ಗ) 6 ರುಬಡು (ಕಚ)
7 ಹತಿ (ಗ) 8 ಸಾಸಾ (ಗ) 9 ದು (ಗ) 10 ಯು (ಗ) 11 ಹ್ಮ ಶ್ಚ (ಕ)
12 ಕೇಳಿಮ್ಮ (ಕ) 13 ನು (ಕ) 14 ತಾ (ಕ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಮಾರನ ರೂಪನು ಮದಶೀಲವಂತನು । ಸಾರಧ್ಯಯನುನು ಸಜ್ಜನನು
ಸೇರಿಸಬೇಕೆನ್ನ ಸುತೆಯನಿವನಿಗೆಂದು । ಆರ್ಯ[1]ದ[1] ತನ್ನ ಮನದಲಿ ೨೯

ನನ್ನ ಮನೆಯೊಳು ವಿಪ್ರನ ಸುತೆ ಶೀಲಸಂ । ಪನ್ನೆ ಸದ್ಗುಣವಾಣರನ್ನೆ
ಸನ್ನುತ ಸ[2]ಲಕ್ಷಣಾವ್ಯಾಧ ರತಿರೂಪೆ । ಚೆನ್ನೆಯು ನಿನಗಿತ್ತಪೆನು ೩೦

ನಿನ್ನ ಹೆಣ್ಣನು ನಾನು ಒಲ್ಲೆನೆನಲು ಮತ್ತೆ । ನಿನ್ನಾದಾನವ ಮಾಳ್ಪೆ ನಾನು
ಜೈ[3]ನ್ನ[3] ಹೊಂದಿದ ಶರಬೇಡೆಂದು ಸದ್ಗುಣ । ರನ್ನ ಪೇಳ್ದನು ವಿಪ್ರಸುತಗೆ ೩೧

ನನ್ನಾಣೆ ನೀ ಪ್ರತಿವಚನವಾಡದಿರೆಂದು । ಮನ್ನಣೆವಿಂಗಗುಣಪಾಲ
ಚೆನ್ನಾಗಿ ಪೇಳಿ ಒಪ್ಪಿಸಿ ಕಲ್ಯಾಣಕ್ಕೆ ರನ್ನ । ಮಂಟಪ ಮಾಡಿಸಿದನು ೩೨

ಪಟ್ಟೆಯ ತೊಲೆ ಪವಳದ ಬೋದಿಗೆ ಮೇಲೆ । ಮುಟ್ಟಿದ ವಜ್ರದ ಹಲಗೆ
ಸ್ಫಟಿಕ ಮಾಣಿಕ್ಯದ ಕಂಬ ನೀಲದನೆಲ । ಆಶ್ಚರ್ಯವಾಗುತಿಹುದು ೩೩

ಮತ್ತೆ ಕಸ್ತುರಿ ಕಾರಣೆಯಿಂದ ರಾಜಿಸೆ । ಮುತ್ತಿನ ರಂಗವಲ್ಲಿಗಳು
ಚಿತ್ರಜನ್ಮನ ಸತ್ಕೀರ್ತಿವಲ್ಲಿಗಳಿವು । ಚಿತ್ತಗಳನೆ ರಂಜಿಸುದುವು ೩೪

ಮಲ್ಲಿಗೆಹೂಮಾಲೆ ರಖ್ಲಿಪತಾಕೆಯು । ಅಲ್ಲಲ್ಲಿ ಕಲಶ ಕನ್ನಡಿಯು
ಸೊಲ್ಲಿಸಲಳವೆ ಮಾಂದಳಿರ ತೋರಣದಿಂದ । ಪುಲ್ಲಶರನ ಗೃಹದಂತೆ ೩೫

ಮಾರ[5]ಸನ್ನಿಭ[5]ರುದ್ರದತ್ತಗೆ ಹರುಷದಿ । ಘೋರೆಂಬ ವಾದ್ಯಘೋಷದೊಳು
ನೀರಜಾಕ್ಷಿಯರು ಮಂಗಲಸ್ನಾನ ಮಾಡಲು । ಮಾರನಂದದೊಳು ಒಪ್ಪಿದನು ೩೬

ಹಾರ ಪದ[4]ಕ ಹೀರಾವಳಿ ಮುದ್ರಿಕೆ । ತೋರಮುತ್ತಿನ ಚವ್ಕುಳಿಯು
ಭಾರಿಯಸರಪಣಿ ಲಂಬಿಸರ ದೇಹದೊಳು ಹ । ನ್ನಾರ[6]ತಾ[6]ರಿಗಳೊಪ್ಪಿದವು ೩೭

[7]ಕಟ್ಟಿ[7]ದ [8]ಚಿಮ್ಮುರಿ[8] ತೊಟ್ಟ ಚೀನಿಯ ಅಂಗಿ । ಪಟ್ಟೆಪಟ್ಟೆದವನು ಹೊದೆದು
ಕಟ್ಟಿದ ಬಾಸಿಂಗದಿಂದಲಾ ಮದುಮಗ । ದೃಷ್ಟಿಗೆ ಮಾರನಂತಿದ್ದ ೩೮

---

[1] ವ (ಗ) [2] ಲ (ಕ) [3] ನ್ನ (ಗ) [4] ತೆಯು (ಕ) [5] ಸಂಭವ (ಕ) [6] ತ (ಕಚ)
[7] ಕ (ಗ) [8] ಚಿ (ಕ)

ಉತ್ತಮನಿಗೆ ಕೊ[1]ಟ್ಟು[1] ಕಣ್ಣಲಿ ನೋಡದೆ । ಮತ್ತು ಕಳ್ಳಗೆ ಕೊ[2]ಟ್ಟು[2] ಸುತೆಯ
ಚಿತ್ತವಿಕಳನಾದೆನೆಂದು ತಾ ನೋವುಂಗೆ । ಮತ್ತಿಂತು ನುಡಿದನಾ ಪರದ ೬೯

ನನ್ನ ಅಜ್ಞಾನದಿ ನಿನ್ನ [3]ಕಳ್ಳ[3]ಗೆ ಕೊಟ್ಟು[4] । ನಿನ್ನ ಸುಖಕೆ ಎಡರಾದೆ
ಇನ್ನಾದ[5]ರವನ[5] ಸನ್ಮಾರ್ಗಕೆ ತಂದೀಗ । ನಿನ್ನ ವಶವ ಮಾಡುವೆನು ೭೦

ಪಾಪಿ ರುದ್ರದ[6]ತ್ತ[6] ಮಾಯಾವೇಷವ ತಾಳಿ । ಅಪತ್ತನೆಸಗಿದ ನಿನಗೆ
ಕಾಪುರುಷಗೆ ನಿನ್ನ ಕೊಟ್ಟೆನು ಈಗಲು । ಪಾಪ ಬಂದಿತು ನನಗೆಂ[7]ದು[7] ೭೧

ಸೌಂದರ್ಯ ಸೊಬಗು ವಿಲಾಸವತಿಯು ಬಿಟ್ಟು । ಕುಂದವುತಿಯು ಕೆಟ್ಟುಪೋದ
ಗಂಧವನೊಲ್ಲದೆ ಮಕ್ಷಿಕ ತಾನು ದು[8] । ರ್ಗಂಧಕ್ಕೆ ಎಳಗುವಂತಾಯ್ತು ೭೨

ನೀತಿನಿಪುಣೆ ಸದ್ಗುಣಮಣಿಭೂಷಣೆ । ಜಾತಿವೆ[9]ಣ್ಗ[9]ಳ ಶಿರೋರತ್ನೆ
ಭೂತಳದೊಳು ರತಿಯನು ಗೆಲ್ವ ಜಾಣೆಯ । ಪಾತಕನೊಲ್ಲದೆ ಪೋದ ೭೩

ಕಾಮನ ಕೈಯ ರಗಿಣಿಯಂತೆ ರಾಜಿಪ । ಕಾಮಿನಿಯನು ಬಿಟ್ಟು ಪಾಪಿ
ಕಾಮುಖಿಯರ ನೆಚ್ಚಿ ಕುಲಪಥವನು ಬಿಟ್ಟು । ಧಾಮಪಾಪಕೆ ಬಿದ್ದನವನು ೭೪

ದುರ್ಜನನರಿಯದೆ ಪೋದಡೇನಾಯಿತು । ಸಜ್ಜಾಗಿ ತಿಳುಪಿ ನಾನವನ
ಕಜ್ಜಳಾಕ್ಷಿಯೆ ನಿನ್ನ ವಶಮಾಡದಿರ್ದೊಡೆ ವಾ । ಣಿಜ್ಯ[10]ನಂದನನಲ್ಲ[10] ಮಗಳೆ ೭೫

ತಂದೆ ಕೇಳೀ ಭವದೊಳು ಬ್ರಹ್ಮಚರ್ಯವು । ಕುಂದದಿರಲಿ ನನಗೆಂದು
ಕಂದರ್ಪವಿಜಯನ ಸಾಕ್ಷಿಯೊಳ್ ಕೈಕೊಂಡೆ । ತಂದೆ ಚಿಂತಿಸಬೇಡ ನನಗೆ ೭೬

ಬಂದುಗೆಬಾಯ್ದೆರೆ ಪೇಳಿದ ವಚನವು । ಕುಂದಿಲ್ಲವೆಂದು ತಾ ತಿಳಿದು
ಅಂ[11]ದು[11] ತಾ ಸುತೆಯ [12]ಗುಣ[12]ಕೆ ಮೆಚ್ಚಿ ಗುಣಪಾಲ । ಕಂದುಕೊಟ್ಟನು
ಲಕ್ಷಪೊನ್ನ ೭೭

ಚಂದ್ರವದನೆ ನೀನು ಚಿಂತೆಯಿಲ್ಲದೆ ಮನ । ಬಂದ ತೆರದಿ ಧರ್ಮ ಮಾಡಿ
ಮುಂದಣ ಭವಕೆ ಸದ್ಗ[13]ತಿಯನು[13] ಸಾಧಿಸು । ಯೆಂದು ಪೇಳಿದ ತ[14]ನ್ನ[14] ಸುತೆಗೆ ೭೮

---

1 ಟ್ಟೆ (ಗ) 2 ಟ್ಟೆ (ಕ) 3 ಳ್ಳ (ಕ) 4 ಟ್ಟೆ ಸುತೆಯ (ಕ) 5 ರೀಗ (ಕ) 6 ತ್ತನು (ಕ)
7 ದ (ಕ) 8 ದು (ಕ) 9 ಣಗ (ಕ) 10 ನಮುಪಲ್ಲಿ (ಕ) 11 ದ (ಗ) 12 ದೃಢ (ಗ)
13 ಯ (ಕ) 14 ನ್ನಯ (ಕ)

ದಾನ ಪೂಜೆಯ ಮಾಡು ಜಿನಚೈತ್ಯಗೃಹಗಳ । ಆನಂದ ಮಿಗೆ ಮಾಡಿಸೆಂ[1]ದು[1]
ಸಾನುರಾಗದಿ ಪೇಳಿ ಸುಖದಿರೆ ಗುಣಪಾಲ । ಮಾನಿನೀಯರ ಶಿರೋರತ್ನೆ ೭೯

ಉತ್ತಮಗುಣಗಣಾಭರ[2]ಣ[2]ಭೂಷಿತೆ ಸೋಮೆ । ಮತ್ತೆ ಸುಪಾರ್ಶ್ವಜಿನರ
ನಿತ್ಯಮಂಗಲದ ಚೈತ್ಯಾಲಯವನು ವಿ । ಚಿತ್ರದಿಂದಲಿ ಮಾಡಿಸಿದಳು ೮೦

ಮುದದಿಂದ ಜಿ[3]ನರ[3]ಬಿಂಬಕೆ ಪ್ರತಿಷ್ಠೆಯ ಮಾಡಿ । ಚೆದುರೆ ಸೋಮೆಯು ಸರ್ವಜನಕೆ
ಹೃದಯಶುದ್ಧದಿ ಅವುತಣವ ಮಾಡಿಸಿದಳು । ಮೇದಿನಿ ಮೆಚ್ಚುವಂದದೊಳು ೮೧

ಪಗೆ ಕೆಳೆಯು[4]ರು[4]ಯೆಂಬುದೆಳ್ಳನಿತಿಲ್ಲದೆ । ನಗರಿಯೊ[5]ಳುಳ್ಳ[5] ಸರ್ವರಿಗೆ
ಮಿಗೆ ಹರುಷದಿ ಅನ್ನದಾನವನಿತ್ತಳು । ಜಗವೆಲ್ಲ ಕೊಂಡಾಡುವಂತೆ ೮೨

ಪ್ರೇಮದಿ ರುದ್ರದತ್ತನು ಕೂಡಿಯಿರುತಿರ್ದ । ಕಾಮಲತೆಯು ತಾಯಿಸಹಿತ
ಪ್ರೇಮದಿ ಉಣಬಂದು ಕಂಡರು ಸೋಮೆಯ । ಧಾಮರಂಜಿತಚೆಲ್ವಿಕೆ[6]ಯನು[6] ೮೩

ಎತ್ತಲಾನೊಂದುದಿವಸ ರುದ್ರದತ್ತನು । ಮ[7]ತ್ತಾ[7] ಸೋಮೆಯೊ[ಳು][8] ಭ್ರಮಿಸಿದೊಡೆ
ಚಿ[9]ತ್ತ್ರವ[9] ಇವಳ ಮೇಲಿಟ್ಟು ಮೋಹಿಸಿ[10]ದೊಡೆ[10] । ಮತ್ತೆ ಬಾರನು ನಮ್ಮ ಮನೆಗೆ ೮೪

ಇಂದಿಗೆ ಎಂಟುದಿವಸದೊಳು ಸೋಮೆಯ । ಕೊಂದುಹಾಕದೊಡೆ ಮತ್ತೆಮಗೆ
ಮುಂದೆ ಸುಖವು ನಮಗಿಲ್ಲೆಂದು ವಸುಮಿತ್ರೆ । ನಂದನೆಯೊಡನೆ ಪೇಳಿದಳು ೮೫

ಕಾಮಲತೆಯು ವಸುಮಿತ್ರೆ ತಾವಿರ್ವ[11]ರು[11] । ಸೋಮೆಯೊಳ್ ಕಪಟಸ್ನೇಹವನು
ಸಾಮವಿಲ್ಲದೆ ಮಾ[12]ಡಿ[12]ದೇವತಾರ್ಚನೆಗೆಂದು । ಧಾಮ ಪ್ರೀತಿಯೊಳು ಮಾಲೆಯನು ೮೬

ತಂದುಕೊಡುತ ಪೂವಿನಮಾಲೆ ಸ್ನೇಹದಿ । ಬಂದುಂಡು ಪೋಗುತಲಿದ್ದು
ಒಂದು ದಿವಸ ಉರಗನ ಕರಡಿಗೆಯೊಳು । ತಂದಿಟ್ಟು ಕೊ[13]ಡೆ[13]ಮಾಲೆಯೆಂದು ೮೭

ಕುಂದದೆ ಸೋಮೆ ತೆಕ್ಕೊಂಡು ಬಳಿಕ ತಾನು । ಚೆಂದದಿ ಜಿನರ ಪೂಜೆಯನು
ಸಂದ ಭಕ್ತಿಯೊಳ್ ಜಿನರಂಘ್ರಿಗೆ ಕುಸುಮವ । ತಂದು ಅರ್ಚಿಸುವೆನೆಂದೆನುತ ೮೮

---

[1] ದ (ಕ)  [2] ಣೆ (ಚ)  [3] ನ (ಗ)  [4] ರು (ಕ)  [5] ಳ್ಳ (ಗ)  [6] ಯು (ಕ)
[7] ತ್ರ (ಗ)  [8] ಳ್ (ಕಗ)  [9] ತ್ರ (ಕ)  [10] ಯಾವ (ಗಚ)  [11] ದ (ಕ)  [12] ಡೆ (ಚ)
[13] ಡೆ (ಕ)

ಕರ[1]ಡಿಗೆ[1]ಯೊಳಗಿರ್ದ ಸರ್ಪ[2]ನ[2] ಸೋಮೆ ತಾ । ಕರದಿ ಪಿಡಿವ ಸಮಯದೊಳು
ಸರಸಿಜಸೌರಭ್ಯಮಾಲೆಯಾಗಲು [3]ತಾನು[3] । ಅರ್ಹನ್ಮೂರ್ತಿಗೆ ಅರ್ಚಿಸಿದಳು ೮೯

ಕಾಮಲತೆಗೆ ವಸುಮಿತ್ರೆಗೆ ಉಣಲಿಟ್ಟು । ಪ್ರೇಮದಿ ಜಿನರ ಶೇಷೆಯನು
ಸೋಮವದನೆ ಕಾಮಲತೆಗೀಯೆ ಪುಷ್ಪಮಾಲೆ । ದಾಮ ಕಾಳೋರಗವಾಯ್ತು ೯೦

ಶೇಷನು ಮಗಳ ಕಡೆಯ ಕಂಡು ವಸುಮಿತ್ರೆ । ಓಸರಿಸದೆ ಬೊಬ್ಬೆ ಹೊಡೆಯೆ
ವೇಶಿಯ ಸುತೆ ತಾನು ವಿಷವೇರಿದಾಕ್ಷಣ । ಭೂಶಯನದಿ ಒರಗಿದಳು ೯೧

ಧರಣೀಶನೆಡೆಗೆ ಶಬವನೊಯ್ದು ವಸುಮಿತ್ರೆ । ಉರಗನ ಹಾರದಿಂದೆನುತ
ದುರಳೆ ಸೋಮೆಯು ಎನ್ನ ಸುತೆಯ ಕೊಂದಳುಯೆಂದು । ಅರಸನ ಮುಂದಳಲಿದಳು ೯೨

ಕಡುಕೋಪದಿಂದಲಿ ನೃಪ ಪೇಳೆ ಚರರೆಯ್ದು । ತುಡುಕಿಬಾರೆಂದು ಕರೆ[4]ಯಲು[4]
ಪೊಡವಿಪಾಲನ ಹಜಾರಕ್ಕೆ [ತಾ] ಬಂ[5]ದಳು[5] । ಕಡುಧೈರ್ಯದಿಂದಲಾ ಸೋಮೆ ೯೩

ಏನಲೆ ಪಾತಕಿ ವೇಶಿಯ ಸುತೆಯನು । ನೀನೇಕೆ ಕೊಂದೆ [6]ಪೇಳೆ[6]ನಲು
ಭೂನಾಥ ಕೇಳು ಪೂವಿನಮಾಲೆ ಕೈಗೀಯೆ । ತಾನು ಕಾಳೋರಗವಾಯ್ತು ೯೪

ಶಶಿಮುಖಿ ಸೋಮೆ ಪೇಳಿದ ನುಡಿಯನು । ಕೇಳಿ ಪುಸಿಯೆನೆ ಸರ್ವರು ನೃಪತಿ
ಹಸನಾದ ಕುಸುಮದ ದಂಡೆ ಕಾಳೋರಗ । ವಸುಧೆಯೊಳಾಗುವುದುಂಟೆ ೯೫

ಮತ್ತೆ ಈ ತೊತ್ತನು ಕತ್ತೆಯ ಮೇಲಿಟ್ಟು । ಸುತ್ತ ಮೆರೆಸಿ ಪೇಟೆಯೊಳಗೆ
ಕತ್ತ ಮುರಿದುಹಾಕಿ ವೇಶಿ ಕಾಲಡಿಯೊಳು । ಸತ್ತುಹೋಗಲಿಯೆಂ[7]ದ[7] ನೃಪತಿ ೯೬

ಜಾಣರ ದೇವ ಮಂತ್ರೀಶನಿಂತೆಂದನು । ಕಾಣಬಹುದು ಪರೀಕ್ಷೆಯೊಳು
ಮಾಣದೆ ಸರ್ಪನ ತರಿಸಿ ಹಿಡಿಸೆಯಿವ । ಳೊ[8]ಣೆ[8]ಯು ಕಾಣ್ಬಹುದರಸ ೯೭

ಸರ್ಪನ ತರಿಸಿ ಕರಡಿಗೆ[9]ಯೊಳಗಿಟ್ಟು । ತಪ್ಪದೆ ತೆಗೆಯೆ[10]ನಲ್[10] ಸೋಮೆ
ಒಪ್ಪದಿ ಜಿನ ಶರಣೆಂದು ಕೈಗಳನೀಡೆ । ಸರ್ಪವಾದುದು ಕೈಗೆ ಮಾಲೆ ೯೮

---

[1] ಡೆ (ಕ) [2] ನೆ (ಗ) [3] ತಾ (ಕ) [4] ದ (ಕ) [5] ದಾಗ (ಗ) [6] ಯೆಂದೆ (ಕ)

[7] ದು (ಕ) [8] ಣ್ಣ (ಕ) [9] ಡಿ (ಕಗ) [10] ನ್ನ (ಕ)

ತರುಣಿ ಪಿಡಿದ ಪೂವಮಾಲೆಯು ಶಬದ ಮೇ । ಲಿರಿಸಲು ಮಾಲೆ ಹೂವಾಗಿ
ಹಱಿಯು ಕಡಿವುತಿರೆ ಶಬವನು ಕಂಡಾಗ । ಅರಸ ಮೆಚ್ಚಿ[1]ದನು[1] ಸೋಮೆಯನು ೯೯

ಹಿಡಿದು ವೇಶಿಯ [2]ತಾಯ ತಾಟಿಸ[2] ಮಾಡಿದ । ಕುಡುಕುತನವನೆಲ್ಲವನು
ಬಿಡದೆ ಒಂದುಳಿಯದೆ ಪೇಳ್ದಳು ತನ್ನಿಂದ । ಮಡಿದಳು ಮಗಳೆಂದಳಾಗ ೧೦೦

ಅರ[3]ಸು ಸೋ[3]ಮೆಯ ಸಿಂಹಪೀಠದೊಳ್ ಸ್ಥಾಪಿಸಿ । ತರಿಸಿ ವಸ್ತ್ರಾಭರಣಗಳ
ಹರುಷದಿ ಕೊಡಲಾಗ ಸುರರೆಲ್ಲ ಗಗನದಿಂ । ಸುರಿದರು ಪಂಚಾಶ್ಚರ್ಯವನು ೧೦೧

ಚಾಪಲನೇತ್ರೆ ಸೋಮೆಯ ಪಾದ ಸೋಂಕಲು । ಏಪೇಳ್ವೆ ವೇಶಿಯ ಸುತೆಗೆ
ವ್ಯಾಪಿಸಿಯಿರ್ದ ಗರಳ ಹರೆಯಲು ಬಂದು । ಶ್ರೀಪಾದಗಳಿಗೆಱಗಿದಳು ೧೦೨

ಅರಸನು ಗುಣಪಾಲಶೆಟ್ಟಿ ಮುಂತಾಗಿರ್ದ । ವರಭವ್ಯಜನಸಂಕುಳವು
ಅರಸುಮಕ್ಕ[4]ಳು ಐನೂರ್ವರು[4] ಒಡಗೂಡಿ । ಪರಮನ ಗೃಹಕ್ಕೈದಿದರು ೧೦೩

ಸುಮತಿಭಟ್ಟಾರಕರ್ ದೀಕ್ಷೆಯನಿತ್ತರು । ಮಮತೆಯಿಂ ಕೈಕೊಂಡರೆಲ್ಲ
ಕ್ರಮದೊಳು ಸೋಮೆ [5]ಭೂಭೋ[5]ಗನೃಪತಿಯರು । ರಮಣಿ ಭೋಗವತಿ[6] ವೆರಸು[6] ೧೦೪

ಧರ್ಮಕಂತಿಕೆಯರ ಕೈಯೊಳ್ ದೀಕ್ಷೆಯನಾಂತು । ನಿರ್ಮಲತಪದೊಳಾಚರಿಸಿ
ಕರ್ಮವ ಲಯಮಾಡಿ ಸ್ವರ್ಗಾಪವರ್ಗವ । ಹರ್ಮ್ಯದೊಳಗೆ ನೆ[7]ಲಸಿ[7]ದರು ೧೦೫

ಈ ಪರಿಯನು ಕಂಡು ಎನಗೆ ಸಮ್ಯಕ್ತ್ವವು । ತಾ ಪುಟ್ಟಿತೆಂ[8]ದು[8] ವಲ್ಲಭೆಗೆ
ಚಾಪಲನೇತ್ರ ಗಂಧಶ್ರೀ ಪೇಳ್ದೊಡೆಯೆಲ್ಲ । ಏಪೇಳ್ವೆ ಇಚ್ಛಾಮಿಯೆನಲು ೧೦೬

ಕಿಱಿಯವಲ್ಲಭೆ ಕುಂದಲತೆಯಿಂತು ನುಡಿದಳು । ಬಱಿಯ ಮಾತಿಗೆ ನಾನೀಗ
ಹರು[9]ಷವ ಮಾಡಿ[9] ಇಚ್ಛಾಮಿಯೆಂಬೆನೆ ಈಗ । ಅಱಿಯದಾಡಿದ ಮಿಥ್ಯನುಡಿಗೆ ೧೦೭

ಇಂತೀ ಕಥೆಯ ಭೂ[10]ಪಸಹಿತ ಮಂತ್ರಿಯು[10] ಕೇಳಿ । ಸಂತೋಷವನು ಮಾಡಿ ಬಳಿಕ
ಚಿಂತೆ ಕಂಡುದ ಪೇಳ್ದೊಡೆ ಅದ ಪುಸಿಯೆಂದ । ಕಾಂತೆಯು ಬಡಿಸಬೇಕೆಂದ ೧೦೮

---

[1] ದ (ಕ) [2] ತಾ (ಕಬ) [3] ಸು (ಕ) [4] ಒಡಗೂಡಿಪನ್ನೂರ್ವರು (ಕ) [5] ಭೂ (ಕ)

[6] ಯರನು (ಕ) [7] ಸಿ (ಕ) [8] ನೆ (ಕ) [9] ಹರುಷನು ಮಾಡೆ (ಕ) [10] ಸಹಿತಾ (ಗ)

ಚಂಡಾಂಶು ಉದಿಸೆ ಆ ಭಂಡೆಯನೆಳತಂದು । ಷಂಡೆಯು ಬೋಳಿಸಿ ಬಳಿಕ
[ದಿ][1]ಂಡುಗೆಡೆದು ಬೀಳ್ವಂತೆ ಹೊ[2]ಯಿಸು[2]ವೆನೆಂದು । ಮಂಡಳೇಶ್ವರನಾಡಿದನು ೧೦೯

ಮಾರವ ಮೇಗಳ [3]ಚೋರ[3] ನಾತೆಣಸುತಲಿರ್ದ । ಅಱಿವುದೆ ಮಕ್ಷಿಕ ತಾನು
ಪರಿಮಳವನು ಅಳಿ ಅಱಿವಂತೆ ಪಾಪಿಗಳ್ । ಹರುಷ ಮಾಳ್ಪರೆ ಪುಣ್ಯಕಥೆಗೆ ೧೧೦

ಮಾರಸನ್ನಿಭರೂಪ ವಾರಿಧಿಗಂಭೀರ । ನಾರೀಜನಕೆ ಚಿತ್ತಜನು
ಸಾರಸದ್ಗುಣಮಣಿಭೂಷಣ ಕುಲದೀಪ । ಧೀರನ[4]ರ್ಹ[4]ದ್ದಾಸನೆಸೆದ ೧೧೧

ಇದ ಬರೆದೋದಿ ಕೇಳಿದರಿಗೆಯಾರೋಗ್ಯ । ಇದ ಕೇಳಿದವರಿಗೆ ಭಾಗ್ಯ
ಇದ ಚಿತ್ತದೊಳು ನೆರೆಗೊಳಿಸೆ ಸ್ವರ್ಗಕೆ ಯೋಗ್ಯ । ಇದು ಮುಕ್ತಿಸತಿಯ ಸೌಭಾಗ್ಯ ೧೧೨

ಇದು ಭವ್ಯಜನಚಿತ್ತಕುವಲಯಚಂದ್ರ [ಮ][5] । ತ್ತಿದು ಸಜ್ಜನರ ಕರ್ಣಾಭರಣ
ಇದು ಸಮ್ಯಕ್ತ್ವದ ಲತೆ ಬೀಜ ಭಾವಿಸೆ । ಇದ ಕೇಳ್ದ[6]ವರ[6] ಪಾಪ ಹರಣ ೧೧೩

ಸುರನರೋರಗಪತಿವಂದಿತಚರಣಾಬ್ಜ । ಪರಮಪಾವನ ಮುಕ್ತಿಯರಸ
ಕರುಣಾಸಾಗರ ಚಂದ್ರಮ ಸುಪಾರ್ಶ್ವೇಶ । ಶರಣು ಶರಣು ಜಗದೀಶ ೧೧೪

---

[1] ಓ (ಕಗ) [2] ಯ್ಯು (ಕ) [3] ಕಳ್ಳ (ಗ) [4] ರುಹ (ಗ) [5] ರ (ಕ) [6] ಮಮ (ಕಗಚ)

# ಎಂಟನೆಯ ಸಂಧಿ

ಇಂದುಶೇಖರನ ಸತಿಯ ತಂದೆ ಕಡಿದನ । ಕಂದನ ಭಾವನಾತ್ಮಜನ
ಮುಂದುಗೆಡಿಸಿ ಮುಕ್ತಿವಡೆದನ ಪಾದಾರ । ವಿಂದಗಳಿಗೆ ವಂದಿಸುವೆನು ೧

ಸುರನರೋರಗಪತಿಮುಕುಟಕೀಲಿ[1]ತ[1]ರತ್ನ । ಕಿರಣಶೋಭಿತ ಚರಣಾಬ್ಜ
ವರಭ[2]ವ್ಯಹೃದಯಾ[2]ಂಬುಜಮಿತ್ರನೆನಿಸಿದ । ಗುರುವೆ ಸುಪಾರ್ಶ್ವಜಿನಪ ೨

ಪಂಕಜಮಿತ್ರನಾತ್ಮಜನನುಜನ ತಂದೆ । ಮುಂಕೊಂಡು ಬರೆ ಯುದ್ಧದೊಳಗೆ
ಶಂಕೆಯಿಲ್ಲದೆ ಗೆಲ್ದ ಇರುವ ದೇವನ ಪಾದ । ಪಂಕಜಗಳಿಗೆಱಗುವೆನು ೩

ಹರುಷದಿ ಅರ್ಹದ್ದಾಸನು ಕೇಳೆ ಮಿತ್ರಶ್ರೀ । ಪರಮಸಮ್ಯಕ್ತ್ವವು ತ[3]ನ[3]ಗೆ
ಪುಟ್ಟಿದುದೊಂದು ತೆಱ[4]ನ[4] ಪೇಳೆಂದೊಡೆ ಸಂ । ತುಷ್ಟಿಯಿಂದುಸಿರಿದಳಿಂತು ೪

[5]ರಾ[5]ಜಗೃಹವೆಂಬ ಪಟ್ಟಣ ಇರುತಿರೆ । [6]ರಾಜರಾ[6]ಜನ ಪುರದಂತೆ
ರಾಜನದಕೆ ಸಂಗ್ರಾಮಸುರನೃಪತಿ ಸತಿ । ರಾ[7]ಜ[7]ವದನೆ ಕನಕಮಾಲೆ ೫

ಆ ಪುರದೊಳು ವೈಶ್ಯಾಂಬರಸೂರ್ಯನು । ರೂಪುಮನ್ಮಥನು ಕೋವಿದನು
ಪಾಪಭೀತನು ಪರಹಿತಗುಣಚರಿತನು । ಕೋಪವರ್ಜಿತ ಕೋಮಲಾಂಗ ೬

ಏಪೇಳ್ವೆ ವೃಷಭದಾಸನುಯೆಂಬ ಪರದನು । ಓಪಳು ಜಿನದತ್ತೆಯವಗೆ
ರೂಪಿನೊಳಗೆ ರತಿಯಂತೆ ಶೀಲದಿ ಸೀತೆ । ತಾ ಪಡಿಯಾಗಿರುತಿಹಳು ೭

ನಿತ್ಯ ಶೀಲೋಪವಾಸಂಗಳ ತಾಂ ಮಾಡಿ । ಸತ್ಯದಿ ಸಕಲ ಬಂಧುಗಳ
ಅತ್ಯಂತ ಹಿತಗೂಡಿ ಇರುತಿಹ ಸತಿಯುನಾ । [8]ನೆಂತದ ವರ್ಣಿಸಬಹುದು[8] ೮

---

1 ಕರ (ಗ)   2 ವ್ಯಾಂ (ಕ)   3 ವು (ಕ)   4 ನು (ಗ)   5 ಅರಾ (ಗ)   6 ರಾ (ಕ)
7 ಜೀ (ಕ)   8 ಎಂತೆಂಬೆನವಳ ಸದ್ಗುಣವ (ಕ)

ರತಿರೂಪೆ ಮತಿವಂತೆ ವ್ರತ ನೀತಿಸಂಯುತೆ । ಸತತ ಮಂಗಲಮಾನಿನಿಯು
ಪತಿಯೊಳು ಹಿತಗೂಡಿ ಇರುತಿಹ ಸದ್ಗುಣ । ಸತಿಯ ನಾನೇನ ಬಣ್ಣಿ[1]ಸುವೆ[1]

ಒಂ[2]ದುದಿವ[2]ಸ ಮುನಿಗಳಿಗೆ ಆಹಾರವ । ಚಂದದಿ ಕೊಡುವೆನೆಂದೆನುತ
ಗಂಧಾಕ್ಷ[3]ತೆಯ[3] ತಟ್ಟೆಯಾಂತು ಬಾಗಿಲ ಮುಂದೆ । ನಿಂದಿರೆ ಭಕ್ತಿಯುವೆರಸಿ ೧೦

ಉತ್ತಮಮುನಿಪ ಬಾ[4]ವುಲಿ[4] ಇಟ್ಟು ಬರುತಿರೆ । ಸತ್ಕೃಪಾನಿಧಿ ಜಿನದತ್ತೆ
ಮತ್ತೆ ಬಾ[5]ವುಲಿ[5]ಗೆ ನಿಲಿಸೆ ಕಂಡು ಬಿಗಡವು । ಪತ್ತಿತೆನುತ ಪೋದರಾಗ ೧೧

ಏನು ಕಾರಣ ಬಾ[6]ವುಲಿಯು[6] ಮುರಿ[7]ದುದು[7] ಎಂದು । ತಾನು ಚಿಂತಿಸಿ ಮನದೊಳಗೆ
ಊನವೇನುಂಟೆನ್ನೊಳೆಂದು ಕೇಳುವೆನೆಂದು । ತಾನು ಪೋದಳು ಜಿನಗೃಹಕೆ ೧೨

ಜಿನಪತಿಗೆರಗಿ ಮುನೀಂದ್ರರಿಗೊಂದಿಸಿ । ಮುನಿಪತಿಯನು ಕೇಳ್ದಳಾಗ
ಘನಪುಣ್ಯದಿ ನಿಮ್ಮ ಬಾ[8]ವುಲಿ[8] ಮುರಿದುದ । ನನಗುಸುರೆನೆ ಪೇಳ್ದರಿಂತು ೧೩

ಪುರುಷರು ನಿಲಿಸಬೇಕಲ್ಲದೆ ಯತಿಗಳ । ಪುರುಷರಿಲ್ಲದವರು ಸತತ
ವೆರಸಿ ನಿಲ್ಲಿಸಬೇಕು ಸ್ತ್ರೀಯರೊಡನೆ ಮುನಿ । ತೆರಳಲಾಗದು ಕೇಳು ಮಗಳೇ ೧೪

ಚಂದದಿ ಮುನಿವಚನವ ಕೇಳಿ ಜಿನದತ್ತೆ । ಬಂದು ಮನೆಗೆ ಪತಿಯೊಡನೆ
ನಂದನರಿಲ್ಲದ ಸಂಸಾರ ಸದ್ಗತಿ । ಹೊಂದ[9]ದೆಂ[9]ಬರು ಬುಧಜನರು ೧೫

ಮಕ್ಕಳಿಲ್ಲದ ಮನೆ ಅಕ್ಕರಿಲ್ಲದ ಊಟ । ಸೊಕ್ಕುವ ಮದವಿಲ್ಲದಾನೆ
ಕಕ್ಕಸಕುಚ[10]ಗಳಿ[10]ಲ್ಲದ ನಾರಿ[11]ಯರ[11] ರೂಪು । ದಿಕ್ಕನೊಳಗೆ ರಂಜಿಸುವುದೆ ೧೬

ಮುಪ್ಪಿನ ಕಾಲಕ್ಕೆ ಮನೆಯ ವಸ್ತುವನೆಲ್ಲ । ಒಪ್ಪಿಸಿ ಸುತರಿಗೆ ತಾವು
ಒಪ್ಪದಿಂದಲಿ ಏಕಚಿತ್ತದಿ ಗತವಾಗೆ । ತಪ್ಪದಹುದು ಸ್ವರ್ಗಗತಿಯು ೧೭

ಭಯವಿಲ್ಲದ ಭಕ್ತಿ ದಯವಿಲ್ಲದ ತಪ । ಹಯವಿಲ್ಲದ ಬಹುದಳವು
ಪ್ರಿಯವಿಲ್ಲದ ಬಂಧು ಧರೆಯೊಳು ಧರ್ಮದಾ । ಕ್ರಿಯ[12]ವಿಲ್ಲದೆ[12] ಪುಣ್ಯಬಹುದೆ ೧೮

---

[1] ಪೆನು (ಗ) [2] ದಿ (ಕ) [3] ತೆ (ಕ) [4] ವರಿ (ಗ) [5] ವರಿ (ಗ) [6] ವರಿ (ಗ)
[7] ದೋ (ಕ) [8] ವರಿ (ಗ) [9] ನೆಂ (ಗ) [10] ಏ (ಕ) [11] ಯ (ಕ) [12] ಲ್ಲಿದ (ಕ)

ಅಷ್ಟೈಶ್ವರ್ಯವ ಬಯಸುವರೆಲ್ಲರು । ನಿಷ್ಠೆಯಿಂದಲಿ ನೋಂಪಿ ಮಾಡಿ
ಸೃಷ್ಟಿಯೊಳ್ ಪಡೆವರಲ್ಲದೆ ಆದು ಸುಮ್ಮನೆ । ಇಷ್ಟಾರ್ಥ ಬಯಸೆ ಬಂದಪುದೆ ೧೯

ಹಿಂದಣ ಭವದೊಳು ಮಾಡಿದ ಪುಣ್ಯದಿ । ಕಂದನ ಪಡೆವರುತ್ತಮರು
ಕಂದರ್ಪವಿಜಯನ ಪೂಜೆಯ ಮಾಡದೆ[1] । ನಂದನರ್ಬಯಸೆ ಬಂದಪುದೆ ೨೦

ನನಗೆ ಮಕ್ಕಳು ಇಲ್ಲ ನಿನಗೊಂದು ಹೆಣ್ಣನು । ಅನುವಾಗಿ ಮದುವೆ ಮಾಡಿದೊಡೆ
ತನುಜನಾಗುವರೆಂದು ಪತಿಯೊಳು ಜಿನದತ್ತೆ । ವಿನಯವ ನುಡಿದು ಪೇಳಿದಳು ೨೧

ವೃದ್ಧರು ಮದುವೆಯಾದೊಡೆ ಕುಲದೊಳಗಿರ್ಪ । ವೃದ್ಧರೆಲ್ಲರು ನಗದಿಹರೆ
ಪೊರ್ದಿ ನಾ ಮದುವೆಯಾಗುವೆನೆನೆ ಎಳೆವೆಣ್ಣ । ವೃದ್ಧಗೆ ಕೊಡುವವರುಂಟೆ ೨೨

ತಪ್ಪದೆ ನಾ ಪೋಗಿ ನಂಟರ ಮನೆಯೊಳ । ಗಿರ್ಪ ಕನ್ನಿಕೆಯನು ತಂದು
ತಪ್ಪದೆ ಮದುವೆಯ ಮಾಡುವೆ ನಿ[2]ನ[3]ಗೆ ನಾ । ಒಪ್ಪಿಕೊ ಎಂದುಸುರಿದ[4]ಳು[4] ೨೩

ಈ ಪರಿಯೊಳು ನಾನಾ ನೀತಿಗಳನು[5] ಪೇಳಿ । ಓಪನ ಒಪ್ಪಿಸಿಕೊಂಡು
ತಾ ಪೋಗಿ ತಮ್ಮ ಚಿಕ್ಕಮ್ಮಗೆ ಪೇ[5]ಳ್ದ[5]ಳು । ರೂಪುಸಂಪನ್ನೆ ಇಂತೆಂದು ೨೪

ನಂದನ[6]ರಿನಗಿ[6]ಲ್ಲ ಚಿಕ್ಕಮ್ಮ ಕೇಳ ನಿ[7]ನ್ನೀ[7] । ನಂದನೆ ಕಾಮಲತೆಯನು
ಚೆಂದದಿ ನನ್ನ ಪತಿಗೆ ಮದುವೆಯ ಮಾಡೆ । ಸುಂದರರಹರು ಕೇಳಮ್ಮ ೨೫

ಪರರ ಮನೆಯ ಹೆಣ್ಣ ತಂದರೆ[8] ಎನಗೆ[8]ದು । ಎರವಾಗುವ[9]ದು ಆದಱಿಂದ
ಹರುಷದಿಂದಲಿ ನಿನ್ನ ಸುತೆಯನಿತ್ತರೆ ನಾನು । ಎರವಿಲ್ಲದಿರುವೆ ತಂಗಿಯೊಳು ೨೬

ರೂಪಿನೊಳಗೆ ರತಿಯಂತೆ ನೀನಿರುತಿರೆ ಕು । ರೂಪೆ ಕಪ್ಪಿನೊಳಿವಳೆಲೆ
ಓಪನಿವಳ ಮೇಲೆ ಮೋಹವ ಮಾಳ್ಪನೆ । ಪಾಪದ ನುಡಿಬೇಡ ಮಗಳೇ ೨೭

ಅಮೃತವ ಬಿಟ್ಟು ಅಂಬಲಿಯನುಂಬರೆ ಬೇಗ । ರವೆಷ್ಟು ನೀನಿರೆ ಎನ್ನ ಸುತೆಯ
ಮಮತೆ ಮಾಳ್ಪನೆಯೆಂದು ಪೇಳ್ದ ಚಿಕ್ಕಮ್ಮಗೆ । ಕಮಲಾಕ್ಷಿ ಪೇಳ್ದಳಿಂತೆಂದು ೨೮

---

[1] ಡ (ಕ) [2] ಮ (ಕ) [3] ನು (ಕ) [4] ಳ (ಗ) [5] ಳದ (ಗ) [6] ರಿಗೆ (ಕ)
[7] ನ್ನ (ಕ) [8] ನಗೆಯ (ಗ) [9] ದ (ಕ)

ಇಂದ್ರನೀಲವು ಕಪ್ಪು ಚಂದ್ರನೊಡಲು ಕಪ್ಪು । ಮಂ[1]ದ[1]ಯಾನೆಯು[2]ರಕ್ಷಿ[2] ಕಪ್ಪು
ಇಂದುಮುಖಿಯರ ಕುಚಾಗ್ರದಿ ಕಡುಕಪ್ಪು ಕ । ಪ್ಪಿಂದ ಕೊರತೇನು ತಾಯೇ ೨೯

*ಮಾರನ ಕೈಯ ಕಬ್ಬಿನ ಬಿಲ್ಲು ತಾ ಕಪ್ಪು । ನಾರಿಯರಳಕ ತಾ ಕಪ್ಪು
ಆರಡಿ ಕಪ್ಪು ನೇರಿಲಹಣ್ಣು ತಾ ಕಪ್ಪು । ನಾರಿಯ ಬಡಬಾಸೆ ಕಪ್ಪು ೩೦

ಹರಿಯ ಅಂಗವು ಕಪ್ಪು ಹರನ ಕೊರಳು ಕಪ್ಪು । ಉರಗನ ಹೆಡೆಯೊಳು ಕಪ್ಪು
ವರವಾಣಿ ಹಸ್ತ[3]ದ[3] ವೀಣೆ ತಾ ಕಡುಕಪ್ಪು । ಕೊರತೆ ಏನಮ್ಮ ಕಪ್ಪಿಂದ ೩೧

ಮಿಗೆ ಹರುಷದಿ ಸತಿಯರು ತೊಟ್ಟ ಬಳೆ ಕಪ್ಪು । ಅಗಿಲು ಕಸ್ತೂರಿಗಳು ಕಪ್ಪು
ಮಿಗೆ ವಾರಣ ಕಪ್ಪು ಕೋಗಿಲೆ ತಾ ಕಪ್ಪು । ಬಗೆಮಾತು ಬೇಡೆ[4]ಲೆ[4] ತಾಯೆ ೩೨

ಚಿಪ್ಪಿನೊಳಗೆ ಮುತ್ತು ಪಂಕದೊಳ್ ಪದ್ಮವು । ಒಪ್ಪದಿ ಪುಟ್ಟುವಂದದೊಳು
ಕಪ್ಪಿನವಳ ಗರ್ಭದೊಳಗೆ ಸತ್ಪುರುಷರು । ತಪ್ಪದೆ ಪುಟ್ಟುವರಮ್ಮ ೩೩

ಕ್ಷೋಣಿಯೊಳಗೆ ನವರತ್ನ ಜನಿಸುವಂತೆ । ಏಣಾಕ್ಷಿ ನಿನ್ನಯ ಸುತಗೆ
ಜಾಣರು ನವಪಂಚಬಾಣರುದಿಪರೆಂದು । ಜಾಣೆ ಪೇಳ್ದಳು ಜನನಿಯೊಳು ೩೪

ಚಿಕ್ಕಮ್ಮ ಕೇಳ[5]ಮ್ಮ[5] ತಂಗಿಯ ಗರ್ಭದಿ । ಚೊಕ್ಕಸುತರು ಜನಿಸುವರು
ಮಿಕ್ಕ ಮಾತೇ[6]ನು[6] ನಾನಿರುತಿರೆ ಸಕಲಕ್ಕೆ । ಗಕ್ಕನೆ ಕೊಡು ಎನ್ನ ತಾಯೆ ೩೫

ಜಿನಪತಿ ಸಾಕ್ಷಿಯೊಳ್ ಜಿನದತ್ತೆ ಹರುಷದಿ । ತನುಮನ ವಚನ ಶುದ್ಧಿಯೊಳು
ಘನತರ ಸುಜೀವ ಬ್ರಹ್ಮಚರ್ಯವು ಈಗ । ನನಗಿರಲೆಂದುಸುರಿದಳು ೩೬

ಮತ್ತೆ ಎನ್ನಯ ತಂಗಿ ಸುತರ[7]ನು[7] ಪಡೆದೊಡೆ । ಪ್ರೀತಿಯಿಂದೊಪ್ಪಿಸಿ ಬಳಿಕ
ನೂತನ ವ್ರತಗಳ ಧರಿಸಿ ಸಂಸಾರದ । ಪಾತಕವನು ಕೆಡಿಸುವೆನು ೩೭

ಜಿನದತ್ತೆ ಬ್ರಹ್ಮಚರ್ಯವ ಕೊಳಲಾಕ್ಷಣ । ಮನದಕ್ಕರಿಂ ತನ್ನ ಸುತೆಯ
ಘನತರ ವಿಭವದಿ ವೃಷಭದಾಸಗೆ ತಾನು । ಜನದಚ್ಚರಿಯೊಳೀವೆನೆನಲು ೩೮

---

[1] ನ್ನ (ಗ) [2] ರಾ (ಗ) [3] ದಿ (ಗ) [4] ನ್ನ (ಗ) [5] ನ್ನ (ಗ) [6] ಕೆ (ಗ)
[7] ನ (ಗ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಅಭವಗೆ ಪೂಜೆಯ ಮಾಡಿ ಸುಲಗ್ನದಿ । ಸಭೆಯೆಲ್ಲ ಮೆಚ್ಚುವಂದದೊಳು
ವಿಭವದಿ ಮದುವೆಯ ಮಾಡಲು ಜಿನದತ್ತೆ । ಶುಭದೊಳಿದ್ದಳು ತಂಗಿಯೊಡನೆ ೩೯

ಜಿನದತ್ತೆ ಇಂತಿರುತಿ[1]ರ್ದೊಂ[1]ದು ದಿನದೊಳು । ಮನೆಗೆಲಸವ ತಂಗಿಗಿತ್ತು
ಘನತರ ನೋಂಪಿಯ ಕೈಕೊಂಡು ಜಿನಪೂಜೆ । ಅನು[2]ರಾಗ[2]ದಿಂ ಮಾಡುತಿರಲು ೪೦

ಪಿರಿಯ ವಲ್ಲಭೆಯ ಮಾರ್ಗ[3]ವೆ ಮಾರ್ಗ[3] ತನಗೆಂದು । [4]ಪರದ[4] ಬಸದಿಗೈ[5]ದಿ[5] ಬಳಿಕ
[ತ]ರಿಸಲು ಮನೆಯಿಂದ ತುಪ್ಪ ಕಜ್ಜಾಯವ ಪರಮನ । ಪೂಜೆಯ ಮಾಳ್ಪುದಕೆ ೪೧

ಈಯಂದದೊಳು ಮನೆಗೆಲಸವ ಮಾಡುತ್ತ । ತೋಯಜಮುಖಿ ಕಾಮಲತೆಯು
ತಾ[6]ಯು[6] ಮನೆಗೆ ಪೋಗೆ ಮಗಳ ಕೇಳಿದಳಾಗ । ಪ್ರೀಯದೊಳಿಹನೆ ನಿನ್ನರಸ ೪೨

ನಿನ್ನ ಸವ[7]ತಿಯ[7] ಮಗಳಿಗೆ ಸವತಿಮಾಡಿ । ನನ್ನ ಸುಖವ ಕೇಳಲೇಕೆ
ಮುನ್ನೇಸರುದಯಕ್ಕೆ ಎದ್ದು ದಾದಿಯವೊಲು । ಭಿನ್ನವಿಲ್ಲದೆ ಮಾಳ್ಪೆ ಬದುಕ ೪೩

ಹೊತ್ತು ಹುಟ್ಟದ ಮುನ್ನ ನಾನೆದ್ದು ಪಶುಗಳ । ಮತ್ತೆ ಕಜ[3]ದು ಕಾಸಿ ಕಡೆದು
ತೊತ್ತುಗೆಲಸದೊಳು ಹೊತ್ತು ಕಳೆದು ರಾತ್ರೆ । ಸತ್ತಂತೆ ಬೀಳ್ವೆ ಮಂಚದೊಳು ೪೪

ನೋಂಪಿಯ ನೆವದಿಂದ ಕಜ್ಜಾಯ ತುಪ್ಪವ । ಪಾಪಿಗಳ್ ತರಿಸಿ ತಾವೀಗ
[8]ಏಪ್ಪೊ[8]ತ್ತು ದಂಪತಿಗಳು ತಿಂದು ಬಸದಿಯೊಳ್ । ಪಾಪವೆನ್ನದೆ ಕೂಡಿಹರು ೪೫

ತೋಯಜಮುಖಿ ಕಾಮಲತೆ ದುಃಖದಿಂದಲಿ । ತಾಯ ಶಪಿಸಿಯಳುತಿ[9]ರಲು[9]
ತಾಯಿ ಮಗಳ ಕಣ್ಣೀರ [10]ಒರೆಸಿ[10] [ನಾ] ನಿನ್ನ । ಪ್ರೀಯುವ ಸಲಿಸುವೆ ಮಗಳೆ ೪೬

ಮತ್ತೆ ಬದುಕುವ ಮನೆಗೆ ಕೊಡಲೀಯದೆ । [11]ತೊ[11]ತ್ತುಗೆಲಸಕೆ ತಂದವಳ
ಕ[ತ್ತ]ಸಿ ನಿನ್ನ ವಲ್ಲಭನೊಳು ಸುಖವನು । ಪ[ತ್ತ]ಸದೊಡೆ [12]ಇ[12] ವೃ ವೆಹಲೆಯೆ ೪೭

ನಂದನೆಯೋಗಾಡಿಯವಳ ಶೋಕಾಗ್ನಿಯ । ನಂದಿಸಿ [13]ಮನೆಗವಳ್ಕಳುಹೆ[13]
ಒಂದುದಿವಸ ತನ್ನ ಅಂಗಣದೊಳಗೊರ್ವ । ಬಂದುನಿಂದನು [14]ಅವ[14]ಧೂತ ೪೮

---

[1] ರಲೊಂ (ಕ) [2] ಗಾಲ (ಕ) [3] ವ (ಕ) [4] ಬರದಿ (ಕ) [5] ದು (ಕ) [6] ಯಿ (ಕ)
[7] ತಿ (ಕ) [8] ಎಪ್ಪ (ಕ) [9] ಹಳು (ಕ) [10] ತೊಡೆದು (ಗ) [11] ತೊತ್ತುಗೆತೊ (ಕ)
[12] ಈ (ಕ) [13] ಯುವಳ್ಪೋಗೆ (ಕ) [14] ಯಮ (ಕ)

ಕುಂಡಲವ್ಯಗ ಜಡೆವಿಭೂತಿ ತಿಲಕವ । ಚೀಲ ಶುಖಿನ್ನರ ತಾತಿ
ಮೇಲೆ ಚಂದನಬೊಟ್ಟು ರುದ್ರಾಕ್ಷಿಸರದಿಂದ । ಕಾಲಭೈರವನಂತೆಸೆದ ೪೯

ಪುಲಿದೊಗಲುಡುಗೆ ಪೂವಿನ ಮಾಲೆ ಶಿರದೊ[1]ಳು[1] । ಜಲಧಿಯು ಶಂಕಿನಸರವು
ಬಲುದೊಡ್ಡದೇಹ ರೌದ್ರಾಕಾರವನು ಕಂಡು । ಲಲನೆ ಇಂತೆಂದೆಣಿಸಿದಳು ೫೦

ಬಂದು ಭವತಿ ಭಿಕ್ಷಾಂದೇಹಿಯೆನಲು ಇವ । ಹಿಂದೆ ಬಂದವರಂತಲ್ಲ
ಒಂದು ಕಾರ್ಯವು ಇವನಿಂದಲಾಗುವುದೆಂದು । ಇಂದುಮುಖಿಯು ಮುದದಿಂದ ೫೧

ತಂದು ತಾನವನಿಗೆ ಪಂಚಭಕ್ಷ್ಯವನಿಟ್ಟು । ಚೆಂದದಿ ನುಡಿದಳಿಂತೆಂದು
ಒಂದುದಿವಸ ನೀನು ಉಳಿಯದೆ ಇಲ್ಲಿಗೆ । ಬಂದುಂಡು ಪೋ[2]ಗು[2] ಎಂದೆನಲು ೫೨

ನಾರೀಕೇಳವ ಬಿತ್ತಿ ತಾ ನೀರನೆಜ[3]ವಡೆ । ಸಾರಾಮೃತವ[3]ನೀವಂ[3]ತ್ರೆ
ನಾರಿ ತನ್ನಯ [4]ಕಾರ್ಯಕಾರಣದಿಂದಲಿ । ಓರಣದಿಂ ಮಣಿಸಿವಳು ೫೩

ಚಿತ್ತಮ್ಮನಿಂದಲಿ ಹೆಚ್ಚಾಗಿ ಸಲಹಿದೆ । ಮತ್ತೆನ್ನ ತಾಯ ಸಮಾನ
ಚಿತ್ತಶುದ್ಧದಿ ನೀನು ಪೇಳಿದ ಕಾರ್ಯವ । ಮತ್ತೆ ನಾ ಮಾಡಿಕೊಡುವೆನು ೫೪

*ಲೋಕದೊಳ್ ನಾನರಿಯದ ವಿದ್ಯವೊಂದಿಲ್ಲ । ಬೇಕಾದ ಕಾರ್ಯವ ಇಂದು
ವ್ಯಾಕುಲವಿಲ್ಲದೆ ಪೇಳ್ದಳು ತಾ ಮುಂದೆ । ಕಾಕಾಗಿ ಕೆಡುವ ಕಾರ್ಯವನು ೫೫

ನನ್ನ ಮಗಳ ಸವ[5]ತಿಯು[5] ಜಿನದತ್ತೆಯು । ಬನ್ನಬಡಿಸಿ ಕೊಲ್ಲಬೇಕು
ನನ್ನ ಕಾರ್ಯವಿದೆಂದು ಜೋಗಿಯೊಡನೆ ಮತ್ತೆ । ಕನ್ನೆ ಕೈಮುಗಿದು ಪೇಳಿದಳು ೫೬

ಅಂದಿನ ಪಗ[6]ಲ[6] ಕಳಿದು [7]ಮಾನಿ[7]ನಿ ತಾನು । ತಂದೀಯಲರಿಯು ವಸ್ತ್ರವನು
ಕುಂದದೆ ಅವ [ಧೂರ್ತ] ಪ್ರೇತವಾಸವ ಪೊಕ್ಕು । ಒಂ[8]ದು ಶವ[8]ವನು ಕುಳ್ಳಿರಿಸಿ ೫೭

ಅದರ ಕೈಯೊಳು ಖಡ್ಗವಿತ್ತು [9]ಪೂ[9]ಜಿಸಿದರೆ । ಮುದದಿಂದ ಬೇತಾಳ ಬಂದು
ಪುದುಗಲು ಶವವೆದ್ದು ಘುಡುಘುಡಿಸುತ ತಾನು । ಒದಗಿ ಬೆಸನ ಕೇಳೆ ಜೋಗಿ ೫೮

---

[1] ಳ (ಕ) [2] ಗೆ (ಗ) [3] ನೆರದಂ (ಕ) [4] ಕಾ (ಕ) [5] ತಿ (ಗ) [6] ಲು (ಕ)
[7] ಮು (ಕ) [8] ದಸು (ಕ) [9] ಜೀವಿ (ಕ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಈಪೂರ ಬಸದಿಯೊಳ್ ಜಿನದತ್ತೆ ಇರ್ಪಳು । ತಾವಂಕೆ ಮಾಡಬೇಕವಳ
ನಾವು ಪೇಳುವ ಬೆಸನಿದುಯೆನೆ ಬೇತಾಳ । ನೋವುತ ನುಡಿದುದಿಂತೆಂದು ೫೯

ಮಾರಿಯು ಒಡಲ ಸೀಳೆನ್ನದೆ ವಾರ್ಧಿಯು । ಹೀರು ಎನ್ನದೆ ಭೈರ[1]ವನ[1]
ಹಾರಿಸಿ ತಳೆ ಹಿಡಿಯೆನ್ನದೆ [2]ಈ[2] ನರ । [3]ನಾ[3]ರಿಯು ಕೊ[4]ಲ್ಲೆನ್ನಬಹುದೆ[4] ೬೦

ಹರನುರಿಗಣ್ಣ [5]ನ[5]ದಿಸಿ ಮೇರುಗಿರಿಯನು । ಹೊರಳಿಸೆನ್ನದೆ ಕುಲಗಿರಿಯ
ತಿ[6]ಟಿ[6]ಕಲ್ಲನಾಡುಯೆನ್ನದೆ ಈಗ ಈ ನರ । ಗುಱಿಯು ಕೊಲ್ಲೆಂಬುದುಚಿತವೆ ೬೧

ನಮ್ಮ ಪಗೆಯು ನೀನು ಕೊಂದರೆ ನಮಗದು । ಸುಮ್ಮಾನವಹುದೆಮ್ಮ ಮನಕೆ
ಗಮ್ಮನೆ ಪೋಗಿ ಕೊಲ್ಲೆನೆ ಬೇತಾಳ ತಾ । ಹಮ್ಮಿನೊಳೆದ್ದುದಾರ್ಬಡಿಸಿ ೬೨

ಶಾಕಿನಿ ಡಾಕಿನಿ ಭೂತ ಪಿಶಾ[6]ಚ[6]ಗಳ್ । ಕಾಕಾಗಿ ಮೊಱೆದಿದವಾಗ
ಶೋಕದಿ ಅಳಲ್ದವು ಗ್ರಹಗಳು ಧ್ವನಿಗೇಳಿ । ತಾ ಕೆಟ್ಟೆವೆಂದು ಓಡಿದುವು ೬೩

ಈ ಪರಿ ಬೇತಾಳನಾರ್ಬಡಿಸುತ ಬರೆ । ಆ ಪುರ ಬೆದರಿ ಬೇತಾಳ
ಐಪೇಳ್ವ ಜಿನಗೃಹವನು ತಾನು ಬಲವಂದು । ಕೋಪವ ಬಿಟ್ಟು ನಿಂದಿರಲು ೬೪

ಸತ್ಯಸದ್ಗುಣಮಣಿ ಜಿನದತ್ತೆ ಮಾಡುವ । ಉತ್ತಮ ಜಿನಪೂಜೆಗಳಿಗೆ
ಮತ್ತೆ ಯಕ್ಷ ಯಕ್ಷಿಯರೆಲ್ಲ ಬಸದಿಯೊಳ್ । ನಿತ್ಯಮಂಗಲದೊಳಗಿಹರು ೬೫

ಜಿನದತ್ತೆ ಭಕ್ತಿಗೆ ಶಾಸನದೇವಿಯು । ರನುನಯದಿಂದಿರುವುದನು
ಮನವಾರೆ ಕಂ[7]ಡು ಬೇತಾಳ ತಾ[7] ಭಯದಿಂದ । ತನಗೆ ಅಸಖ್ಯವೆಂದಂಜಿ ೬೬

ಈ ಪರಿಯೊಳು ಮೂಱುದಿವಸ ಬೇತಾಳನು । ತಾ ಪೋಗಿ ಕೊಲಲಂಜಿ ಬರಲು
ಕಾಪಾಲಿ ಬೇತಾಳನೊಳಗಿಂತು ನುಡಿದನು । ಲೋಪವಾದುದು [8]ನಿ[8]ನ್ನ ವಚನ ೬೭

ಆಡಿದ ಮಾತ ತಪ್ಪಿದ ಪುರುಷರಿಗೆಲ್ಲ । ಕೋಡಿಯಲ್ಲವೆ ಧರೆಯೊಳಗೆ
ಪಾಡಿನೊಳಾನೆಯನೇಱಿದವರು ಮತ್ತೆ । ಆಡೇಱಿ ದಿಡ್ಡ ಹೊಕ್ಕಂತೆ ೬೮

---

[1] ನನ್ನ (ಗ) [2] ಈಗ (ಗ) [3] ಗು (ಗ) [4] ಲ್ಲೆಂಬುದುಚಿತವೆ (ಗ) [5] ನೊಂ (ಗ)

[6] ಟಿ (ಗ) [7] ಡು (ಕ) [8] ನ (ಕ)

ಪಾಪಿಗಳನು ಕೊಲ್ವೆನಲ್ಲದೆ ಈಗಲು । ಪಾಪವಿಲ್ಲದ ಪುಣ್ಯವತಿಗೆ
ಅಪತ್ತನೆಸಲಾಗದುಯೆಂದು ಬೇತಾಳ । ಕೋಪದಿ ನುಡಿಯೆ ಜೋಗಿಯೊಳು ೬೯

ಕೆಟ್ಟ ಪಾಪಿಗಳ[1]ನು[1] ತೋಜು ತೋಜದೊಡೀಗ । ಮೆಟ್ಟಿ ಸೀಳು[2]ವೆನು[2] ನಿನ್ನೊಡಲ
ಕೆಟ್ಟಿತು ಕಾರ್ಯವೆನುತಲವಧೂತನು । ತೊಟ್ಟನೆ ಪೇಳ್ದನಿಂತೆಂದು ೭೦

ಕನಕಮಾಲೆಯು ಜಿನದತ್ತೆಯೊಳ್ ನಿನ್ನಯ । ಮನಕೆ ಬಂದವರ ಕೊಲ್ಲೆಂದು
ತನಗೆ ಅವಧಿಯುಳ್ಳ ಕಾರಣವಜಿ[9]ದು ತಾ । ಘನಪುಣ್ಯವತಿಯನು ಬಿಟ್ಟು ೭೧

ಉತ್ತಮ ಜಿನದತ್ತೆಯು ಮೇಲೆ ಪಾ[3]ಪವ[3] । ಮತ್ತೆ ನುಡಿದ ಸವತಿಯನು
ಕತ್ತಿಯಿಂದಲಿ [4]ಘೋ[4]ರವ ಸೀಳಿ ರಕ್ತವ । ಮತ್ತು ಕುಡಿದು ಪೋದುದಾಗ ೭೨

ಅಂದಿನ ರಾತ್ರೆಯೊಳ್ ಬೇತಾಳ ತಾ ಪೋಗಿ । ಬಂಧುಶ್ರೀ ಮಗಳ ಸವತಿಯ
ಕೊಂದುದೆನುತ ಆಗ ಬಂಧುಶ್ರೀ ನೋಡಲಾ । ನಂದನೆ ಅಳಿದಿರೆ ಕಂಡು ೭೩

ಪಾತಕಿ ಜಿನದತ್ತೆ ನನ್ನ ಮಗಳನೀಗ । ಘಾತಿಸಿದಳು ಎಂದ[5]ಲು[5]ತ
ಭೂತಳಪತಿಯೊಳು ಪೇಳ್ದೊಡೆ ಹತಿಸಿದ । ಪಾತಕಿ ಎಳತನ್ನಿರೆಂದ ೭೪

ವೃಷಭದಾಸನ ಮ[6]ನೆ[6] ಸೂರಾಡಿ ತಾರೆಂದು । ವಸುಧೀಶ ಚರರನಟ್ಟಿದನು
ಹಸನಾಗಿ ನಗರದೇವತೆಗಳವರ ಕೈಯ । ಮಿಸುಕಲೀ[7]ಯದೆ[7] ಸ್ತಂಭಿಸಿದರು ೭೫

ವೃಷಭದಾಸನ ಸತಿ ಜಿನದತ್ತೆ[8]ಯಿಂ[8]ಗಲು । ವಸುಧೀಶನುಪಸರ್ಗ ನನಗೆ
ಕಸಕಳಿವನ್ನ ಸಕಲ ಸನ್ಯಾಸನ । ಹಸನಾಗಿ ಇರಲೆಂದಳಾಗ ೭೬

ಆ ಸಮಯದಿ ಯಕ್ಷರೆಯ್ದಿ ಬೇತಾಳನ । ಓಸರಿಸದೆ ಹಿಡಿತಂದು
ಘಾಸಿಮಾಡಲು ವೃದ್ಧಸ್ತ್ರೀರೂಪ ತಾನಾಂತು । ಲೇಸಾಗಿ ಬಂಧುಶ್ರೀಯೆಡನೆ ೭೭

ಹೇಳು ನೀ ಮಾಡಿದ ಅಪ[9]ಕೃತ್ಯ[9]ವೆಲ್ಲವ । ಹೇಳದಿದ್ದೊಡೆ ನಿನ್ನೊಡಲ
ಸೀಳುವೆ ನೀ ಎನ್ನ ಬಾಧೆಯ ಬಿಡಿಸೆಂದು । ಬಾಳವ [10]ಕ್ಷೇ[10]ಯ ಬೇತಾಳ ೭೮

---

[1] ನ್ನು (ಕ) [2] ವೆ (ಕ) [3] ಪ (ಗ) [4] ಉದ (ಕ) [5] ಳು (ಕ) [6] ತಿ (ಕ) [7] ಯ (ಗ)
[8] ಯಾ (ಕ) [9] ರಾಧ (ಕ) [10] ಜಡಿ (ಕ)

ಬಂಧುಶ್ರೀ ಜಿನದತ್ತೆಯು ತಾನು ಹತ್ತಿಸಿದು । ದೊಂದು ತಂತ್ರವನೆಲ್ಲ [1]ಪೇಳಿ[1]
ಬಂಧುಶ್ರೀ ತಾನು ಮಾಡಿಸಿದಕೃತ್ಯವ । ನಂದು ಪೇಳ್ದಳು ಶೋಕಿಸುತ ೭೯

ಕಾಪಾಲಿಯನು ಭಂಗಬಡಿಸೆ ಯಕ್ಷಿಯರಾಗ । ಕೋಪದಿ ಬೇತಾಳನಿಗೆ
ಆಪತ್ತನೆಸಗಿ ಬೀಳ್ಕೊಟ್ಟು ಜಿನದತ್ತೆಯು । ಸ್ಥಾಪಿಸಿ ಸಿಂಹವಿಷ್ಟರದಿ ೮೦

ನಗರದೇವತೆಯರು ಪುಷ್ಪವೃಷ್ಟಿಯ ಮಾಡಿ । ಬಗೆಬಗೆ ವಸ್ತ್ರಾಭರಣವ
ಮಿಗೆ ಹರುಷದಿ ಕೊಟ್ಟು ಕೊಂಡಾಡಿ ಪೋದುವ । ಜಗವೆಲ್ಲ ಮೆಚ್ಚಿ ನೋಡಿದರು ೮೧

ಜಿನದತ್ತೆ ಬಸದಿಗೆ ಬಂದು ಜಿನೇಂದ್ರಗೆ । ಮನವಾರೆ ಪೂಜೆಯನೆಸ[2]ಗಿ[2]
ವಿನಯಾಗರ ಕಂತಿಕೆಯರ ಕೈಯಿಂದ । ಜಿನದೀಕ್ಷೆ ತಳೆದಳೇನೆಂಬೆ ೮೨

ತನು ಮನವನು ದಂಡಿಸಿ ಕಂತಿಕೆಯರು । ಮನವಾರೆ ತಪದೊಳಾಚರಿಸಿ
ತನು[3]ವನು[3] ಬಿಸುಟು [4]ಮಾ[4]ಹೇಂದ್ರಕಲ್ಪದಿ ಪುಟ್ಟಿ । ಘನದೇವನ[5]ದ[5] ಮತ್ತಿತ್ತ ೮೩

ಇಂತಿದ ಕಂಡು ಸಮ್ಯಕ್ತ್ವ ಪುಟ್ಟಿತುಯೆಂದು । ಕಾಂತೆ ಪೇಳಲು ಕೇಳಲೆಲ್ಲ
ಸಂತೋಷದಿಂದ ಇಚ್ಛೈಸಿಯೆನಲು ಕಿರಿಯ । ಕಾಂತೆ ತಾನಿಂತುಸುರಿದಳು ೮೪

ಮಿಥ್ಯದ ನುಡಿಗೆ ನಾ ಇಚ್ಛೈಸಿಯೆನೆ । ಮತ್ತೆ ಈ ಮಾತಿಗೆ ನಾನು
ಚಿತ್ತಶುದ್ಧಿ ಕೇಳದಾ[6]ದೆಯೆನಲು[6] ಭೂಪ । ಮತ್ತಿಂತು ನುಡಿದ ಕೋಪದೊಳು ೮೫

ಮತ್ತೆ ತಾ ಕಂಡು[7]ದ[7] ಪೇಳ್ದೊಡೆ ಈ ಪಾಪಿ । ಮಿಥ್ಯದ ನುಡಿಯೆನ್ನಬಹುದೆ
ಕತ್ತೆಯ ಮೇಲೆ [8]ಏರಿಸಿ[8] ಪೇಟೆಯೊಳ[9]ದೀ[9] । ತೊತ್ತ ಮೆರೆಸಬೇ[10]ಕುಯೆಂ[10]ದು ೮೬

ಭೂಪಾಲ ಮಂತ್ರಿ ಇಂತಾಡುತಿರಲು ಚೋರ । ಕೋಪದಿ ಕೈಯುತಲಿರ್ದ
ತಾ ಪೋಗಬಲ್ಲುದೆ ಮಕ್ಷಿಕ ಸುಗಂಧಕ್ಕೆ । ಪಾಪಿಗಳ್ ಬಲ್ಲರೆ ಗುಣವ ೮೭

---

1 ವನು (ಕ) 2 ಗೆ(ಕ) 3 ವ (ಕ) 4 ಮ (ಗ) 5 ಗಿ (ಕ) 6 ದಸತಿಯನು (ಕ)

7 ದು (ಗ) 8 ಏರಿ ಪಾಪಿಯು (ಗ) ಇ (ಕ) 9 ಗೆ (ಕ) 10 ಕೆಂ (ಕ)

# ಒಂಬತ್ತನೆಯ ಸಂಧಿ

ಕ್ಷೀರಶರಧಿಯಣು[1]ಗ[1]ನ ಅನುಜೆಯ ಸೂನು । ದೂಱಿಸಿ ಮೇರುಪರ್ವತದಿ
ಕ್ಷೀರವ ಮಿಂದ ಸುಪಾರಿಶ್ವದೇವನ । ವಾರಿಜಾಂಘ್ರಿಗೆ ವಂದಿಸುವೆನು ೧

ಕ್ಷಿತಿಧರಸುತೆಯು ಪತಿಯು ಅಂಗವ ತಾನು । ಸತಿಯು ಮಾಡಿದನ ಅಂಗವನು
ಹತಿಸಿದ ಸೂಪಾರಿಶ್ವನಾಥ[2]ನೆ[2]ನಗೆ ಸ । ದ್ಗತಿಯ ಪಾಲಿಸು ದಯದಿಂದ ೨

ಘನಪುಣ್ಯನಿಧಿ ಅರ್ಹದ್ದಾಸನ ಸತಿ [ತಾನು] । ಕನಕಲತೆಯು ಮುದದಿಂದ
ತನಗೆ ಸಮ್ಯ[3]ಕ್ತ್ವ[3] ಸಂಜನಿಸಿದ ಪರಿಯನು । ಮನವೊಲ್ದು ಪೇಳ್ದಳು ಪತಿಗೆ ೩

ಧರಣಿಗಧಿಕವಾದ ಅವಂ[4]ತೀ[4]ವಿಷಯ[5]ದಿ[5] । ಮೆಱೆವ ಉಜ್ಜಯಿನಿಯ[6] [7]ಪುರ[7]ವ
ಅರಸ ರಾಜಪ್ರಭನಾಥನ ಪಟ್ಟದ । ತರುಣಿ ಮದನಶಕ್ತಿಯಾಗೆ ೪

ಭೂನಾಥ[8]ಗೆ[8] ತಾನು ಮದನದೇವನು ಮಂತ್ರಿ । ಅನುದಿನ ಹಿತಗೂಡಿಹನು
ವನಧಿ[9]ಗಂಭೀರ[9] ಸಾಗರದತ್ತ ಪರದಗೆ । ವನಿತೆ ಸಾಗರದತ್ತೆಯವರ್ಗೆ ೫

ಉಮಯನೆಂದೆಂಬ ಕುಮಾರನು ಜನಿಸಿದ । ಸುಮ[10]ನೋ[10]ಬಾಣನ ರೂಪಯುತನು
ಹಿಮಕರನೊಡನುದಿಸಿದ ಸಿರಿಯೆನಲೊರ್ವ । ಕಮಲಾಕ್ಷಿ ಜಿನದತ್ತೆ ಜನಿಸೆ ೬

ಸರಸಿಜಮುಖಿ ಜಿನದತ್ತೆಯ ಕೌಶಂಬೀ । ಪುರದೊಳಿರುವ ಜಿನದತ್ತ
ಪರದಗೆ ಮದುವೆ ಮಾಡಿದರಿತ್ತ ಉಮಯನು । ದುರುಳ ದುರ್ಜನ [11]ಕಳ್ಳನಾದ[11] ೭

ದುರುಳರೊಳಾಡಿ ಜೂಜು ವ್ಯಸನಗ[12]ಳನು[12] । ವಿಕಾಂತವ ಕಳ್ಳರೊಡನೆ
ಪುರದೊಳು ತಾ ಕಳ್ದು ವೇಶಿಯರಿಗೆ ಇತ್ತು । ದುರುಳ ಮೋಹದೊಳು ಕೂಡಿಹನು ೮

---

[1] ಣಿ (ಗ) [2] ನೆನ (ಗ) [3] ಕ್ತ್ವವು (ಕ) [4] ತಿಯ (ಗ) [5] ದ (ಕ) [6] ನಿ (ಗ)
[7] ಪಟ್ಟಣ (ಗ) [8] ನು (ಕ) [9] ಗಾಂಭೀರ್ಯ (ಗ) [10] ನ (ಗ) [11] ನಾದಾಖಿಳನು (ಕ)
[12] ಳ (ಕ)

ಒಂದು ಗೃಹದೊಳು ಕಳ್ಳೊಂದಂಗಡಿಗೆ ಹಾಜಿ । ತಂದ ವಿತ್ತ[1]ದಿ[1] ಮಿತ್ರರೆಲ್ಲ
ಒಂದಾಗಿ ಕಡಲೆಯು ಕೊಂಡು ಪಾಳ್ಗುಡಿಯೊಳು । ತಿಂದಿರುತಿರ್ದರರ್ತಿಯೊಳು ೯

ಒಂದು ದಿವಸ ಜವಳಿ[2]ಯಂ[2]ಗಡಿಯ ಬೀಗವ । ಬಂದು ತೆಗೆದು ಕ[3]ಳ್ಳ[3]ವಾಗ
ಬಂದು ತಳಾ[4]ರ ತಾ ಕಂಡು[4] ಕೈಗಳ ಕಟ್ಟಿ । ತಂದು ತಂದೆಗೆ ಒಪ್ಪಿಸಿದ[5]ನು[5] ೧೦

ನನ್ನುದರದಿ ನೀವು ಅಣ್ಣತಂಗಿ[6]ಯುಪು[6]ಟ್ಟಿ । ಕಿನ್ನವಾಯಿತು ನನ್ನ ಬಾಳು
ಮುನ್ನ ಪುಟ್ಟಿದ ಮೂಲ ನೀನಾದೆ ಮಗನೆ ಕೇಳ್ । ಕನ್ನೆಯಾದಳು [7]ಶೋ[7]ಕೆಯಂತೆ ೧೧

ಮಗನ ಮುಖವ ನೋಡಿ ಸಾಗರದತ್ತನು । ದುಗುಡದಿ ನುಡಿದನಿಂತೆಂದು
ಮಗನೆ ನಾ ನಿನಗಾಗಿ ಜಲಯಾತ್ರೆಗಳ ಮಾಡಿ । ಮಿಗೆ ಗಳಿಸಿದೆ ಕೋಟಿ ಹೊನ್ನ ೧೨

ಉತ್ತಮಕುಲದೊಳು ಜನಿಸಿ ಈ ಪಾಪದ । ಕೃತ್ಯವ ನೆಗಳ್ವರೆ ಕಂದ
ಮತ್ತಪಕೀರ್ತಿಗೆ ಒಳಗಾಗಿ ನಿನ್ನನು । ಪೆತ್ತವರಿಗೆ ದುಃಖವಾಯ್ತು ೧೩

ಲಂಡ ತಾ ಕಳುವುದ ಈಗ ತಳಾರರು । ಕಂಡು ಬಿಡಲು ನಿರ್ಭಯದಿ
ದಿಂಡೆತನದಿ ತುಂಟರುಕೂಡಿ ಪೇಟೆಯೊಳ್ । ಭಂಡ ಕಳ[8]ವ[8] ಮಾಡುತಿರ್ದ ೧೪

ಈ ರೀತಿಯೊಳು ಕಳ್ಳರು ತಾನು ಒಡಗೂಡಿ । ಕೇರಿಕೇರಿಯೊಳೆಡೆಬಿಡದೆ
ವಾರಿಜಸಖನಸ್ತಮಿಸೆ ಪೇಟೆಯೊ[9]ಳಗೆ[9]ಲ್ಲ । ಚೋರರು ತೊಳಲುತಲಿಹರು ೧೫

ದಳಪತಿ ಮಂತ್ರಿ ಮನ್ನೆಯರ ಸಾಮಂತರ । ನಿಳಯಕ್ಕೆ ಕನ್ನವ ಸವೆದು
ಪೊಳೆವ ವಿಭೂಷಣ ವಸನಾರ್ಥದೊ[10]ಳ[10]ಗೊಂದ । ಉಳಿಯದೆ [11]ಒಯ್ಯು[11]ತಲಿಹರು ೧೬

ಅರಸಿನ ಕೋ[12]ಶ[12]ಗೃಹಕೆ ಕನ್ನವನಿಕ್ಕಿ । ಹಿರಿದುವಸ್ತುವ ತೆಗೆವಾಗ
ಹಿರಿಯತಳಾರ ತಾ ಕಂಡು ಕೈಗಳ ಕಟ್ಟಿ । ಧರಣೀಶಗೊಪ್ಪಿಸಿ ಬಳಿಕ ೧೭

ಸಾಗರದತ್ತನ ಕರೆಸಿ ನಿನ್ನಯ ಸುತ । ಈಗ ತುಂಟರನೊಡಗೂಡಿ
ರಾಗದಿ ಕಳವ ಕಲಿತು ಕೆಟ್ಟುಪೋದನು । ಬೇಗ ಬುದ್ಧಿಯ ಕಲಿಸಂದ ೧೮

---

[1] ವ (ಕ) [2] ಯುಅ (ಕ) [3] ಳ್ದ (ಗ) [4] ರರು ಬಂದು (ಕ) [5] ರು (ಕ) [6] ಯಜಪು (ಕ)

[7] ಸಾ (ಕ) [8] ವ (ಕ) [9] ಳೆ (ಗ) [10] ಳು (ಕ) [11] ಲಿವು (ಕ) [12] ಶ (ಕ)

ಮಕ್ಕಳ ಓದಿಸಿ ಚಿಕ್ಕಂದು ಪರ[1]ದ[1]ರು । ಗಕ್ಕನೆ ಕುಲವಿದ್ಯಗಳನು
ಕಲಿಸದೆ ಮುದ್ದಿಸಿ ಪ್ರೀತಿಯೊಳಿರೆ ಮುಂದೆ । ಸೊಕ್ಕಿ ಈ ತೆಱದಿ ಕೆಡುವರು ೧೯

ಈ ತೆಱದಿಂದ ಭೂಪಾಲನು ಪರ[2]ದ[2]ಗೆ । ಪ್ರೀತಿಯಿಂದಲಿ ಪೇಳಿ ಸುತಗೆ
ಜಾತಿವಿದ್ಯವ ಕಲಿಸೆಂದು ನುಡಿದು ಮತ್ತೆ । ಧಾತ್ರೀಶ ಕೈಗಿತ್ತ ಸುತನ ೨೦

ಅರಮನೆಯಿಂದಲಿ ಸುತನ ತಾ ಕರೆತಂದು । ದುರುಳಗೆ ಪೇಳ್ದ ಬುದ್ಧಿಯನು
ಮರನ ಮಡಿ[3]ಲ [3]ಹತ್ತಿ ದುರ್ಜನರೊಳಗಾಡಿ । ಹರಣಹೋಗುವ ತೆಱನಾಯ್ತು ೨೧

ದಿಕ್ಕುದಿಕ್ಕುಗಳಿಂದ ಬಂದು ರಾತ್ರಿಯೊಳಿಲ್ಲ । [4]ಪ[4]ಕ್ಕಿ ಕೂಡಿರ್ದರ್ಕನುದಿಸೆ
ದಿಕ್ಕುದಿಕ್ಕಿಗೆ ಪೋಗುವಂತೆ ಪೋದರು ಎಲ್ಲ । ಸಿಕ್ಕದೆ ನೀಸಘವಶದಿ ೨೨

ಚೋರರ ಕೈಕಾಲ ಕಣ್ಗಳ ಛೇದಿಸೆ । ಧಾರಿಣೀಜನವೆಲ್ಲ ಕಂಡು
ಚೋರತನದಿ ನಮಗಿಂತಾಗುವದೆಂದು । ಆರಯ್ಯದೆ ಕಳುಹಿದರೆ ೨೩

ಶ್ವಾನನ ಬಾಲದ ಡೊ[5]ಕ[5] ತಿದ್ದುವರುಂಟೆ । ಹೀನಕಳ್ಳರಿಗೆ ಬುದ್ಧಿಯನು
ನಾನಾ ತೆಱದಿ ಪೇಳಿ ಕೇಳದೆ ಕೆಡುವರು । ಮಾನವಿಲ್ಲ[6]ದ[6] ಮದಮುಖರು ೨೪

ಇನ್ನು ಇವನು ಕಳವನು ಮಾಡದಿರಸೆಂದು । ತ[ನ್ನ] ಮನದೊಳೆಣಿಸಿದನು
ಮುನ್ನ ಬಿಟ್ಟುದೆ ಸಾಲದೆ ಇನ್ನು ಕಳ್ದೊಡೆ । ಛಿನ್ನ ಮಾಳ್ಪರು ಕಾಲು ಕೈಯ ೨೫

ಮುನ್ನ ನಾಲ್ಕೈದಾಱು ವೇಳೆ ಕಳ್ದೊಡೆ ತಾನು । ಮನ್ನಿಸಿದನು ನನ್ನ ನೋಡಿ
ನನ್ನ ಮನೆಯ ಹೊನ್ನ ವೆ[7]ಚ್ಚ[7]ಮಾಡೆಂದು ನಾ । ನನ್ನಿಯಿಂದಲಿ ಪೇಳಿ[8]ದ[8]ನು ೨೬

ಇ[9]ಂತು[9] ನಾನಾ ಬುದ್ಧಿ ಪೇಳ್ದೊಡೆ ಕುವರನು । ಪಿಂತಣ ಅಘವಶದಿಂದ
ಭ್ರಾಂತ ಚೋರತ್ವವ ಬಿಡದಿರೆ ಗೃಹದಿಂದ । ತ.೦ ತಳುವದೆ ಪೊಱಮಡಿಸಿ ೨೭

ತಂಗಿಯ ಮನೆಗೆ ತಾ ಪೋಗಿ ಉಮಯ[10]ನು[10] । ಭಂಗದಿ ನಿಲೆ ಅಂಗಣದಿ
ಹಿಂಗದೆ ಜಿನದತ್ತ ಅಣ್ಣನ ತಾ ಕಂಡು । ಕಂಗ[11]ಳೊಳ್ ಜ[11]ಲವ ತಾ ತಂದು ೨೮

---

[1] ದು (ಗ) [2] ದ (ಗ) [3] ಲು (ಕಚ) [4] ಪಿ (ಕ) [5] ಕು (ಗ) [6] ದೆ (ಕ) [7] ಚ್ಚವ (ಗ)
[8] ದ (ಗ) [9] ನ್ತು (ಕ) [10] ನಾ (ಗ) [11] ಳಲ್ಜ (ಕ)

ಪಾಪಿ ನಮ್ಮಾಯ ಜನನಿಯು ಬಸುರೊಳು ಬಂದು । ಪಾಪಕೃತ್ಯಕೆ ಒಳಗಾಗಿ
ಆಪತ್ತು ನಿನಗಡಸಿತು ಕರ್ಮವಶದಿಂದ । ಲೋಪವಾಯಿತು ನಿನ್ನ ಪುಣ್ಯ ೨೯

ಇಂತು ನಾನಾವಿಧ ನೀತಿಗಳನು ಪೇ[1]ಳಿ[1] । ಸಂತೋಷದಿಂ[2]ದ ಅ[2]ಗ್ರಜಗೆ
ಶಾಂತಹೃದಯನಾಗುವಂತೆ ನುಡಿದು ಗುಣ । ವಂತೆ ಸತ್ಕರಿಸಿದಳಾಗ ೩೦

ಸ್ನಾನ ಭೋಜನಗಳ ಮಾಡಿಸಿ ಅಣ್ಣಗೆ । ತಾನಿತ್ತು ವಸ್ತ್ರಾಭರಣವ
ಸಾನುರಾಗದಿ ಬುದ್ಧಿ ಪೇಳುತ್ತಲಿರ್ದಳು । ಮಾನಿನಿಯರ ಶಿರೋರನ್ನೆ ೩೧

ಈ ಪರಿಯೊಳು [3]ಕವ[3]ಶಂಬಿಯೊಳಿರುತಿರ್ದು । ರೂಪುಸಂಪನ್ನ ಭಕ್ತಿಯೊಳು
ಪಾಪವರ್ಜಿತ ಜಿನದೇವನ ಬಸದಿಗೆ । ತಾ ಪೋಗಿ ಅಭವಗೊಂದಿ[4]ಸಿ[4]ದ ೩೨

ಅಲ್ಲಿದ್ದ ಸಾಗರದತ್ತ ಮುನೀಶಗೆ । ಉಲ್ಲಾಸದಿಂ[5]ದ[5] [ಉ]ಮಯನು
ಎಲ್ಲ ಕರ್ಮವ ಪೋಗಲೆಂದು ತಾ ಮುನಿಪ[6]ನ[6] । ಮೆಲ್ಲಡಿಗಳಿಗೆಱಗಿದನು ೩೩

ಮದನವಿಜಯ ಕೇಳೆನಲೊಂದು ವ್ರತವನು । ಮುದದಿಂದ ಪಾಲಿಸೆಂದೆನಲು
ಹೃದಯಶುದ್ಧದಿ ಮುನಿಪತಿಗಳು ಇತ್ತರು । ಸದಮಲ ಸುಖವೀವ ವ್ರತವ ೩೪

ಮರದ ಹೆಸರನಱಿಯದ ಹಣ್ಣುಗಳ ನೀನು । [7]ಹರಣಹೋದರ[7] ಮೆಲ್ಲಬೇಡ
ಪರಮಸುಖವು ನಿನಗಹು[8]ದೆಂದು[8] ವ್ರತವೈದ । ಹರುಷದಿಂದಿತ್ತರೀ ವ್ರತವ ೩೫

ನಿತ್ಯಶೀಲೋಪವಾ[9]ಸಂಗಳ[9] ಮಾಡುತ । ಉತ್ತಮರೊಳು ಸ್ನೇಹದಿಂದ
ಮತ್ತೆ ಸಮ್ಯಕ್ತ್ವ ಸಂಜನಿಸಿತು ನನಗೆಂದು । ಚಿತ್ತಜರೂಪ ಉಮಯಗೆ ೩೬

ಆ ಪುರದೊಳಗಣ ಪರದರೆಲ್ಲರು ತಾವು । ವ್ಯಾಪಾರಗಳ ಮಾಡಲೆಂದು
ರೂಪುಸಂಪನ್ನರು ಪೊಱಮಡುವುದ ಕಂಡು । ಚಾಪಲಾಕ್ಷಿಯು ಜಿನದತ್ತೆ ೩೭

ಅನುಜೆ ಅಗ್ರಜಗೆ ಸಾವಿರಪೊನ್ನ ತಾನಿತ್ತು । ವಿನಯದಿ ಪರದರೊಳ್ ಪೇಳ್ದ
ಘನತರಬುದ್ಧಿಯ ಕಲಿಸಿ ನೀವೆನುತಲಿ । ಜಿನದತ್ತೆ ನುಡಿದಳೆಲ್ಲರಿಗೆ ೩೮

---

[1] ಳೆ (ಕ)  [2] ದಾ (ಗ)  [3] ಕೌ (ಕ)  [4] ಸು (ಗ)  [5] ದ (ಕ)  [6] ಗೆ (ಕ)
[7] ಹೆಸರರಿಯದದೆ (ಕ)  [8] ದೇಂ (ಕ)  [9] ಸಗಳನು (ಕ)

ಪರವರೆಲ್ಲರು ತಾವು ಕೌಶಾಂಬೀಪುರದಿಂದ । ಪೊಱಮಟ್ಟು ಪಥವಿಡಿದಾಗ
ಹರುಷದಿ ಉಜ್ಜೈನಿಪುರಕೆ[1]ಯ್ದು[1] ವೇಳೆಯೊಳ್ । ತರಣಿ ಅಸ್ತಮಿಸಿದನಾಗ ೩೯

ರವಿ ಗತವಾಗಲು ಗಗನದಿ ಭಗಣಗಳ್ । ಪವಣಿಲ್ಲದೆ ಎದ್ದವಾಗ
ಕುವಲಯ ವಿಕಸಿತವಾದವಂಬುಜಗಳು । [ಶ]ವೆ ಮೊಗಮುಚ್ಚಿದವಂದು ೪೦

ಗತವಾಗೆ ರವಿ ಅಂಧಕಾರದಿ ಪರವರು । ಪಥತಪ್ಪಿದರು ಅಡವಿಯೊಳು
ಮತಿಗೆಟ್ಟು ಕಾನನದೊಳಗೆಲ್ಲ ತೊಳಲುತ್ತ । ಅತಿಭೀತಿಯಿಂ[2]ದ[2]ಳಲಿದರು ೪೧

ವಿಂಧ್ಯಕಾರುತಿಹ ಗೃಹಗಳು ಇರ್ದವು । ಬಂದೆವು ಬೀಡುಬಿಟ್ಟಂತೆ
ಬಂಧುಗೆವಾಟಿಯ ಬೇಡಿತಿಯರಿರ್ದರು ನೀಲ । ದಿಂದ ಮಾಡಿದ ಬೊಂಬೆಯಂತೆ ೪೨

ಅಂದು ಕಾನನದೊಳು ಬೇಟೆಯನಾಡುವ । ಸಂದಣಿ ಒಪ್ಪಿರ್ದುದಾಗ
ತಂದು ಬಲೆಯ ಬೀಸಿ ಬಡಿಗೋಲಿಂ[3]ದಲಿ[3] ಮೃಗ । ವೃಂದವ ಕೊಲ್ಲುತಲಿಹರು ೪೩

ಬಗೆಬಗೆ ಮೃಗಗಳ ಕೊಲ್ಲುತಿಹರು *ಹಗೆ । ಮೃಗಗಳ ಸಾಕಿ ಪುತ್ರವರು
ನೆಗೆದು ಹಿಡಿದುಹಾಕಲು ತಂದು ಮುಂಗಡೆ । ನಗುತ ಒಯ್ವರು ಬೇಡಿಗವರು* ೪೪

ಅಂಬರವೆ ನೆಲಕಿಳಿದುದೋ ಮೇ[4]ಸಂಬೋ[4]ಲು । ತುಂಬಿತು ತಮ ದೆಸೆದೆಸೆಗೆ
ಅಂಬುಜಸಖನುದಯವ ಕಾಣದೆಲ್ಲರು । ಹಂಬಲಿಸುತಲಿರ್ದರಾಗ ೪೫

ಇಂದ್ರನ ದೆಶೆಯೊಳರುಣಚ್ಛಾಯವೇಱಿತು । ಅಂಧಕಾರವು ಕೆಟ್ಟು ಪೋಗೆ
ಕುಂದಿದವಾಗ ತಾವರೆಗಳು ಕುಕ್ಕುಟ । [5]ಧ್ವನಿದೋಱಿದವು ಉದಯದೊಳು[5] ೪೬

ಶರಭ ಶಾರ್ದೂಲ ಭೇರುಂಡ ಹಂಸನಹಿಂಡು । ಇರುತಿರೆ ಕಾನನದೊಳಗೆ
ನರಮನುಜರು ಪೋಗಬಾರದಡವಿಯೊಳು । ಪರವರು ತೊಳಲುತಲಿಹರು ೪೭

ಕರಡಿ ಕಾಳೋರಗ ಕಾಡುಕೋ[6]ಣಂಗಳು[6] । ಗುಱುಗುಟ್ಟುತಿಹ ಹಂದಿ ಶ್ವಾನ
ನರಿ ತೋಳ ಬೆಕ್ಕು ಮಂಗು[7]ಲಿಗಳಿಂ[7]ದಲಿ ಭೀ । ಕರವಾದ ಪೇಱಡವಿಯೊಳು ೪೮

---

[1] ಯ್ದಿ (ಕ) [2] ದಳ (ಕ) [3] ದೆಲ್ಲ (ಕ) [4] ನೆಚೆ (ಗ) [5] ಶುಕಪಿಕನಿಕರವು ಧ್ವನಿದೋಱೆ ಸಂತಸದಿಂ (ಗ) [6] ಣಗಳಾದಿ (ಕ) [7] ಳಿಂ (ಕ) * ಈ ಭಾಗ (ಕ) ಪತಿಯಲ್ಲಿಲ್ಲ

ಆ ರಾತ್ರಿಯೊಳು ಪರದರು ಪಥಗಾಣದೆ । ಓರಂತೆ ತೊಳಲುತ್ತಲಿಹರು
ತೋಱಿತು ಉದಯಾದ್ರಿಯೊಳು ರವಿಬಿಂಬವು । ಹಾಱಿತಾಗಲು ತಮನಿಕರ ೪೯

ಪರಪುಟ್ಟ [1]ಸ್ವರದೋಱಿ[3] ಮೊಱೆದವು ಅಳಿಗಳು । ಸರಸಿಜ ವಿಕಸಿತವಾಗೆ
ಕೊಱಗಿದವಾಗ ಕೈರವಗಳು ತಮದೊತ್ತು । ಹಱಿದು ಬೆಳಗುದೋಱಿದುದು ೫೦

ಆರಣ್ಯಮಧ್ಯದಿ ಕಿಱುಬಟ್ಟೆವಿಡಿದೆಲ್ಲ । ಓರಂತೆ ಬರುತಿರುವಾಗ
ತೋಱುತಿಹುದು ಒಂದು ಭೂರುಹ ಪಕ್ವದ । ಸಾರಮಧುರಫಲದಿಂದ ೫೧

ಈ ರೀತಿ ಬರುತಿಹ ಉಮಯನ ಮುಂಗಡೆ । ಸೇರಿಬಂದಳು ವೃದ್ಧಶಬರಿ
ಸಾರಪಕ್ವದ ಪಣ್ಗಳ ಮೆದ್ದು ಜವ್ವನ । ವೇಱಲಾ ಬಿಸವಂದ ಕಂಡು ೫೨

ಇಂತು ಜವ್ವನವಾಂತ ಸುದತಿಯ ತಾ ಕಂಡು । ಸಂತೋಷದಿಂ ಕೇಳ್ದನುಮಯ
ಚಿಂತಣ ವೃದ್ಧಾಪ್ಯ ಎಂತುಂಟಾಯಿತು ಎನೆ । ಕಾಂತೆ ಇಂತೆಂದುಸುರಿದಳು ೫೩

ಈ ಮರದೊಳಗಣ ಪಣ್ಗಳನೆಲ್ಲವ । ಪ್ರೇಮದಿ ಮೆಲ್ಲಲಾಕ್ಷಣವೆ
ಧಾಮುವೃದ್ಧಾಪ್ಯವು ಪೋಗಿ ಜವ್ವನವಾಂತೆ । ಕಾಮಸನ್ನಿಭ ಕೇಳೆನಲು ೫೪

ಆ ಪಣ್ಗಳಪ್ಪ ವೃಕ್ಷದ ಪೆಸರೇನೆಂದು । ಚಾಪಲಾಕ್ಷಿಯು ಕೇಳಲೊಡನೆ
ರೂಪುಸಂಪನ್ನ ಕೇಳ್ ಮರದ ಹೆ ರ. ಈಗ । ಈ ಪೃಥ್ವಿಯೊಳು ಪೇಳ್ವರಿಲ್ಲ ೫೫

ಹಣ್ಣುಗಳಿವು [2]ಅಮೃತವಾಗಿ ಮೆದ್ದಡೆ[2] । ತಣ್ಣಗಾ[3]ಯಿತು ಉದರಾಗ್ನಿ
ಕಣ್ಣಾರೆ ಕಂಡು ಸೇವಿಸೆ ನನ್ನ ಅಂಗವು[4] । ಬನ್ನವಾ[5]ಯಿತು[5] ಜರೆ ತೊಲಗಿ ೫೬

ಉಸಿರಲಳವೆ ಆ ಪಣ್ಗಳ ಗುಣವನು । ಹಸಿದವರೆಲ್ಲರು ಮೆಲಲು
ಹಸಗೆಟ್ಟು ಮೆಯ್ಯೊಳಗಿರ್ದ ರೋಗವು ತಪ್ಪಿ । ಕುಸುಮಾಸ್ತ್ರನಂತೆ ರಂಜಿಪರು ೫೭

ಹಸಿದು ಕಂಗೆಟ್ಟವರೀ ಪಣ್ಣ ಸೇವಿಸೆ । ಹಸು ತೃಷೆ ಕೆಟ್ಟುಹೋಗುವುದು
ಜಸವೇಱುವುದು ಕಾಂತಿ ಬಲ ನಿನಗಹುದೆಂ । ದುಸುರಿದ[6]ಳುಮಯಗಾ[6] ಶಬರಿ ೫೮

---

[1] ಗಳೊಪ್ಪದೋಱಿ (ಕ)  [2] ಮೆದ್ದಡೆಅಮೃತವಾಗೆ (ಕಚ)  [3] ಯ್ತುಜಠ (ಕ)
[4] ಸಿಯೆನ್ನಂಗವು (ಕ)  [5] ಯ್ತ್ತೇ (ಕ)  [6] ಳಾಮಾಯಾ (ಕ)

ಪೆಸರಿಸುವ ಪಣ್ಣ ಮೆ[1]ಲ[1]ಬಾರದೆಂದಾಗ । *ಶಶಿಮುಖಿಯೊಳು ಪೇಳ್ದನುಮಯ
ಹಸಿದು ಪಣ್ಗಳನೆಲ್ಲ ಪರದರು ಸೇವಿಸೆ । ವಿಷವೇರಿ ಧರೆಗುರುಳಿದರು ೫೯

ಏನುಕಾರಣ ಪಣ್ಗಳ ತಿಂದವರೆ[2]ಲ್ಲ[2] । ಆನದೆ ಸತ್ತ[3]ರೇಕೆನಲು[3]
ಮಾನಿನಿಯುನು ಕೇಳೆ ತಾನಾಗ ಪೇಳ್ದಳು । ಭೂಸುತ ಉಮಯನೊಳಿಂತು ೬೦

ನಾ ವನದೇವತೆ ನಿನ್ನಯ ವ್ರತದೊಂದು । ಭಾವದೃಢವ ನೋಡಲೆಂದು
ಈ ವಿಷಪೂರಿತ ಫಲದ ಭೂರುಹವನು । ಓವದೆಸಗಿದೆ ಇಂತಿದನು ೬೧

ನಿನ್ನಯ[4] ದೃಢ[5]ಕೆ ನಾ[5] ಮೆಚ್ಚಿದೆ ಲೋಕದಿ । ನಿನ್ನಂಥ ಪುರುಷರಾರೆಂದು
ಕನ್ನೆಯ ರೂಪವಳಿದು ವನದೇವತೆ । ತನ್ನಯ ರೂ[6]ಪ[6] ತೋರಿದಳು ೬೨

ವಿಷವೇರಿ ಧರಣಿಯೊಳೊರಗಿರ್ದ ಪರದರ । ವಿಷವ ನಿರ್ವಿಷಮಾಡಿಯವರ
ಹಸನಾಗಿ ಎಬ್ಬಿಸೆ[7]ಯೆಲ್ಲರು[7] ದೇವಿಗೆ । ಒಸೆದೆರಗಿದರು ಭಕ್ತಿಯಿಂದ ೬೩

ಹರುಷದಿ ವನ[8]ದೇವಿ ಎಲ್ಲರ[8] ಕೌಶಂಭೀ । ಪುರದ ಉದ್ಯಾನಕ್ಕೆ [9]ತ[9]ಂದು
[10]ವಿರಚಿ[10]ಸಿ ಸಿಂಹವಿಷ್ಟರದೊಳು ಉಮಯನ । ಇರಿಸಿ ಕೊಂಡಾಡಿ ಮತ್ತವನ ೬೪

ವ[11]ಸ್ತ್ರಾಭರಣದಿಂದ ಅ[11]ಲಂಕಾರವ ಮಾಡಿಸ । ಮಸ್ತರು ನೋಡುವಂದದೊಳು
ಮಸ್ತಕದೊಳು ಪೂಮಳೆಯ ಕರೆದು ದೇವಿ ಪ್ರ । ಶಸ್ತದಿ ಪೊಗಳ್ದಳುಮಯನ ೬೫

ಈ ಪರಿ [12]ವನದೇವಿ[12] ಎಸಗೆ ಸರ್ವರು ನೋ[13]ಡೆ[13] । ತಾ ಪೋದಳದೃಶ್ಯವಾಗಿ
ಭೂಪಸಹಿತ ಸರ್ವಜನರಿಗೆ ಸಮ್ಯಕ್ತ್ವ । ವ್ಯಾಪಿಸಿದುದು ಮನದೊಳಗೆ ೬೬

ಸಾಗರದತ್ತ[14]ನು ಉ[14]ಮಯ ಭಕ್ತಿಯೊಳೆಲ್ಲ । ರಾಗದಿ ಬಸದಿಗೆ ಬಂದು
ಬೇಗಲು ಶ್ರುತಸಾಗರಮುನಿಪತಿಗೆಲ್ಲರು । ಬಾಗಿದರ್ ತಮ್ಮಯ ಶಿರವ ೬೭

ರಾಜಪ್ರಭ ತನ್ನ ಸುತಗೆ ಪಟ್ಟವ ಕಟ್ಟಿ । ರಾಜ್ಯವನಿತ್ತು ಕೈಮುಗಿದು
ರಾಜರಿಬ್ಬ[15]ರಿ[15]ರವೆರಸಿ ದೀಕ್ಷೆಯನಾಂತು । ರಾಜ್ಯವೆಲ್ಲವು [16]ಕಾಣುವಂತೆ[16] ೬೮

---

1 ಲ್ಲ (ಕ) 2 ಲ್ಲರು (ಕ) 3 ರೆಖೇದವು (ಕ) 4 ನ್ನ (ಕ) 5 ಕೆ (ಕ) 6 ಪು (ಗ)
7 ಯುವರಾಯಬ್ಬಿಸಿ (ಕ) 8 ವನದಿವೆಲ್ಲರು (ಕ) 9 ಯ್ತ (ಕ) 10 ಅರ್ಜಿ (ಕ)
11 ಸ್ತ್ರಭೂಷಣದಿಂದಲ (ಕ) 12 ಯಲಿ (ಕ) 13 ಡಿ (ಕ) 14 ನು (ಕ) 15 ರಿಸಿ (ಕ)
16 ತಾನೋತವೆ (ಕ) * ಈಭಾಗ (ಕ) ಪ್ರತಿಯಲ್ಲಿಲ್ಲ

ನೃಪತಿ ಸಾಗರದತ್ತ ಉಮೆಯನು ಸಹವಾಗಿ । ಆ ಪುರ[1]ದೊ[1]ಳು ಭವ್ಯಜನರು
ಏಪೇಳ್ವೆ ಇಚ್ಛಾ[1]ರರಸುಮಕ್ಕಳು ಸಹ । ತಾ ಪೋದರಂದು ಭಕ್ತಿಯೊಳು ೬೯

ಆಗಲು ಶ್ರುತಸಾಗರ ಮುನಿನಾಥನು । ಬೇಗ[2]ದಿ[2]ತ್ತನು ದೀಕ್ಷೆಗಳನು
ರಾಗದಿ ಕೈಕೊಂಡು [3]ತಪದೊಳು ನೆಗಳುತ್ತ[3] । ನೀಗುತಿರ್ದನು ಕರ್ಮಗಳನು ೭೦

ಇಂತಿವರೆಲ್ಲರು [4]ತಪದೊಳು ನೆಗಳಿ ತಾ । ವಂತ್ಯ[4]ದೊಳು ತನುವನು ಬಿಟ್ಟು[5]
ಸಂತೋಷ[6]ದಿಂದಲ್ಲಿ ಕ್ರಮದೊಳು[6] ಮುಕ್ತಿಯ । ಕಾಂತೆಗೊಲ್ಲಭರಾದರಿತ್ತ ೭೧

ಈ ಪರಿಯನು ಕಂಡು ನನಗೆ ಸಮ್ಯಕ್ತ್ವವು । ತಾ ಪುಟ್ಟಿತೆಂದು ಕಾಂ[7]ತನೊ[7]ಳು
ರೂಪುಸಂಪನ್ನೆ ಕನಕಲತೆ ಪೇ[8]ಳಲು[8] । [9]ಓಪ ಹರುಷವ ತಾಳಿದನು[9] ೭೨

*ಇಂತೀ ಕಥೆಯ ಕೇಳ್ದಲ್ಲ ಕಾಂತೆಯರಾಗ । ಸಂತೋಷದಿಂದಿಚ್ಛಾವಿಯೆನಲು
ಪಿಂತೆ ಪೇಳ್ದುದುಯೆಲ್ಲ ಮಿಥ್ಯತ್ವಯೆಂದಾಗ । ಕಾಂತೆ ಪೇಳ್ದಳು ಕುಂದಲತೆಯು ೭೩

ಕಂಡುದ ಕನಕಲತೆಯು ಪೇಳೆ ಈಗಲು । ಭಂಡೆ ತಾ ಪುಸಿಯೆನ್ನಬಹುದೆ
ಚಂಡಾಂಶು ಉದಿಸೆ ತೊತ್ತಿನ ನಾಲಗೆಯನು । ತುಂಡಿಸಬೇಕೆಂದ ನೃಪತಿ ೭೪

ಆಗಲು ನೃಪ ಮಂತ್ರಿಯಿಂತಾಡುತಿರೆ ಚೋರ । ಮೇಗಡೆ ಮರದೊಳಿಂತೆಂ[10]ದ[10]
ಕೋಗಿಲೆ ಸ್ವರವನು ಕಾಗೆ ಬಲ್ಲುದೆ ರವಿಯು । ಗೂಗೆ ನಿಂದಿಸೆ ಕುಂದು ಬಹುದೆ ೭೫

ಪರದಶಿರೋಮಣಿ ಪಾವನಚರಿತನು । ಸರಸಿಜಸಖ ತೇಜಯುತನು
ಪರಮುನ ಪಾದಸರೋರುಹಭೃಂಗನು । ಅರುಹದ್ದಾಸನೊಪ್ಪಿದನು ೭೬

---

[1] ದ (ಕ) [2] ಇ (ಗ) [3] ವನದೊಳ ನೆಗಳುತ್ತು ತಪದೊಳು (ಕ) [4] ನೆಗಳುತ್ತತಪದೊಳತ್ತ ಮರ್ತ್ಯ (ಕ) [5] ಸುಟು (ಗ) [6] ದೇಪಿತ್ರವಾದೊಳು (ಕ) [7] ತ (ಕ) [8] ಳಿದ್ದಡೆ (ಗ) [9] ಕಾಂತೆಯರಿಚ್ಛಾವಿಯೆನಲು (ಕ) [10] ದ (ಗ) * ಈ ಪದ್ಯ (ಕ) ಪ್ರತಿಯಲ್ಲಿ ಲುಪ್ತ

# ಹತ್ತನೆಯ ಸಂಧಿ

ಇಂದುಶೇಖರನ ಸತಿಯು ತಂದೆ ಕಡಿದ[1]ನ । ಕಂದನ ಭಾವನಾತ್ಮಜನ[1]
ಮುಂದುಗೆಡಿಸಿ ಮುಕ್ತಿಯಾಳ್ದನ ಪಾದಾರ । ವಿಂದಗಳಿಗೆ ವಂದಿಸುವೆನು ೧

ಕಡುಜಾಣರದೇವನರ್ಹದ್ದಾಸನು । ಮಡದಿ ಪದ್ಮಶ್ರೀಯು ಕೇಳ್ದ
ಉಡುಪ[2]ತಿವದನೆ[2] ನಿನಗೆ ಸಮ್ಯಕ್ತ್ವವ । ಬಿಡದುದಿಸಿದ[ನು] ಪೇಳೆನಲು ೨

ಸರಸಿಜಮುಖಿ ಪದ್ಮಶ್ರೀ ವಲ್ಲಭನೊಳು । ಕರಗಳ ಮುಗಿದು [3]ಹರುಷದೊಳು[3]
ಒರೆದಳು ತನಗೆ ಸಮ್ಯಕ್ತ್ವ ಸಂಜನಿಸಿದ । ಪರಿಯನಿಂತೆಂದು ಪೇಳಿದಳು ೩

ಭೂಸುದತಿಯ ಮುದ್ದುಮುಖದಂತೆ ಒಪ್ಪುವ । ಭಾಸುರ ಕೌಶಂಭೀಪುರ[4]ವ[4]
ಲೇಸಾಗಿ ಪಾಲಿಪ ಅಜಿತಂಜಯನಿಗೆ । ಕಾಮಿನಿ ಸುಪ್ರಭೆಯಾಗೆ ೪

ಮತ್ತಾ ಭೂಪನ ಮಂತ್ರಿ ಸೋಮಶರ್ಮನು ತಾನು । [5]ನಿತ್ಯದಾನವ ಮಾಡುತಿರಲು
ಉತ್ತಮಮುನಿಪನು ಮಾಸೋಪವಾಸವ । ಮಾಡಿ ಭಿಕ್ಷೆಗೆ ಬರುತಿರಲು ೫

ತಪದ ಕಾರಣವಾಗಿ ತನುವಿರಬೇಕೆಂದು । ವಪುವಲಘುವನಾಂತು ಬಳಿಕ
ಚಪಲಗತಿಯ ಬಿಟ್ಟು ಮೆಲ್ಲನೆ ಪ್ರಾಣಿಗಳ್ । ವ[6]ಪ್ಪು[6] ಕೆಡದಂತೆಯ್ದಿದ[7]ನು[7] ೬

ಸೋಮಶರ್ಮನು ತಾನು ಕಂಡನು ನಿಧಿಯನು । ಪ್ರೇಮದಿ ಬಡವ ಕಂಡಂತೆ
ಧಾವ ಭಕ್ತಿಯೊಳಿದಿರೆಯ್ದಿ ನಿಲಿಸಿ ತಾನು । ಪ್ರೇಮದೊಳೆಯ್ದಿಸಿ ಮನೆಗೆ ೭

ಸ್ಥಾಪನುಚ್ಚಸ್ಥಾನ ಪಾದೋದಕ ಪೂಜೆ । ವಿಪೇಳ್ದ ವಂದನೆವೆರಸು
ಲೋಪವಿ[8]ಲ್ಲದೆ[8] ತ್ರಿಕರಣ ಏಷಣಶುದ್ಧಿ । ಈ ಪರಿ ನಡಸಿ ತಾ ಮತ್ತೆ ೮

---

[1] ನ (ಕ) [2] ತಿ (ಕ) [3] ಪೇಳಿದಳು (ಕ) [4] ದ (ಕ) [5] ಮಿ (ಗ) [6] ಪು (ಕ) [7] ರು (ಗ)

[8] ಲ್ಲ (ಚ)

ಶ್ರದ್ಧೆ ಶಕ್ತಿ ಯುಕ್ತಿ ಕ್ಷಮೆ ದಯೆ ಲುಬ್ಧತೆ । ನಿರ್ಧರ ಭಕ್ತಿ ಸ[1ಮೆತಾ]1
ಉ2ದ್ಧತ್ರ2 ನವವಿಧ ಪುಣ್ಯಗುಣಗಳೆೀಳ । ಪದ್ಧತಿಯನು ನಡಸಿದನು ೯

ಸು3ಕ್ಷೇತ್ರದ3 ಬೀಜ ಬಿತ್ತಿ4ದಂದದಿ ತಾ4ನು । ಮೋಕ್ಷಗಾಮಿನಿಯು ಹಸ್ತದೊಳು
ಭಕ್ಷ್ಯಸಹಿತ ದಿವ್ಯಾನ್ನವ ನೀಡೆ ಸಿದ್ಧಿ । ಅಕ್ಷಯ ಫಲಮಸ್ತುಯೆನಲು ೧೦

ಆ ವೇಳೆಯೊಳು ಅಂಬರನೊಳು ಸುರರೆಲ್ಲ । ಓವದೆ ಪಂ5ಚಾಶ್ಚ5ರ್ಯವನು
ಭಾವಶುದ್ಧದಿ ಮಾಡೆ ಸೋಮಶರ್ಮನು ಕಂಡು । ಭಾವದಿ ಭಜಿಸಿದನಿಂತು ೧೧

ಕಂದರ್ಪವಿಜಯನೆ ಕೇಳು 6ಹಿಂಬಕೆ ನಾ6 ಸಾ । ನಂದದಿ 7ದಶಧ7ರ್ಮಗಳನು
ಚಂದದಿ ಮಾಡಿ ಸುರಪ ಪಂಚಾಚಾರ್ಯ । ರಂದದಿ ಮಾಡಿದಿಲ್ಲೆನಲು ೧೨

8ಕೇ8ಳೆಂದು ಪಿಹಿತಾಶ್ರವ ಮುನಿ ಪೇಳ್ದನು । ಏಳು ವೆಸನದೊಡಗೂಡಿ
ಬಾಳುವರಿಗೆ ದಾನವಿತ್ತರೆ ನಿಃಫಲ । ವ್ಯಾಳಗೆ ಹಾಲನಿತ್ತಂತೆ ೧೩

ಮತ್ತೆ ದಾನವು ನಾಲ್ಕು ತೆರನುಂಟು ಅದರೊಳು । ಉತ್ತಮ ಮಧ್ಯಮ ಜಘನ್ಯ
ಮತ್ತನ್ನಾಭಯ ಶಾಸ್ತ್ರ ಭೈಷಜ್ಯದಾನವ । ನಿತ್ತರೆ ಫಲವಿಂತುವಹುದು ೧೪

ಅನ್ನದಾನದಿ ಸುಖ ಅಭ9ಯದಿ9 ನಿರ್ಭಯ । ಸನ್ನುತ ಶಾಸ್ತ್ರದಿ ಜ್ಞಾನ
ಉನ್ನತ ಭೈಷಜ್ಯದಾನದಿ ವಜ್ರಾಂಗ । ಚೆನ್ನಾಗಿ ಪಡೆವರು ಮುಂದೆ ೧೫

ಜಪ ತ10ಪ10 ಸ್ವಾಧ್ಯಾಯನಂಗ11ಳಿವು11 ನಾಲ್ಕು । ವಪುವಿನಾ12ದರ12ದಿ ಅಂತದಕೆ
ವಪುವಿಗೆ ನಿರಶನ್ನವನಿತ್ತರೆ ಧ್ಯಾನ । ಚಪಲವಾಗದು ಕೇಳು ಭವ್ಯ ೧೬

ಮುನ್ನ ಸನ್ಮುನಿಗನ್ನ13ವನಿ13ತ್ತ ಫಲದಿ ಸದ್ಯ । ಉನ್ನತ ಸುಖವನು ಪಡೆದ
ಸನ್ನುತ ವಿಶ್ವಭೂಪತಿಯು ಕಥನವ ತಾವು । ಚೆನ್ನಾಗಿ 14ಪೇಳ್ದರಿಂತೆಂದು14 ೧೭

ವೇಣುತಟಾಕ ಪಟ್ಟಣವನು ಪಾಲಿಪ । 15ಕ್ಷೋ15ಣೀಶ ರಾಜಪ್ರಭಗೆ
ಏಣಲೋಚನೆ ಸುಪ್ರಭೆಯೆಂಬ ಸತಿಗೂಡಿ । ಮಾಣದೆ ಸುಖದೊ16ಳದಿ16ರ್ದ ೧೮

---

1 ಮೇತ (ಕಗ) 2 ಲುಬ್ಧತೆ (ಕ) 3 ತ್ರದೊಳು (ಕ) 4 ವರೀತ (ಕ) 5 ಚಾ (ಕ)
6 ನಾ (ಕ) 7 ಸದ್ಧ (ಕ) 8 ಪೇ (ಕ) 9 ಯ (ಕ) 10 ಪತ (ಗ) 11 ಳಿ (ಕ)
12 ದಾರಾ (ಚ) 13 ವಿ (ಕಚ) 14 ಕಥೆವೇಳ್ದರಿಂ (ಕಗ) 15 ಕ್ಷೇ (ಕ) 16 ಳಿ (ಕ)

ಮಿಥ್ಯಾದಾನವ ಮಾಡುತಲಿ[1]ರ್ದ[1] ಕೆಲಕಾಲ । ಉತ್ತಮ ಧರ್ಮವಱಿಯದೆ
ಪಾತ್ರ ಕುಪಾತ್ರಕ್ಕೆ ಇತ್ತ ದಾನದ ಫಲ । ವ್ಯರ್ಥವಲ್ಲವೆ ಲೋಕದೊಳಗೆ ೧೯

ಪಾಪ ಪುಣ್ಯದ ಫಲವಱಿಯದೆ ದಾನವ । ವಿಪ್ರೋತ್ತು ಮಾಡೆ ನಿಃಫಲವು
ಕಾಪುರುಷ[2]ರಿಗಿ[2]ತ್ತ ದಾನದಿ ಸದ್ಗತಿ । ಲೋಪವಾಗುವುದು ಈ ಜಗದಿ ೨೦

ಈ ಪರಿಯೊಳು ಕುಪಾತ್ರದಾನಂಗ[3]ಳ[3] । ವಿಪ್ರೋತ್ತು ಮಾಡುತಲಿರ್ದ
ಭೂಪನೊಂದಾನೊಂದು ದಿನದಲ್ಲಿ ಸ್ವರ್ಗಕ್ಕೆ । ಪೋಪ ದಾರಿಯ ಕಾಣೆನೆಂದ ೨೧

ಈ ವಚನವ ಕೇಳಿ [5]ವಿಪ್ರ[5]ಸಮೂಹ[6]ವ । ತಾವು ಪೇಳ್ದರು ಭೂಪಾಲನಿಗೆ[6]
ಭಾವಶುದ್ಧದಿ ಯಜ್ಞ ಮಾಡಿಸೆ ಮುಂದಕೆ । ದೇವೇಂದ್ರಪದ [7]ನಿ[7]ಮಗಹುದು ೨೨

ಎಲ್ಲ ವಿಪ್ರರು ತಾವು ಒಂದಾಗಿ ಪೇ[8]ಳಲು[8] । ಉಲ್ಲಾಸದಿಂದಲಾ ನೃಪತಿ
ಬಲ್ಲ ಶಾಸ್ತ್ರಿಗಳು ಎಲ್ಲವರ । ಶೀಘ್ರದಿ ಅಲ್ಲಿಗೆ ಕರೆಯಲಟ್ಟಿದರು ೨೩

ವೇ[9]ದಪಾಠಕರು[9] ಶಾಸ್ತ್ರಿಗಳು ಪುರೋಹಿತರು । ವಾದಿಗಳು ಪಟುಜೋಯಿಸರು
ಓದುವ ವೈದಿಕ ಪಂಡಿತ [10]ಯಾ[10]ಜ್ಞಿಗಳ್ । ವಾದಿಯೊಳ್ ಬರುತಿರಲಿತ್ತ ೨೪

ಯಾಗಶಾಲೆಯು ಜಪಶಾಲೆ ಮಜ್ಜನಶಾಲೆ । ರಾಗವ ಪಾಡು[ವ] ಶಾಲೆ
ತ್ಯಾಗದ ಶಾಲೆ ಭೋಜನಶಾಲೆ ಮುಂತಾ[11]ಗಿ[11] । ಆಗ ಮಾಡಿಸಿದ [12]ವಿಸ್ತಾರದಿ[12] ೨೫

ಭೂನಾಥ ಮಂತ್ರಿಯು ಕರೆಸಿ ಬಂದವರೆಲ್ಲ । ಸ್ನಾನಭೋ[13]ಜನ[13] ಮಾಡಿಸಿ[14]ದು[14]
ಸಾನುರಾಗದಿ ಪೇಳೆ ಮಂತ್ರೀಶನೆಲ್ಲರ್ಗೆ । ತಾನು ಮಾಡಿಸಿದ [15]ಯತ್ನಗಳ[15] ೨೬

ಎಲ್ಲರು ಭೋಜನವನು ಮಾಡಿ ಆ[16]ಗ[16] ಭೂ । ವಲ್ಲಭನೆಡೆಗೆಯ್ದಿ ಬೞಿಕ
ಸಲ್ಲೀಲೆಯಿಂದ ಆಶೀರ್ವಾದಗಳ ಮಾಡಿ ಮ । ತ್ತೆಲ್ಲರು ನುಡಿದರಿಂತೆಂದು ೨೭

ಚೆಂದವಾಯಿತು ನೀವು ಮಾಡುವ ಯಜ್ಞವು । ಮುಂದಣ ಭವದೊ[17]ಳು[17] ನಿಮಗೆ
ಇಂ[18]ದ್ರನ[18] ಪಟ್ಟವನಾಳ್ವಿರಿಯೆನೆ ಭೂ । ಪೇಂದ್ರ ಸಂತಸವಾ[19]ಗಿ[19] ಮನದಿ ೨೮

---

[1] ರ್ದ (ಕ) [2] ರಿ (ಕ) [3] ಳು (ಗ) [4] ವಸ (ಗ) [5] ಪ್ರ (ಕ) [6] ವು (ಕ)
[7] ವಿನಿ (ಕಚ) [8] ಳ್ದರು (ಕ) [9] ದ (ಕ) [10] ಯಂ (ಕ) [11] ದ (ಕ) [12] ಮುಂತಾದಿ (ಗ)
[13] ನ (ಗ) [14] ದ (ಕ) [15] ಬಂದವರ್ಗೆ (ಗ) [16] ಗಲು (ಕ) [17] ಳ್ (ಗ)
[18] ದ್ರ (ಕ) [19] ಡಿದ (ಕ)

ನಿತ್ಯಭೋಜನಶಾಲೆ ಏಳೆಂಟು ಸಾಹಸ್ರ । ಮತ್ತು ವಿಪ್ರರಿಗೆ ಭೋಜನವು
ಸತ್ರಪರಿಗೆ ಓಂದವಿಕ್ಕುವ ವಿಪ್ರ[1]ರ[1] । ಪೊತ್ತವಿ[2]ದ್ದುದು[2] ಶಾಲೆಯೊಳಗೆ ೨೯

ಪೊಡವಿಪಾಲಕ ತಾ ವಿಪ್ರರಿಗೆಲ್ಲಕ್ಕೆ । ಒಡನೆ [3]ಷೋಡಶದಾ[3]ನವಿತ್ತು
ನುಡಿದ[4]ನು ಷೋಡಶ[4] ಸಾಹಸ್ರ ಭೋಜನ । ಒಡನಾಗಬೇ[5]ಕೆಮ್ಮ[5] ಗೃಹದಿ ೩೦

ನಾಕಾಧಿಪತಿಯಂತೆ ಭೂಪನೋಲಗವಿರ್ದು । ತಾ ಕರೆಸಿದ[ನು] ಮಂತ್ರಿಯನು
ಜೋಕೆಯಿಂದೆಲ್ಲರ್ಗೆ ಭೋಜನಶಾಲೆಯೊ ।ಳೇಕ[6]ಪ[6]ಙ್ತಿಯೊಳಾಗಲೆಂದ ೩೧

ಮತ್ತೆ ಪ್ರಧಾನಿಯು ಕರೆಸಿ ವಿಪ್ರರಿಗೆಲ್ಲ । ಉ[7]ತ್ತಮ[7]ಸಮಾರಾಧನೆಗೆ
ಎತ್ತಿ ಡಂಗುರವನು ಪೊ[8]ಯಿಸೆ[8] ಭೂಸುರರೆಲ್ಲ । ಅತ್ಯಂತ ಹರುಷವೆಯ್ದಿದರು ೩೨

ಬಂದ ವಿಪ್ರರಿಗೆಲ್ಲ ಶಯನಗೃಹಂಗ[9]ಳ[9] । ಚೆಂದಚೆಂದದೊಳು ಮಾಡಿಸಿದ
ಮುಂದೆ ಯಜ್ಞಕೆ ತಕ್ಕ ಗೃಹಗಳನೆಲ್ಲವ । ಅಂದು ಮಾಡಿಸಿ[10]ದನು[10] ಸಚಿವ ೩೩

ಭೋಜನಶಾಲೆಗೆ ಬಂದು ನೃಪತಿ ತಾನು । ಸೋಜಿಗವೆನೆ ಸರ್ವ[11]ಜ[11]ನರು
ಈ ಜಗದೊಳ[12]ಗುಳ್ಳ[12] ರಸವಸ್ತುಗಳನೆಲ್ಲ । ರಾಜ ಬರಿಸಿದನಾಕ್ಷಣ[13]ಕೆ[13] ೩೪

ಹೊಂ[14]ಹೊಂ[14]ಗಳ ಅಗ್ರದಳ[15]ಪತ್ರ[15]ಂಗಳ । ಹರಹಿ ಭೋಜನಶಾಲೆಯೊಳು
ಇರಿಸಿ ಒಂದೊಂದು ಪೀಠವ ಎಲೆಯೊತ್ತಿಲಿ । ಕರೆಸಿ ವಿಪ್ರರನು ಕುಳ್ಳಿರಿಸಿ ೩೫

ದೊನ್ನೆಗಳನು ಎಲೆಯೊತ್ತಿಲಿ ಹತ್ತೆಂಟ । ಚೆನ್ನಾಗಿ ಇರಿಸಿ ಪಂಡಿತರು
ಮನ್ನಣೆ ಮಿಗೆ ಉಟ್ಟ ದೋತ್ರವ ಸಡಿಲಿಸಿ । ಬಿನ್ನಾಣದಿಂದ ಕುಳಿತರು ೩೬

ಜೋಕೆಯಿಂದಲಿ ಅನೇಕ ವಸ್ತುಗಳನು । ಪಾಕವ ಮಾಡಿ[16]ರ್ದು[16] ಮತ್ತೆ
ಶಾಕುಯೆನ್ನದೆ ಬಡಿಸೆಂಬ ವಿಪ್ರರಿಗೆಲ್ಲ । ಸಾಕೆನೆ ಬಡಿಸಿದ[17]ರಂದು[17] ೩೭

ಹಪ್ಪಳಪ್ಪಿನಕಾಯಿ ಚೂತ ನಿಂಬೆಯುಕಣ್ಣು । ಒಪ್ಪುವ ಗೆಣಸು ಅಲ್ಲಗಳು
ತಪ್ಪದೆ ಮಾದಳ ಮಾಗ[18]ಡಿ[18] [19]ಮುಂತಾದ[19] । ವೊಪ್ಪದಿ ಬಡಿಸಿದರಾಗ ೩೮

---

[1] ರು (ಗ) [2] ದ್ದರು (ಗ) [3] ಷಡಾಸ (ಕ) [4] ನು (ಕ) [5] ಕಂದ (ಕ) [6] ವ (ಕ)
[7] ತ್ಸ (ಕ) [8] ಯ್ಸೆ (ಕ) [9] ಳು (ಕ) [10] ದ (ಗ) [11] ಜ (ಕ) [12] ದಲ್ಲ (ಗ)
[13] ವ (ಗ) [14] ಹೊ (ಗ) [15] ಫಲ (ಗ) [16] ರ್ದ (ಕ) [17] ರಂತು (ಗ)
[18] ಡೆ (ಕ) [19] ಮೊದಲಾದ (ಗ)

ಇಪ್ಪತ್ತು ಬಗೆಯ ಉಪ್ಪಿನಕಾಯ ಬಡಿಸಲು । ವಿಪ್ರರಿದ್ದರು ಮುಗುಳ್ನಗೆಯು
ಒಪ್ಪದಿ ಮಾಡಿರ್ದ ಹಲವು ಕಜ್ಜಾಯವ । ತಪ್ಪದೆ ಬಡಿಸಿ[1]ದ[1]ರಿಂತು ೩೯

ಹೂರಿಗೆ ಹೋಳಿಗೆ ಗಾರಿಗೆ ಸೇವಿಗೆ । ಸಾರಸ[2]ಕ್ಕರೆ[2]ಬುರುಡೆಗಳು
ಕ್ಷೀ[3]ರ[3]ಪಾಯಸ ಚಕ್ಕುಲಿ ವಡೆ ಎಣ್ಣೆಯು । ಹೂರಿಗೆ [4]ಸಹ[4] ಬಡಿಸಿದರು ೪೦

ಹೂರಿಗೆಗಳ ಮೆ[5]ದೆ ಸಜ್ಜಿಗೆ[5] ಪಾಯಸ । ತೋಱುತ್ತಿದ್ದುದು ಹುಗ್ಗಿ ಬಣಬೆ
ವಿಪೇಳ್ವೆ ಅದಱ[3]ೊಳು ತಿನಿಸಿನ ಬಗೆ ನೂಱು । ಬಗೆಗಳ ಬಡಿಸಿದರಿಂತು ೪೧

ಹಲಸಿನಹಣ್ಣು ಮಾವಿನಹಣ್ಣು ಕದಳಿಯು । ಬಲುಮಧುರದ ಹಣ್ಣು ಮತ್ತೆ
ಚೆಲುವಿನ ದಾಡಿವ ದ್ರಾಕ್ಷೆ ಖರ್ಜೂರವು । ಪಲಬಗೆ ಬಡಿಸಿದರೆಡೆಗೆ ೪೨

ನುಗ್ಗೆ ಅವ[6]ರೆ ಗುಳ್ಳ[6] ಪಡಲ ಸೂರಣಗೆಡ್ಡೆ । ಒಗ್ಗರಣೆಯ ಅಳಿ ಪ[7]ಳದ್ಯ[7]
ಮುಗ್ಗದ ಹೊಸತುಪ್ಪ ಮುಂತಾದ ವಸ್ತುವ । ಲಗ್ಗೆಲಗ್ಗೆಯೊಳ್ ಬಡಿಸಿದರು ೪೩

ಬಿಸಿಯನ್ನ ತೊವೆ ತಾಳಿಲು [8]ಪಳದ್ಯ[8] ಹಪ್ಪಳ । ಹೆಸರ ತೋಯುಲು ಕಟ್ಟಡಿಯು
ಹಸನಾದ ಪಾಯಸ ಕ್ಷೀರದಧಿಗಳನು । ಉಸುರಱ[3]ುದೆ ಬಡಿಸಿದರು ೪೪

ತಪ್ಪದೆ ಎಡೆಗೆ ಇನ್ನೂಱು ಬಗೆಯ ತಂದು । [9]ಒ[9]ಪ್ಪದಿ ಬಡಿಸಿ ಭೂಸುರರು
ನೆ[10]ಪ್ಪಾ[10]ಯಿತಿಂದಿನ ಭೋಜ[11]ನ ನಿ[11]ಮಗೆಂದು । ವಿಪ್ರರಿದ್ದರು
ಮುಗುಳ್ನ[12]ಗುತ[12] ೪೫

ವಿಪ್ರರೆಲ್ಲರು ವೇದ ಪಠಿಸಿ ಆಪೋಶಣೆ । ತಪ್ಪದೆ ಮಾಡಿ ಮತ್ತವರು
ತಪ್ಪದೆ ಗಡ್ಡ ಮೀಸೆಯ ನೀವಿಕೊಳುತಲಿ । [13]ತ್ರ[13]ಪ್ಪಿಸಿ ದೋತ್ರದ ಬಿಗುವ ೪೬

ಇಂತು ಹಲವುಬಗೆ ಷಡುರಸಾಯನಗಳ । ಸಂತೋಷದಿಂದುಣ್ಣುವಾಗ
ಇಂತು ತಾವೆಲ್ಲರು ನುಡಿದಾಡುತಿರ್ದರು । ಪಿಂತೆ ಕಂಡುದೆಲ್ಲಿಯಿಲ್ಲ ೪೭

ಪ್ರೀಯದಿಂದಲಿ ಉಣ್ಣುವಾಗಲು ಕಜ್ಜಾಯ । ಬಾಯ ಬರವ [14]ಬಿ[14]ಡಿಸಿದ[15]ವು[15]
ತೋಯದ ಸವಿಯನು ಬಣ್ಣಿಸಲಳವಲ್ಲ । ಪ್ರೀಯದಿಂದಲಿ ಉಂಡವರ್ಗೆ ೪೮

---

[1] ರ್ದ (ಕ) [2] ಕರಿ (ಕ) [3] ರಸಕ್ಕರೆ (ಕ) [4] ಗಳ (ಕ) [5] ದೆ (ಕ) [6] ರೆ (ಕ)
[7] ಳ್ದ್ಯ (ಗ) [8] ತೊಪದ್ಯ (ಕ) [9] ತ (ಗ) [10] ಪಾ (ಗ) [11] ನ (ಕ)
[12] ಗೆಯೊಳು (ಕ) [13] ಬ (ಕ) [14] ಬ (ಕ) [15] ರು (ಕ)

ಈ ರೀತಿ ಯಜ್ಞಶಾಲೆಯೊಳರ್ಧಮಾಸವು । ಭೂರಿವೈಭವದೊಳು ನೆಗಳಿ
ಧಾರಿಣೀಪತಿ ಈರೆಂಟು ಸಾಹಸ್ರಕ್ಕೆ । ಭೂರಿ ಷೋಡಶದಾನವಿತ್ತ ೪೯

ಮತ್ತು ಕರ್ಪೂರಲೇಪನ ತಾಂಬೂಲವ । ನಿತ್ತು ಉತ್ತಮ ವಿಪ್ರಸಭೆಗೆ
ಚಿತ್ತಶುದ್ಧದಿ ಮದನೆ ಮಾಡೆ ಭೂಪಾಲ । ಅತ್ಯಂತ ಹರುಷದೊಳಿರಲು ೫೦

ಆ ಪುರದೊ[1]ಳು ಯಜ್ಞ[1]ಶಾಲೆ ಸಮೀಪದಿ । ಪಾಪಭೀತನು ವಿಶ್ವಭೂತಿ
ಏಪ್ಪೊತ್ತು ಧರ್ಮಾಗಮದೊಳಿರುತಿರ್ದನು । ರೂಪುಮನ್ಮಥನು ದಾರಿದ್ರ ೫೧

ಪುರದೊಳು ಭಿಕ್ಷವ ಮಾಡಿ ತಂದಕ್ಕಿಯು । ಅರೆದು ಪಿಂಡವ ನಾಲ್ಕು ಮಾಡಿ
ತರುಣಿಗೆ ಒಂದು ತನಗೆ ಒಂದು ಯತಿಗೊಂದು । ಉಳಿ[2]ವ ಅಗ್ನಿಯ
ಹೋತ್ರ[2]ಕೊಂದು ೫೨

ಹರುಷದಿ ಈ ರೀತಿ ಕಾಲವ ಕಳೆವುತ । ಇರುತಿರಲೊಂದು ದಿವಸದಿ
ಪರಮಯೋಗಿಗಳು ಮಾಸೋಪವಾಸವ ಮಾಡಿ । ಬರುತಿರೆ ಕಂ[3]ಡಿ[3]ಶ್ವಭೂತಿ ೫೩

ಬಡವ ನಿಧಾನವ ಕಂಡಂತೆ ಭಕ್ತಿಯೊಳ್ । ಕಡುಹರುಷದಿ ನಡೆತಂದು
ಬಿಡದೆ ತಾ ಭಿಕ್ಷೆಗೆ ನಿಲಿಸಿ ಮುನೀಶನ । ಒಡಗೊಂಡು ಪೋದನು ಗೃಹಕೆ ೫೪

ಸ್ಥಾಪನುಚ್ಚೈಸ್ಥಾನ ಪಾದೋದಕ ಪೂಜೆ । ಏಪೇಳ್ವೆ ವಂದನೆವೆರಸು
ಕೋಪವರ್ಜಿತ ತ್ರಿಕರಣವೇಷಣ ಶುದ್ಧಿ । ಲೋಪವಿಲ್ಲದೆ ನಡಸಿದನು ೫೫

ಶ್ರದ್ಧೆ ಶಕ್ತಿ ಭಕ್ತಿ ಕ್ಷಮೆ ದಯೆ ಲುಬ್ಧತೆ । ನಿರ್ಧರ ಯುಕ್ತಿ ಸಮೇತ
ಉದ್ಧತ ನವವಿಧ ಪುಣ್ಯಗುಣಗಳೀಳ । ಪದ್ಧತಿ[4]ಯನು[4] ನಡಸಿದನು ೫೬

ಆ ವೇಳೆಯೊಳು ಅನರ್ಥ ದಂಡಾಯುಧ । ಜೀವಬಂಧನ ಪಾಪಕೃತ್ಯ
ಭಾವಜಶೃಂಗಾರ ಮೋಹವಚನಗಳ । ಭಾವಶುದ್ಧದಿ ತೊಲಗಿಸಿದ ೫೭

ಕಡುಪ್ರೀತಿಯಿಂದ್ಲಿ [5]ಮುನಿಪತಿ ಹಸ್ತದಿ । ಸಡಗರ ಮಿಗೆ ಪಿಂಡವಿಟ್ಟು
ಒಡನೆ ಸಿದ್ಧಭಕ್ತಿ ಪೇಳಲು ಮುನಿಪತಿ । ತಡೆಯದೆ ಸೇವಿಸಲಾಗ ೫೮

---

[1] ಶಂ (ಕ) [2] ವಾಗಿಯ ಹೊತ್ತರ (ಗ) [3] ಡುವಿ (ಗ) [4] ಯ (ಗ) [5] ಲ್ಲಿ (ಗ)

ಅತ್ಯಂತ ತೃಪ್ತಿಯ ಪಡೆಯದೆ ಮುನಿಪತಿ । ಮಾ[1]ತ್ರ್ಯಾ[1] ಸುಮ್ಮನೆ ನಿಂದಿರಲು
ಚಿತ್ತಶುದ್ಧದಿ ಅಗ್ನಿಹೋತ್ರದ ಪಿಂಡವ । ಎತ್ತಿಕೊಟ್ಟರೆ ಸಾಲದಿರಲು

ಮುದದಿ ತನಗೆ ಮಾಡಿದ ಪಿಂಡವಿತ್ತರೆ । ಅದು ಸಾಲದಿರೆ ತನ್ನ ಸತಿಯು
ವದನವ ನೋಡಲು ಕೊಡು ಎನೆ ಇತ್ತ[2]ಳು[2] । ಅದನುಂಡು ತೃಪ್ತಿಪಡೆದರು

ಭಿಕ್ಷವ ಕೊಂಡು ಮುಮುಕ್ಷು ಕೈತೊಳೆದಾಗ । ಅಕ್ಷಯಫಲವ[3]ಸ್ತು[3] ಎನಲು
ತಕ್ಷಣದೊಳು ಅಮರರು ರನ್ನಮಳೆಯನು । ಆ ಕ್ಷಣ ಕರೆ[3]ದರಂಗಣದಿ

ಉನ್ನತಹರುಷದಿ ವಿಶ್ವಭೂತಿಯು ಬೇಗ । ರನ್ನವ ತುಂ[4]ಬಿದ[4] ಮನೆಯ
ಅನ್ನದಾನದ ಫಲ ತೋರಿ[6]ತು ನನಗೆಂದು । ಸನ್ನುತಗುಣಮಣಿ ನಲಿದ

ಇಂತಾದ ರತ್ನವೃಷ್ಟಿಯ ಕಂಡು ವಿಪ್ರರು । ಸಂತೋಷದಿಂ ಪೇಳೆ ನೃಪಗೆ
ಕಂತುಸನ್ನಿ[5]ಭನ[5] ಯಜ್ಞದ ಫಲದಿಂದಲಿ । ಇಂತಾಯ್ತು ರನ್ನವೃಷ್ಟಿಯನು

ತನ್ನ ಅಂಗಣದೊಳಗಾದ ವೃಷ್ಟಿಯ ಕಂಡು । ತನ್ನ ಪುಣ್ಯದೊ[7]ಳಾಯಿ[7]ತೆಂದು
ರನ್ನವ ಬಾಚಿ ತನ್ನಯ ಗೃಹ ತುಂಬಿದ । ನಿನ್ನ ಕೇಳದೆ ವಿಶ್ವಭೂತಿ

ಈ ಪರಿಯೊಳು ಪೇಳ್ವ ವಿಪ್ರರ ನುಡಿಗೇಳಿ । ಪಾಪ[8]ಹೃ[8]ದಯನಿಂತು ನುಡಿದ
ಕೋಪದಿ ವಿಶ್ವಭೂತಿಯನೆಳತಂದಾಗ । ಭೂಪ ನುಡಿದನಿಂತೆಂದು

ಏ[9]ನೆಲೊ[9] ತುಂಟ ನ[10]ಮ್ಮ[10] ಯಜ್ಞನ ಫಲದಿಂದ । ತಾನು ರತ್ನದ ವೃಷ್ಟಿಯನು
ನೀ ನನ್ನ ಕೇಳದೆ ಮನೆಗೊ[11]ಯ್ದು[11] ಪರಿಯನು । ನೀನುಸಿರೆನಲಿಂತು ನುಡಿದ

ಪರಮಮುನಿಗೆ ಅನ್ನವೀಯಲು ಭಕ್ತಿಗೆ । ಸುರಪತಿ ಮೆಚ್ಚಿ ತಾನೀಗ
ಸುರಿದ[12]ನು[12] ನನ್ನ ಅಂಗಣದೊಳು ಅದರಿಂದ । ಹರುಷದಿಂದಲಿ ಮನೆಗೊಯ್ದೆ

ಬಡವರು ಭಕ್ತಿವೆರಸು ಕೊಟ್ಟ [13]ದಾನಕ್ಕೆ[13] । ಪೊಡವಿಯೊಳೆಣೆಯಿಲ್ಲವೆಂದು
ಕಡುಬೇಗ ಸುರಪತಿ ಮೆಚ್ಚಿ ಅಂಗಣದೊಳು । ಬಿಡದೆ ರತ್ನದ ಮಳೆಗರೆ[3]ದ

---

1 ತ್ರಿ (ಕ) 2 ವನು (ಗ) 3 ಸ್ತ್ರ (ಕ) 4 ಬಿ (ಕ) 5 ಭ (ಗ) 6 ಳು ಇಂ (
7 ದ (ಕ) 8 ಗೃಹ (ಕ) 9 ನೆ (ಕ) 10 ಮ್ಮಯ (ಕ) 11 ಯ್ದ (ಗ) 12 ರು (ಗ
13 ಭಕ್ತಿಗೆ (ಕ)

ವಸುಧೆಯೊಳ್ ಶ್ರೀಗಿತಾಂದಕ್ಕಿಹಿಟ್ಟನಿಂ । ತಃಪುಣ್ಣದೆ ಕೊಡಲು ರತ್ನವೃಷ್ಟಿ
ವಳಯದೊಳು ಆದ್ಯೆಂಬುದು ನಿಜವುಂಟೆ। ಗೋವ ಒಪ್ಪಿಸು ರತ್ನವೃಷ್ಟಿಯನು ೬೯

ಚಿತ್ರದೊಳಾನು ಯಜ್ಞಶಾಲೆಯೊಳ । ನೇಕ ವಿಪ್ರರ ಸಮೂಹಕ್ಕೆ
ಕಾದ ಷಡುರಸಾಯನಗಳನಿತ್ತೊಡೆ । ನಾಕಾಧಿಪತಿ ಮೆಚ್ಚಿ ಸುರಿದ ೭೦

ಗ ನೀ ಮನೆಗೊಯ್ದು ರತ್ನಂಗಳೆಲ್ಲವ । ಬೇಗದಿ ಕೊಂಡುಬಾರೆಂದು
ಗದಿ ನೃಪತಿ ಪೇಳಲು ವಿಶ್ವಭೂತಿಯು । ಆಗಲೆಯ್ದಿದ ತನ್ನ ಗೃಹಕೆ ೭೧

ಡವಿಪಾಲಕನ ಭಯ[1]ಕೆ ಅಂ[1]ಜಿ ರತ್ನವ । ಮುಡಿಲೊಳು ತುಂಬಿತಂದಾಗ
ಗುತ ನೃಪನ ಓಲಗದ ಹಜಾರದಿ । ಕಡುಕೋಪದಿಂದಲಿ ಸುರಿದ ೭೨

ಣೀಶ ನೋಡುತಿರಲು ರತ್ನರಾಶಿಯು । ತನಿಗೆಂಡವಾಗೆ ಜ್ವಾಲೆಯೊಳು
ದಿರ್ದ ಸಭೆಯೆಲ್ಲ ಅಗ್ನಿಜ್ವಾಲೆಗೆ ಅಂಜಿ । ಇರದೋಡಿದರು ದೆಸೆದೆಸೆಗೆ ೭೩

ನ್ನ ಪುಣ್ಯದ ವಸ್ತುವಾದರೆ ನೀನೀಗೆ । ಚೆನ್ನಾಗಿ ಕೊಂಡುಪೋಗೆನಲು
ನ್ನವಿಲ್ಲದೆ ಅಗ್ನಿಯಡೆಗೆ[2]ಯ್ಯಲಾ[2] ಉರಿ । ಘನರತ್ನರಾಶಿ ತಾನಾಯ್ತು ೭೪

ನಾಥ ಈ ಪರಿಯನು ಕಂಡು ಮನದೊಳು । ಆನಂದ ಮಿಗೆ ಹರುಷದೊಳು
ನುರಾಗ[3]ದಿ ವಿ[3]ಶ್ವಭೂತಿಗೆ ಪೇಳ್ದನು । ನೀನು ರತ್ನಗಳನೊಯ್ಯೆಂದು ೭೫

ನು ಮಾಡಿದ ಅನ್ನದಾನದೊಳರ್ಧವ । ಅನದೆ ಕೊಟ್ಟರೆ ಈಗ
ನು ಮಾಡಿದ ಯಜ್ಞಧರ್ಮದೊಳರ್ಧವ । ಸಾನುರಾಗದೊಳೀವೆ ನಿನಗೆ ೭೬

ತ್ತಮ ಚಿಂತಾಮಣಿಯಿತ್ತು ಧರೆಯೊಳು । ಮತ್ತೆ ಗಾಜಿನಮಣಿಗೊಂಬ
ತ್ಯಂತಹೆಡ್ಡರು ಉಂಟೆ ನೃಪತಿಯೆಂದು । ಮತ್ತೆ ಪೇಳ್ದನು ವಿಶ್ವಭೂತಿ ೭೭

ಡುಬೇಗದಿಂದಲಿ ವಿಶ್ವಭೂತಿಯು ತಾನು । ಪೊಡವಿಪನನುಮ[4]ತಿಯಿಂ[4]ದ
ಡಿಲೊಳು ಉರಿವ ರತ್ನದರಾಶಿಯನು ಕಟ್ಟಿ । ಸಡಗರದಿಂ ಪೋದ ಮನೆಗೆ ೭೮

---

ಕಂ (ಕ) [2] ಯ್ಯ ಅ (ಕ) [3] ದೊಳಿ (ಗ) [4] ತದಿಂ (ಗ)

ಈ ಪರಿಯೊಳು ಸರ್ವಜನರೆಲ್ಲ ನೋಡಲು । ಭೂಪತಿ ಸೋಮಪ್ರಭನು
ಪ್ರೀತಿಯಿಂ ಸುತಗೆ ಪಟ್ಟವಗಟ್ಟಿ ಮತ್ತಾಗ । ತಾ ಪೋದ ತಪವ ಕೈಕೊಂಡು ೭೯

ಈ ಪರಿಯನ್ನದಾನದ ಫಲವನು ಮುನಿ । ಲೋಪವಿಲ್ಲದೆ ಪೇಳೆ ಕೇಳ್ದು
ಕೋಪವರ್ಜಿತ ಸೋಮಶರ್ಮ ಮಂತ್ರೀಶನು । ತಾ ಪೊಡಮಟ್ಟಿಂತು [1]ನುಡಿದ[1] ೮೦

ಹಿಂ[2]ದ[2]ಣ ನನ್ನಘ ಪೋಗುವಂದದಿ ಈಗ । ಒಂದು ಸುವ್ರತಯಾವುದೆನಲು
ಚಂದದಿಂದಲಿ ಅಹಿಂಸಾವ್ರತವು ಇರ । ಲೆಂದು ಕೊಡಲು ಕೈಕೊಂ[3]ಡ[3] ೮೧

ಸೋಮಶರ್ಮನು ತಾನು ಲೋಹದಲಗ ಬಿಟ್ಟು । ಪ್ರೇಮದಿ ವೇಣುದರ್ಭೆಯನು
ಧಾಮಪ್ರೀತಿಯೊಳು ರತ್ನದ ಪರ[4]ಜೆ[4]ಯ ಮೇಲೆ । [5]ಹೇ[5]ಮದ
ಹೊಜ[6]ಯಿ[6]ಟ್ಟುಕೊಂಡು ೮೨

ಏನ ಹೇಳುವೆ ಬಲ ಹತ್ತುಸಾವಿರಕೆಲ್ಲ । ಭೂಸುತ ಹಯಾಧಿನಾಥ
ತಾನು ಸೇನಾಧಿನಾಯಕನಾಗಿಯಿರಲೊರ್ವ । ತಾನಿಂತು ನುಡಿದ ಭೂಪತಿಗೆ ೮೩

ಧರಣೀಶ ಕೇಳ್ ದಳಪತಿಯ ಕೈಯೊಳಗಿರ್ಪ । ಕರವಾಳ ಮರದಿಂದ ಮಾಡಿ
ಇರಿಸಿ ಚಿನ್ನದ ಒರೆಯೊಳಗಿಟ್ಟು ಪಿಡಿದಿರೆ । ಅರಿಬಲವನು ಎಂತು ಗೆಲುವ ೮೪

ಇಂತುಸುರಿದ ಚಾಡಿಕಾಜನ ನುಡಿಗೇಳಿ । ಕಂತುಸನ್ನಿಭನೊಂದು ದಿವಸ
ಸಂತೋಷದಿಂದ ಓಲಗದೊಳು ಕುಳ್ಳಿರ್ದು । ಇಂತೆಂದು ಬಗೆದ ಚಿತ್ತದೊಳು ೮೫

ದಳಪತಿ ಸೋಮಪ್ರಭನ ಕೈಯೊಳಗಿರ್ದ । ಹೊಳೆವ ರತ್ನದ [7]ಹಿ[7]ಡಿಯಿಂದ
ಖಳಖಳಿಸುವ ಚಿನ್ನದವೊರೆ ಖಡ್ಗವ । ಇಳೆಗಧಿಪತಿಯು [8]ತ[8]ರೆಂದ ೮೬

ಮತ್ತ[9]ಂ[9]ದ ಸೇವಕರನಟ್ಟಲು ಬಂದು । ಚಿತ್ತಶುದ್ಧದಿ ಪೇಳ್ದರಿಂತು
ಧಾತ್ರೀಶ ನಿಮ್ಮ ಖಡ್ಗವ ತರಹೇಳಿದ । ಚಿತ್ತಜರೂಪ ತಾರೆನಲು ೮೭

ಇಂದ್ಯಾರೊ ಚಾಡಿಯು ಪೇಳ್ದರೆಂದಜ[9]ದಾಗ । ಕಂದರ್ಪವಿಜಯನೆ ಶರಣು
[10]ಎ[10]ಂದು ಖಡ್ಗವ ತಾನು ಚರರ ಕೈಯೊಳಗೀಯೆ । ತಂದು ಕೊ[11]ಟ್ಟನು[11]
ನೃಪನದನು ೮೮

---

[1] ಪೇಳ್ದ (ಗ) [2] ದೆ (ಗ) [3] ಡು (ಕ) [4] ಜೆ (ಗ) [5] ಹೋ (ಕ) [6] ಯೊಳ (ಗ)
[7] ಹಿಂ (ಗ) [8] ತ್ತ (ಕ) [9] ದರ (ಕ) [10] ಇ (ಕ) [11] ಡಲು (ಗ)

ಇಂದು ನೃಪತಿಯಿಂದ ಉಪಸರ್ಗ ನನಗೆ ತಾ । ಬಂದಪುದೆಂದು ತಾ ತಿಳಿದು
ಇಂದು ಮೊದ[1]ಲು ನೃಪನ [1]ಪಸ[2]ರ್ಗ[2] ಕಳಿವನ್ನ । ಕಂದರ್ಪವಿಜಯ ಸಾಕ್ಷಿಯೊಳು ೮೯

ನನಗೆ ಆಹಾರ ಶರೀರ ನಿವೃತ್ತಿಯೆಂದು । ತಾನು ಕೈಕೊಂಡು ಮಂತ್ರೀಶ
ಸಾನುರಾಗದಿ ಜಪಮಾಡುತಿರಲು ಅತ್ತ । ಭೂನಾಥನೋಲಗದೊಳಗೆ ೯೦

ಚಿನ್ನದ ಒರೆಯಿಂದ ನೃಪ ತೆಗೆಯಲು ಖಡ್ಗ । ಮುನ್ನೇಸರಂತೆ ರಂಜಿಸುವ
ರನ್ನದ ಪರಜು ಪಿಡಿದು ಚಿಮ್ಮುತಿರ್ದನು । ಉನ್ನತ ಹರುಷದಿ ನೃಪತಿ ೯೧

ಕೊಂಡೆಯ ಹೇಳಿದ ಭಂಡರ ಹಿಡಿತಂದು । ತುಂಡಿಸೆಂದಾಗ ನಾಲಗೆಯ
ಮಂಡಲಪತಿ ಪೇಳೆ ಆ ವೇಳೆಯೊಳು ಮಂತ್ರಿ । ಕಂಡು ಪೇಳ್ದನು ನೃಪಗಿಂತು ೯೨

ಅವರು ಹೇಳಿದ ನುಡಿ ತಪ್ಪಲ್ಲ ಭೂಪೇಂದ್ರಾ । ಅವರನಾಜ್ಞೆಯು ಮಾಡ ಸಲ್ಲ
ವಿವರಿಸೆ ನಾನು ಪಿಡಿದ ಖಡ್ಗ ಮರವೆಂದು । ಭುವನೇಶನೊಡನೆ ತಾ ಪೇಳ್ದ ೯೩

ಒರೆಯಿಂದ ತೆಗೆಯೆ ವೇಣುದಂಡೆಯು ಕಂಡು । ಧರಣೇಶ ವಿಸ್ಮಯ[3]ಬ[3]ಟ್ಟು
ಕರವಾಳ ಎಂತಾದುದೆಂದು ಮಂತ್ರೀಶನ । ನರನಾಥ ಕೇಳ್ದನು ಮುದದಿ ೯೪

ನನಗೆ ಗುರುವು ಕೊಟ್ಟ ವ್ರತದ ಸಾಮರ್ಥ್ಯದಿ । ಮನದೊಳು ನೆನದಂತಾಗುವುದು
ಘನಪುಣ್ಯನಿಧಿಗೆ ತಾ ಮರದಲಗನು ಬೇಗ । ವಿನಯದಿ ನುಡಿದು [4]ತೋಜಿ[4]ದನು ೯೫

ಈ ಪರಿ ಮಂತ್ರಿಯು ದೃಢವನು ತಾ ಕಂಡು । ಭೂಪತಿ ಅಜಿತಂಜಯನು
ವ್ಯಾಪಿಸಿ ಮನದೊಳು [5]ವೈರಾಗ್ಯವನು ತಾಳ್ದು[5] । ಭೂಪನೋಲಗದೊಳು ಕುಳಿತು ೯೬

ಕೊಟ್ಟ ಶತ್ರುಂಜಯನೆಂಬ ಕುಮಾರಗೆ । ತೊಟ್ಟನೆ ರಾಜ್ಯವಾಳೆಂದು
ಚಿಟಿಯನೆಲ್ಲವ ಪೇಳಿ ಇಚ್ಛ[6] [6]ರ ಮಂದಿ । ಮಾಟಿನರಸು[7]ಗಳ[7] ಕೂಡಿ ೯೭

ಸೋಮಶರ್ಮನು ಸಮಾಧಿಗುಪ್ತರುಯೆಂಬ । ಕಾಮವಿಜಯ ಮುನಿಯೊಡನೆ ೯೮
ಪ್ರೇಮ ದಿ ದೀಕ್ಷೆಯನಾಂತಪವರ್ಗವ । ಪ್ರೇಮದಿ ಪಡೆಯೆ ಮತ್ತಿತ್ತ

---

[1] ಲಾ (ಕ) [2] ರ್ಗವು (ಕ) [3] ಬಿ (ಗ) [4] ಪೇಳಿ (ಕ) [5] ವೈಶಾಖಲಗ್ನದೊಳಗೆಂದು (ಗ)
[6] ಯಿಸಿ (ಗ) [7] ಳನು (ಗ)

ಅರಸಿನರಸಿ ಸುಪ್ರಭೆ ಮಂತ್ರಿಪತಿ ಸಹ । ಅರಸುಮಕ್ಕಳು ರಾಣೀವಾಸ
ನೆರೆದು ವಿಮಲಕಂತಿಕೆಯರ ಕೈ[1]ಯಿಂದ[1] । ಧರಿಸಿ ದೀಕ್ಷೆಯನಾಂತರೆಲ್ಲ ೯೯

ಆ ಪುರದೊಳಗಣ ಭವ್ಯರ್ಗೆ ಸಮ್ಯಕ್ತ್ವ । ತಾ ಪುಟ್ಟಿ ವ್ರತಗಳ ಧರಿಸಿ
ಪಾಪವ ಕೆಡಿಸಿ ಸದ್ಗತಿಗಳ ಪಡೆದರು । ಏಪೇಳ್ವೆನವರ ಉತ್ಸಹವ ೧೦೦

ಈ ಪರಿಯನು ಕಂಡು ನನಗೆ ಸಮ್ಯಕ್ತ್ವವು । ತಾ ಪುಟ್ಟಿ[2]ತೆಂದು[2] ವಿಷ್ಣುಶ್ರೀ
ಓಪಗೆ ಪೇಳೆ ಕೇಳ್ದಿಲ್ಲಾ ಸ್ತ್ರೀಯರು ಹರುಷದಿ । ಏಪೇಳ್ವೆ ಮೆಚ್ಚಿದರಾಗ ೧೦೧

ಕಿಱಿಯ ವಲ್ಲಭೆ ಕುಂದಲತೆ ತಾನು ನುಡಿದಳು । ಹರುಷ ಮಾಳ್ಪೆನೆ ಮಿಥ್ಯನುಡಿಗೆ
ಅಱಿಯದಾಡಿದ ನುಡಿಗ[3]ಳ ನಿಜವೆಂಬರೆ[3] । ಧರೆಯೊಳು ಬಲ್ಲವರೆಲ್ಲ ೧೦೨

ಕುತುವನಾಡಲು ಪುಸಿಯೆಂದ ತ್ರೊಕ್ತನು । ಚಂಡಾಂಶು ಉದಿಸಿದಾಕ್ಷಣವೆ
ತುಂಡು[4]ತುಂ[4]ಡಿಗೆ ನಾಲಗೆಯ ಕೊ[5]ಯಿಸು[5]ವೆನೆಂದು । ಮಂಡಲಪತಿ ಮಂತ್ರಿ
ನುಡಿಯೆ ೧೦೩

ಮರದ ಮೇಗಣ ಚೋರನಿಂತೆಂದು ಬಗೆದನು । ಕುರುಡಗೆ ಕನ್ನಡಿ ಹಿತವೆ
ಧರೆಯೊಳು ಧರ್ಮದ ಕಥೆ ಕೇಳಿ ಪಾಪಿಗಳ್ । ಹರುಷ ಮಾಳ್ಪರೆ ಧರೆಯೊಳಗೆ ೧೦೪

ಪರದಶಿರೋಮಣಿ ಪಾವನಚರಿತನು । ಸರಸಿಜಸಖತೇಜಯುತನು
ಪರಮನ ಪಾದಸರೋರುಹಭೃಂಗನು । ಅರುಹದ್ದಾಸನೊಪ್ಪಿದನು ೧೦೫

ಇಂದುವಿನಳಿಯನ ತಂದೆಯ ಮೈದುನ । ಮುಂದುದಿಸಿದ[ವ][6]ನಾ[6]ಗ್ರಜನ
ತಂದೆಯ ತಾ ಮುಂದೆ ಗೆಲಿದನ ಪಾದಾರ । ವಿಂದಗಳಿಗೆ ವಂದಿಸುವೆನು ೧೦೬

---

[1] ಯಲಿ (ಗ) [2] ದಂಡ (ಗ) [3] ೞಗೆ ನಾನಿಜವೆಂದು (ಕ) [4] ಶಂ (ಗ) [5] ಯ್ಸು (ಕ)
[6] ಅ (ಗ)

# ಹನ್ನೊಂದನೆಯ ಸಂಧಿ

ಇಂದುಶೇಖರನ ಸತಿಯ ಕಂದೆ ಕಡಿದನ । ಕಂದನ ಭಾವನಾತ್ಮಜನ
ಮುಂದುಗೆಡಿಸಿ ಮುಕ್ತಿವಡೆದನ ಪಾದಾರ । ವಿಂದಗಳಿಗೆ ವಂದಿಸುವೆನು ೧

ಪರಮನ ಪಾದಸರೋರುಹಭೃಂಗನು । ವರವೈಶ್ಯಾಂಬರಭಾನು ಎನಿಪ
ಅರುಹದ್ದಾಸನು ಕೇಳಿ ಪದ್ಮಲತೆಯ ತಾನು । ಒರೆದಳೊಲ್ಲಭನೊಳಿಂತೆಂದು ೨

ಘನಪುಣ್ಯ[1]ನಿಧಿ[1] ಅರುಹದ್ದಾಸನು ತನ್ನ । ವನಿತಾಮಣಿ ಪದ್ಮಲತೆಯು
ನಿನಗೆ ಸಮ್ಯಕ್ತ್ವ ಸಂ[2]ಜನಿ[2]ಸಿದ ಬಗೆ ಈಗ । ನನಗುಸುರೆನೆ ಪೇಳ್ದಳಿಂ[3]ತು[3] ೩

ವಂಗದೇಶದಿ [4]ಚಂ[4]ಪೆಯೆಂಬ ನಗರದಲ್ಲಿ । ಅಂಗಜನಿಭರೂಪುಯುತನು
ತುಂಗವಿಕ್ರಮಿ ದಾಡಿವಾಹನ ನೃಪತಿಗೆ । ಅಂಗನೆ ಪದ್ಮಾವತಿಯು ೪

ವರಸತಿಯೊಡಗೂಡಿ ನೃಪನಿರೆ ಪುರದೊಳು । ಪರದನು ವಿಮಲದಾ[5]ಸನಿ[5]ಗೆ
ತರುಣಿ ಪದ್ಮಿನಿ ಯಿ[6]ರ್ವರಿ[6]ಗುದಿಸಿದಳೊರ್ವ । ಸರಸಿಜಮುಖಿ ಪದ್ಮಶ್ರೀಯು ೫

ಅಂಬುಜಮುಖಿಯು ಪೊಂಬಾಳೆದೊಡೆ[7]ಯು[7] ಚೆಲ್ವ । ಬಿಂಬಾಧರೆ ಮಂದಯಾನೆ
ಕುಂಭಕುಚದ ಅಳಿಗುರು[8]ಳ್ಪಿ[8]ಜ[3]ನೊಸಲಿನ । ತುಂಬುಜವ್ವನೆಯೊಪ್ಪಿದಳು ೬

ತಳಿರಡಿ ತಾರಾನಖ ತೆಳುಗದಟಿನ । ಸುಳಿನಾಭಿಯು ಚಂದ್ರಮುಖದ
ಕಳಶಕುಚದ ಕಂಭುಕಂಧರದಿಂದಲಿ । ನಳಿನಾಕ್ಷಿಯೊಪ್ಪಿದಳಂದು ೭

ತೋರದುಂಬು ತೊಂಡೆವಣ್ದುಟಿ ಹರಿಮಧ್ಯ । ಸಾರಂಗ [9]ಶು[9]ಭಲೋಚನದ
ಆರಡಿಗುರುಳ ಬಿಂದಿಗೆಬಾ[10]ಯಿ[10] ಮೀನಾಕ್ಷಿ । ನಾರೀಮಣಿಗೊಪ್ಪಿದವು ೮

---

[1] ಧಿ (ಕ) [2] ಜ (ಕ) [3] ತೆಂದು (ಗ) [4] ಚಂ (ಕ) [5] ಸಂ (ಗ) [6] ರ್ವ (ಕ)

[7] ಯು (ಕ) [8] ಳಿ (ಕ) [9] ಶ (ಗ) [10] ದಿಂ (ಗ)

ಪಂಕಜಮುಖಿ ಪಟ್ಟಸ್ವರ[1]ದೇ[1]ಮಾಂಗ । ಕೊಂಕಿದ ಪು[2]ರ್ಬಿನಿಂದೆ[2]ಸೆವಾ
ಕಂಕೇಲ್ಲಿ ತಳಿರ [3]ತಾರಾ[3]ಗುಲಿಯೆ ಸ[4]ಯೆ ವಿಶಾ । ನಾಂಕನ ಅಧಿದೇವಿಯಂತೆ ೯

ರತಿಯೊ ಭಾರ[5]ತಿಯೊ ಸರಸ್ವತಿಯೊ ಕ್ಷೀರಾ[6]ಬ್ಧಿ[6] । ಸುತೆಯೊ ಸೀತೆಯೊ ದ್ರುಪದಿಯೊ
ಕ್ಷಿತಿಯೊಳಗಿವಳಾರೆಂದು ನೋಡುವರೆಲ್ಲ । ಅತಿಪ್ರೀತಿಯಿಂದ ನೋಡುವರು ೧೦

ಹಾರ ಪದಕ ಹರಳೋಲೆ ವಜ್ರದಸರ । ತೋರಮುತ್ತಿನ ಮೂಗುತಿಯು
ಭಾರಿಯುಸರಪಣಿ ಭುಜಕೀರ್ತಿಯಿಂದಲಿ । ನಾರಿ ಸಿಂಗರವಾದಳಂದು ೧೧

ಕರದಲ್ಲಿ ಕಂಕಣ ಬೆರಳಲ್ಲಿ ಮುದ್ರಿಕೆ । ಕೊರಳೊಳು ಮುತ್ತಿನಹಾರ
ಬೆ[7]ಕವರಲ ಒಡ್ಯಾಣ ನೊಸಲ ಬೊಟ್ಟು । ಚರಣಕೊಪ್ಪುವ ಸರ್ವಾಭರಣ ೧೨

ಸಣ್ಣಶಾಲಿಯು ಸೀರೆ ಚಿತ್ರದರವಿಕೆಯು । ಬಣ್ಣಸಲಿಳವೆ ತಾ ತೊಟ್ಟು
ಕಣ್ಣಾರೆ ನೋಡುವ ಜನಗಳ ಮನ ತಾನು । ಹಣ್ಣಾಗದಿಹ ದೆ ಲೋಕದೊಳು ೧೩

ವಿಮಲದಾಸನ ಸುತೆ ಪದ್ಮಶ್ರೀ ಭಕ್ತಿಯೊಳ್ । ಪ್ರಮತೆಯಿಂದಲಿ ಪಂಚಾಮೃತವ
ಸುಮನಬಾಣನ ಗೆಲ್ದ ಸುಪಾರ್ಶ್ವನಾಥನ । ಕಮಲಾಂಘ್ರಿ ಪೂಜೆ ಮಾಳ್ಪವಳೆ ೧೪

ಅಷ್ಟಕರ್ಮವ ಗೆಲ್ದ ಅಭವನ ಪೂಜೆಯು । ನಿಷ್ಠದಿ ಮಾಡಿ ಮುಕ್ತವಳು
ಇಷ್ಟಾರ್ಥಗಳ ಪಾಲಿಸಿದರುಹಗೆ ತಾನು । ಸಾಷ್ಟಾಂಗವೆರಗಿದಳಾಗ ೧೫

ಭವಭವದಲಿ ಬಂದು ಕಾಡುವ ಕರ್ಮದ । ನಿವಹವ ನಿರ್ನಾಶ ಮಾಡಿ
ಕುವಲಯಮಿತ್ರನ ರಿಪುವ [8]ಧ[8]ರಿಸಿಯಿರ್ಪ । ಭವಹರನಡಿಗೆರಗಿದಳು[9] ೧೬

ರತಿರೂಪೆ ವಿದ್ಯಾವಿಲಾಸ ಸೊಬಗನಾಂತು । ಮತಿವಂತೆ ಮದನಮಂಜರಿಯಾನೆ
ವ್ರತಗುಣಮಣಿಭೂಷಣೆ ಸೊಬಗಿಂದಲಿ । ಅತಿರಂಜಿಸಿದಳು ಲತಾಂಗಿ ೧೭

ತನು ಮನ ವಚನಶುದ್ಧದಿ ಜಿನರಾಂಘ್ರಿಗೆ । ಘನಪುಣ್ಯವತಿ ಪೂಜೆಮಾ[10]ಡಿ[10]
ಪುನರ್ದರುಶನವೆಂದು ಸ್ತುತಿಗೆಯ್ದು ಹರುಷದಿ । ಮನೆಗೆ ಬರುವ ಸಮಯದೊಳು ೧೮

---

[1] ಹಿ (ಕ) [2] ರ್ಬಿನಿಂತೆ (ಕ) [3] ತಾಂ (ಕ) [4] ಸೆ (ಕ) [5] ತಿ (ಕ) [6] ಬ್ಧಿಯ (ಗ)
[7] ಜೆಯು (ಕ) [8] ರಿ (ಕ) [9] ರು (ಗ) [10] ಡೆ (ಕ)

ಆ ಪುರದೊಳು [1]ಬುದ್ಧದಾ[1]ಸ ವರದನಿಗೆ । ಓಪಳು ರತಿಗೆಣೆಯೆನಿಪ
ಚಾಪಾಲಾಕ್ಷಿ[2]ಯು[2] ಬುದ್ಧದಾಸಿಗೆ ಜನಿಸಿದ । ರೂಪುಮನ್ಮಥ ಬುದ್ಧಸಂಘ ೧೯

ಚೆಂದದಿ ಬಸದಿಯಿಂ ಬರುವ ಪದ್ಮಶ್ರೀಯು । ಅಂದವ ಕಂಡು ತಾನಾಗ
ಕಂದಿ ಮೋಹವು ಮನದಿಂದಲಿ ವಿರಹಾಗ್ನಿ । ಯಿಂದ ಬಳಲಿ ಬೆಂಡಾದ ೨೦

ಬಂದು ಮಾರನು ಶರದಿಂದಲೆಸೆಯೆ ಘಾಯು । ದಿಂದ ಸೊರಗಿದಂದದೊಳು
ಕಂದಿ ತನುವು ಮನಗುಂದಿ ಮೂರ್ಛೆಯೊಳವ । ಹೊಂದಿ ಬಿದ್ದನು ವಿರಹದಲಿ ೨೧

ಇಂತಿದ ಕಂಡು ಮಾತಾಪಿತೃಗಳು ತಾವು । ಚಿಂತೆಯಿಂದಲಿ ಮನೆಗೊಯ್ದು
ಇಂತೇಕಾದುದು ಕಂದ ಎಂದು ಜನನಿ ಕೇಳೆ । ಭ್ರಾಂತನಿಂತೆಂದು ಪೇಳಿದನು ೨೨

ವಿಮಲದಾಸನ ಸುತೆ ಪದ್ಮಶ್ರೀಯನು ಕಂಡು । ಮಮತೆ ಪುಟ್ಟಿತು ಅವಳೊಡನೆ
ಸ[3]ಮತೆ[3]ಯಿಂದವಳ ಮದುವೆ ಮಾಡದಿದ್ದೊಡೆ । ಸುಮನಶರದಿಂ[4]ದಾ[4]ನಳಿವೆ ೨೩

ಇಂತೆಂದು ತಾಯೊಳು ಪೇಳಲು ಕೇಳ್ದು ತಾ । ಚಿಂತೆಯಿಂದುಸುರ್ದಳಿಂತೆಂದು
ಎಂತು ಮಾಡುವೆ ಕಂದ ನಮ್ಮ ಕುಲ[5]ಕೆ[5] ಹೆಣ್ಣ । ಪಿಂತೆ ಕೊಟ್ಟವರಲ್ಲ ಮಗನೆ ೨೪

ಮಗನೆ ಕೇಳವಮಿಥ್ಯಾಸಂಘದವರು ನಮ್ಮ । ಬಗೆಯ ಮೆಚ್ಚರು ಕೂಸ ಕೊಡರು
ಹಗರಣ ಬೇ[6]ಡ ಬೇಡ[6] ಹಳವ ಮಾವಿನಹಣ್ಣ । ಬಯಸಿ ಬಾಯಾರಿದಂತಹುದು ೨೫

ಈ ಪರಿಯೊಳು ತಾಯಿ ಸುತಗೆ ಬುದ್ಧಿಯ ಪೇ[7]ಳೆ[7] । ಓಪಗೆ ಪೇಳೆ ಈ ಹದನ
ತಾಪದಿ ಬುದ್ಧದಾಸನು ಬಂದು [8]ಮಗ[8]ನಿಗೆ । ರೂಪುಸಂಪನ್ನನಿಂತೆಂದ ೨೬

ಕಂದ ಕೇ[9]ಳ[9]ವರು ಸಮ್ಯಕ್ತ್ವಸಂಪನ್ನರು । ಒಂದ ಮೆಚ್ಚರು ನಮ್ಮ ಬಗೆಯ
ಕುವರ್ಪ ವಿ[10]ಜಯ[10]ನ ಧರ್ಮದೊಳ್ ನೆಗಳ್ದಡೆ । ಮುಂದೆ ಕೊಡುವರು ತಮ್ಮ
ಸುತೆಯ ೨೭

ಸಲ್ಲದ ನಡತೆಯು ಬಿಟ್ಟು ಸಮ್ಯಕ್ತ್ವದಿ । ವೆಲ್ಲನೆ ನಡೆದು ಯುಕ್ತಿಯೊಳು
ಫುಲ್ಲಾಕ್ಷಿಯನು ತಂದು ಮದುವೆ ಮಾಡುವೆನೆಂದು । ಗಲ್ಲವ ಪಿ[11]ಡಿದು ಅ[11]ಪ್ಪಿದನು ೨೮

---

1 ಬೃಹದ್ದಾ (ಕ) 2 ಗೆ (ಕಗ) 3 ಮು (ಗ) 4 ದ (ಕ) 5 ದ (ಕ) 6 ಡ (ಗ)
7 ಳಿ (ಕ) 8 ಸುತ (ಗ) 9 ಳಿ (ಕ) 10 ಜ (ಕ) 11 ದ (ಗ)

ಈ ಪರಿಯೊಳು ಬುದ್ಧದಾಸನು ಸುತನಿಗೆ ನಾ । ನಾ ಪರಿಯೊಳು ಸಂತವಡಿಸಿ
ಪಾಪರಹಿತ ಜಿನದೇವಗೃಹಕೆಯ್ದಿ । ತಾ ಪೊಡಮಟ್ಟುಭವನಿಗೆ ೨೯

ಕಾಮನ ಗೆಲಿದ ಸೌಭದ್ರಮುನೀಶ[1]ನ[1] । ತಾಮರಸಾಂಘ್ರಿಯುಗಲಕೆ
ಪ್ರೇಮದೊಳೆರಗಿ ನನಗೆ ಒಂದು ವ್ರತವನು । [2]ಸ್ವಾಮಿ[2] ಪಾ[3]ಲಿಸ[3] ನೀಕುಯೆಂದ ೩೦

ದರುಶನ ಜ್ಞಾನ ಚಾರಿತ್ರ ಮುಂದಾಗಿರ್ದ । ಪರಿಪರಿ ವ್ರತಗಳನೀಯೆ
ಹರುಷದಿ ಕೈಕೊಂಡು ತನ್ನ ಮನೆಗೆ ಪೋಗಿ । ಇರುತಿರ್ದ ಜನ ಮೆಚ್ಚುವಂತೆ ೩೧

ಎಲ್ಲರು ಮೆಚ್ಚುವಂದದಿ ಬಹಿರಂಗದಿ । ತಲ್ಲಣಿಸುತ ಮನದೊಳಗೆ
ಖುಲ್ಲಮಾನಸ ಸಮ್ಯಕ್ತ್ವದ ಮಾರ್ಗವ । ಬಲ್ಲವನಂತಿರುತಿರ್ದ ೩೨

ಮೊದಲ ವೇಷವ ಬಿಟ್ಟು ಶ್ರಾವಕನಂತಿರ್ದು । ಹೃದಯದೊಳ್ ಕಪಟವ ಮಡಗಿ
ಸದಮಲ ವ್ರತದತಿಶಯ[ವ] ತಾನರಿಯದೆ । ಮುದಮುಖನಿರುತಿರ್ದನಿಂತು ೩೩

ವಿಮಲದಾಸ[ನ] ಗೃಹಕೆಯ್ದಿ ಮತ್ತವನೊಳು । ಮಮತೆಯಿಂದಲಿ ಸ್ನೇಹಮಾಡಿ
ಕ್ರಮದೊಳಿರ್ವರು ನಂದೀಶ್ವರನೋಂಪಿಯ । ಸಮತೆಯಿಂದಲಿ ಕೈಕೊಂಡು ೩೪

ನಂದೀಶ್ವ[4]ರದ[4] ನೋಂಪಿ[5]ಯ ಉ[5]ಪವಾಸವ । ಒಂದಾಗಿ ಮಾಡಿ ಪಾರಣೆಯ
ಚೆಂದದಿ ವಿಮಲದಾಸನು ಬುದ್ಧದಾಸಗೆ । ಒಂದಾಗಿ ಮಾಡಬೇಕೆಂದ ೩೫

ಪಾರಣೆಗಿರ್ವರು ಒಂದಾಗಿ ಕುಳಿತರು । ಸಾರಪಂಚಾಮೃತಗಳನು
ನಾರಿಯರ್ ತಂದು ಬಡಿಸಿದರು ಎಡೆಯೊಳು । ದುರುಳ ಕುಳಿತ ಬುದ್ಧದಾಸ ೩೬

ತಾನು ಎ[6]ಡೆಗೆ ಕೈ[6]ಯ ನೀಡದಿರಲು । ಕಂಡು ಮಾನಿ ವಿಮಲದಾಸ ಕೇಳ್ದ
ನೀನೇನು ಕಾರಣ ಎಡೆಗೆ ಕೈ [7]ನೀ[7]ಡದೆ । ಮೌನದೊಳಿರುವುದೇ[8]ನೆಂದ[8] ೩೭

ನಿನ್ನಯ ತನುಜಾತೆಯ ನನ್ನ ಸುತನಿಗೆ । ನನ್ನಿಯಿಂ[9]ದಿತ್ತೊ[9]ಡೆಯಾಗ
ನಿನ್ನೊಳಗೊಂದಾಗಿ ಭೋಜನ ಮಾಳ್ಪೆನು । ನನ್ನ ನುಡಿಯ ಲಾಲಿಸೆಂದ ೩೮

---

1 ಗೆ (ಕ) 2 ಸ್ವಾ (ಕ) 3 ಲಿ (ಕ) 4 ರ (ಕಚ) 5 ಯು (ಕ) 6 ಡಗ್ಗೈ (ಕ)
7 ಯಿ (ಕ) 8 ಕೆಂದು (ಕ) 9 ತ್ತೊ (ಕ)

ಸಮ್ಯಕ್ದೃಷ್ಟಿಗೆ ಕೊಡುವೆನು [1]ನೀನೇಕೆ[1] । ಸುಮ್ಮನೆ ಇರುವೆ ಭೋಜನವ
ಘುಮ್ಮನೆ ಮಾಡೆಂದು ವಿಮಲದಾಸನು । ಪೇಳೆ ಸಮ್ಮತವಾಗಿ ಮತ್ತವನು ೩೯

ಪಾರಣೆಯನು ಮಾಡಿ ಇರ್ವರು ಮಱುದಿನ । ಸಾರ[2]ಸು[2]ಲಗ್ನ ವೇಳೆಯೊಳು
ನಾರಿಯರೆಲ್ಲರು ಧವಳವ ಪಾಡಲು । ಭೋರೆಂಬ ವಾದ್ಯಘೋಷದೊಳು ೪೦

ಮನವೊಲಿದ್ವಿಮಲದಾಸನು ಬುದ್ಧದಾಸನ । ತನುಜಾತ ಬುದ್ಧ[3]ಸಂಘ[3]ನಿಗೆ
ಜನನು[4]ತೆ[4] ಪದ್ಮಶ್ರೀಯಗ್ನಿಸಾಕ್ಷಿಯೊಳ್ । ಜನದಱಿ[3]ಕೆಯೊಳ್ ಧಾ[5]ರೆ[5]ಯೆಱೆ[3]ದ ೪೧

ಬುದ್ಧದಾಸನು ಕೈಕೊಂಡ ವ್ರತವ[ನು] ಬಿಟ್ಟು । ಪೊದ್ದಿದ ಬುದ್ಧಸಮಯವಿ
ಇರ್ದನು ಬುದ್ಧಗುರುವಿನುಪದೇಶದಿ । ಪೊರ್ದಿದ ಕುಟಿಲಮಾ[6]ಯಕ[6]ನು ೪೨

ಹೆರೆಯ ಬಿಡಲು ಉರಗನ ದಂತದ ವಿಷ । ಹರಿವುದೆ ದುರ್ಜನರುಗ[ಳು][7]
ಹೊಱಗೆ ಜನಂಗಳ ಮೆಚ್ಚಿಪರಲ್ಲದೆ । ತೊರೆವರೆ ಮನದ ಕುಟಿಲವ ೪೩

ವಿಮಲದಾಸನು ಕಂಡನು ಬುದ್ಧದಾಸನ । ಕ್ರಮದಪ್ಪಿ ನಡೆವ ನಡತೆ[8]ಗೆ[8]
ಭ್ರಮೆ ಪು[9]ಟ್ಟಿ[9]ದಂತೆ ಬೆಱಗುವಟ್ಟು ಮನದೊಳು । ಸಮತೆ ತೊಲಗಿ ಮಱುಗಿದನು ೪೪

ಬಲ್ಲವರಾರು ಖುಲ್ಲರ ಮನದೊಳಗಿರ್ಪ । ಪೊಲ್ಲವೆಯನು ಧರೆಯೊ[10]ಳಗೆ[10]
ಕಲ್ಲು ಬಿದಿರು ಸೀಳಿ ನೋಡಬಹುದು ಗುಣ । ವಿಲ್ಲದವರ ಹೃದಯವನು ೪೫

ಮಿಥ್ಯಾದೃಷ್ಟಿಗೆ ಕೊಡ ಕೊಟ್ಟು [11]ನಾನೀ[11]ಗಲು । ನ್ಮತ್ತನಾದೆನುಯೆಂದು ಸುತೆಗೆ
ಅತ್ಯಂತ ಚಿಂತೆಯನೆಸಗಿದ ಕರ್ಮವ । ಮು[12]ತ್ಯಾ[12]ರು ಮಿಱುವರುಂಟೆ ೪೬

ವ್ರತಹೀನರ ಸಂಗದಿಂದಲುತ್ತಮರೆಲ್ಲ । ಗತಿಗೆಟ್ಟು ನರಕಕೆಯ್ದುವರು
ಮತಿಗೆಟ್ಟು ನಾನೀಗ ನಿ[13]ನ್ನ[13]ನಿಗಿತ್ತು । ವ್ರತಗೆಡಿಸಿ[14]ದೆ[14] ತನುಜಾತೆ ೪೭

ಬುದ್ಧದಾಸನು ಗೃಹದೊಳಗೆ [15]ಅನಾಚಾರ[15] । ಪೊರ್ದಲು ಪದ್ಮಶ್ರೀ ಕಂಡು
ಇರ್ದಳವರ ಗೃಹದೊಳು ಅನ್ನವೊಲ್ಲದೆ । ಸಾರ್ದಳು ತಂದೆಯ ಗೃಹಕೆ ೪೮

---

1 ನಿವ (ಕ) 2 ಶುಭ (ಗ) 3 ದಾಸ (ಕ) 4 ತ (ಕ) 5 ರೆಯ (ಗ) 6 ನಸ (ಗ)
7 ಳ (ಕಗ) 8 ಯ (ಕ) 9 ಟ್ಟ (ಕ) 10 ಮನದೊ (ಕ) 11 ತಾವೀ (ಕ)
12 ತ್ಯ್ರ (ಕ) 13 ನ್ನ (ಕ) 14 ದೆನು (ಕ) 15 ಆಚಾರವ (ಕ)

ಬುದ್ಧದಾಸನು ಮುನಿಗಳು ಕೊಟ್ಟ ವ್ರತವನು । ನಿರ್ಧರವಾಗಿ ನಡಸದೆ
ಪೊರ್ದಿದ ಬುದ್ಧಗುರುವಿನ ಸಮೀಪಕ್ಕೆ । ಸಾರ್ದು ಕೆಡಿಸಿದನು ವ್ರತವ ೪೯

ಪದ್ಮಶ್ರೀ ಚಿಂತೆಯೊಳಿರೆ ಬುದ್ಧದಾಸನು । ಸಾರ್ದು ತಾ ಪೇಳ್ದನಿಂತೆಂದು
ಪೊರ್ದದೆಯಿರು ನಮ್ಮ ಸಮ[1]ಯ[1] ನೀನೀಗ । ಇದ್ದಕೊ ನಿನ್ನ ನೇಮದೊಳು ೫೦

ಬೇರೊಂದು ಗೃಹದೊಳು ಬುದ್ಧಸಂಘನು ತಾನು । ಸೇರಿಸಿ ತನ್ನ ಸತಿಯನು
ನಾರಿಯು ವ್ರತವ ಧರಿಸಿಯಾಚಾರದಿ । ಸೇ[2]ರಿ[2]ಕೊಂಡಿರುತಿರ್ದ ಹಿತದಿ ೫೧

ಕುಂದದೆ ಗು[3]ರು[3] ಬುದ್ಧಸಂಘ ಸಂಪ್ರೀತಿಯೊಳ್ । ಬಂದು ಪದ್ಮಶ್ರೀಯ ಮನೆಗೆ
ಚೆಂದದಿಂ ತನ್ನ ಸಮ[4]ಯದ[4] ಆಚಾರವ ಇಂ । ತೆಂದು ಪೇಳಿದ ವಿನಯದೊಳು ೫೨

[5]ನ[5]ನ್ನಯ ಮತದೊಳಗಲ್ಲದೆ ಮು[6]ಕ್ತಿಯು[6] । ಅನ್ಯಮತದೊಳುಂಟೆ [7]ಮಗಳೆ[7]
ಚೆನ್ನಾಗಿ ನಮ್ಮ ಮತವ ನಂಬಿ ಇರ್ದೊಡೆ । ಕನ್ನೆ ಸದ್ಗತಿ ನಿನಗಹುದು ೫೩

ಅಱಿಯದವರು ಅಱಿಯರು ನಮ್ಮ ಸಮಯವ । ಅಱಿತರೆ ಹಲಸಿನ ಹಣ್ಣ
ಪರಿಯಂತೊಳಗೆ ಅಮೃತ[8]ವು[8] ಭಾವಿಸಿ ನೋಡೆ । ತರುಣಿ ನಂಬೆಲೆ ಬುದ್ಧಮತವ ೫೪

ಅಡಗ ತಿಂಬುವ ಮತದೊಳಗುಂಟೆ ಮು[9]ಕ್ತಿಯು[9] । ಕಡುಹೆಡ್ಡರಿದ ನಂಬಿ ನಡೆಯೆ
ಬಿಡದೆ ಭವಾಬ್ಧಿಯೊಳ್ ಬಿದ್ದು ಜನಂಗಳು । ಮಡಿದು ನರಕ[10]ವನೆ[10]ಯ್ದುವರು ೫೫

ಅರುಹನ ಮತದೊಳಲ್ಲದೆ ಮುಕ್ತಿಪಡೆವು[11]ದು[11] । ಪರಸಮಯದೊಳುಂಟೆ ಕೇಳು
ಧರೆಯೊಳು ನನ್ನಯ ಮತಕೆಣೆಯಿಲ್ಲೆಂದು । ತರುಣಿ ಪೇಳಲು ಪದ್ಮಸಂಘ ೫೬

ಈ ಪರಿಯಲಿ ಪಾಪಮಾರ್ಗವ ಪೇಳಲು ಕೇಳಿ । ಕೋಪದಿಂದಲಿ ತನ್ನ ಮನದಿ
ತಾ ಪೇಳಿದಳು ಪದ್ಮಸಂ[12]ಘಗೆ[12] ಪದ್ಮಶ್ರೀ । ಏಪೇಳ್ವೆ ಸನ್ಮಾರ್ಗದಿರವ ೫೭

[13]ಧ[13]ರ್ಮದಿಂದಲ್ಲದೆ ಸ್ವರ್ಗಮೋಕ್ಷಗಳಿಲ್ಲ । ಧರ್ಮಕೆ ದಯೆ ತಾನೆ ಬೀಜ
ನಿರ್ಮಲ ಶ್ರೀಜಿನಮತದೊಳಲ್ಲದೆ ಧರ್ಮ । ದುರ್ಮತದೊಳಗುಂಟೆ ದಯವು ೫೮

---

1 ವ (ಕ) 2 ರಿಸಿ (ಕ) 3 ರ (ಗ) 4 ಯ (ಕ) 5 ತ (ಕ) 6 ಕ್ತಿ (ಗ)
7 ಎಂದೂ (ಕ) 8 ವ (ಗ) 9 ಕ್ತಿ (ಗ) 10 ವೈ (ಕಚ) 11 ದ (ಗ)
12 ಗ (ಗ) 13 ಕ (ಕ)

ಮದ್ಯ ಮಾಂಸವ ತಿಂಬ ಜನರೆಲ್ಲ ಸ್ವರ್ಗಕ್ಕೆ । ಸದ್ಯ ಪೋದಡೆ ದಯದಿಂದ
ಇರ್ದವರೆಲ್ಲ ನರಕಕೆ ಪೋಗುವ ನುಡಿ । ನಿರ್ಧರವೆಂದೆನ್ನಬಹುದೆ ೫೯

ಮತ್ತಿಂತು ಪೇಳಿದ ಪದ್ಮಶ್ರೀವಚನಕ್ಕೆ । ಉತ್ತರವಿಲ್ಲದೆ ನಿಂದು
ಮತ್ತೆ ತಾ ಪದ್ಮಸಂಘನು ಪೋದ ಮಠಕಾಗಿ । ಇತ್ತ ಪದ್ಮಶ್ರೀ ಲೀಲೆಯೊಳು ೬೦

ಚಾಪಲಾಕ್ಷಿಯು ಪದ್ಮಶ್ರೀಯು ವಲ್ಲಭನೊಳು । ಪಪೊತ್ತು ಸುಖವಿರುತಿರಲು
ರೂಪುಸಂಪನ್ನಗೆ ಚಿಂತೆ ಸಂಭವಿಸುವ । ಪಾಪವಾರ್ತೆಯು ಬಂದುದಾಗ ೬೧

ಅತ್ತಲು ವಿಮಲದಾಸನು [1]ವ್ಯಾಧಿ[1]ಯಿಂದಲಿ । ಸತ್ತುಪೋಗಲು ಕೇಳಿ ಬಳಿಕ
ಚಿತ್ತದಿ ಪದ್ಮಶ್ರೀ ಚಿಂತೆಯಿಂದಳಲುತ್ತ । ಮತ್ತಿರುತಿರೆ ತನ್ನ ಗೃಹದಿ ೬೨

ತರುಣಿ ಪದ್ಮಶ್ರೀ ಚಿಂತಿಸುತಿರೆ ಅಲ್ಲಿಗೆ । ಗುರು ಪದ್ಮಸಂಘ ತಾ ಬಂದು
ಸರಸಿಜಮುಖಿಯ ದುಃಖಾಗ್ನಿ ನಂದಿಸಲೆಂದು । ಒರೆದನಧ್ರುವದ ಬಗೆಯನು ೬೩

ಸಿರಿ ಸಂಜೆಗೆಂಪು ಮಿಂಚಿನ ಮಾಲೆ ಮಂಜಿನ । ನೆರವಿ ಬೆಂಚೆಯ ನೀರು ಮತ್ತೆ
ಶರಧಿಯ ತೆರೆ ನೊರೆವಿಂಡು ಕಾಮನ ಬಿಲ್ಲು । ಸ್ಥಿರವಿಲ್ಲ ಈ ಕಾಯ ಮಗಳೇ ೬೪

ತಂದೆ ತಾಯಿಗಳಿಲ್ಲ ಬಂಧುಬಳಗವಿಲ್ಲ । ಕೊಂ[2]ಡು[2] ಅಂತಕನೊಯ್ವಾಗ
ಮುಂದೆ ಸ್ವರ್ಗಕೆ ನರಕಕೆ ಪೋಗುವಾಗಲು । ಹಿಂದೆ ಬರುವರಿಲ್ಲ ಮಗಳೇ ೬೫

ಎಲ್ಲ ಮಾನವರಿಗೆ ಸ್ಥಿರವಿಲ್ಲವೀ ಕಾಯ । ನಿಲ್ಲದು[3]ದೆಂ[3]ಬ ಧಾತ್ರಿಯೊಳು
ಫುಲ್ಲಾಕ್ಷಿ ಚಿಂತಿಸಬೇಡ ನಿನ್ನಯ ಪಿತ । ಸಲ್ಲದ ಗತಿಯ ಪಡೆದನು ೬೬

ಮಾನಿನೀಮಣಿ ನಿನ್ನ ಪಿತ ಸತ್ತು ಈಗಲು । ಏನ ಹೇಳುವೆ ಈ ಊರ
ಕಾನನದೊಳು ಪುಲ್ಲೆ ಬಸಿರೊಳಗೆ ಪುಟ್ಟಿದ । ನೀನು ಚಿಂತಿಸಬೇಡ ಅವಗೆ ೬೭

ನೀವೆಂತು ಕಂಡಿರಿ ನಮ್ಮ ಪಿತನು ಸತ್ತು । ಈವೂರಟವಿ ಪುಲ್ಲೆಯೊಳಗೆ
ತಾವುದಿಸಿದ ಪರಿಯನು ಪೇಳೆಂದೊಡೆ । ಸಾನುರಾಗದಿ ಪೇಳ್ದನಿಂತು ೬೮

---

[1] ವ್ಯಥೆ (ಕ) [2] ಜು (ಗ) [3] ದಿಂ (ಗ)

ಪದ್ಮಸಂಘನು ಕೋಪದಿಂದಲಿ ತಾನಾಗ । ಎದ್ದು ಶಿಷ್ಯ[1]ರು[1] ಸಹಿತಾಗಿ
ಸಾರ್ದು ಭೂಪಾಲನೊಳಿಂತೆಂದು ಪೇಳ್ದರು । ಗದ್ಗದಕಂಠದಿಂದಳುತ ೮೮

ಪಾತಕಿ ಪದ್ಮಶ್ರೀಯೆಸಗಿದನ್ಯಾಯವ । ಭೂತಳದೊಳು ಕಂಡುದಿಲ್ಲ
ಜಾತಿ[2]ಯು[2] ಕೆಡಿಸಿದಳು ಕೆರವ ತಿನಿಸಿ ನಮ್ಮ । ಪ್ರೀತಿಯಿಂದುಣಲಿಕ್ಕಿ ದುರುಳೆ ೮೯

ಅರಸನವರ ನುಡಿಗೇಳಿ ಕೋಪದಿ ಬೇಗ । ದುರುಳೆಯನೆಳತನ್ನಿಯೆಂ[3]ದು[3]
ಚರರನಟ್ಟಲು ಬಂದು ಪದ್ಮಶ್ರೀಯೊಡನಿಂತು । [4]ಒರೆದರು[4] ಬಿಡುನುಡಿಯಿಂದ ೯೦

ಗುರುಗಳಿಗುಣಲಿಕ್ಕಿ ಕೆರವ ತಿನಿಸಿದಂಥಾ । ದುರುಳೆ ಬಾರೆಂದು ಕರೆ[5]ಯಲು[5]
ಕೆರವ ತಿಂಬಾಗ ತಾವಱಿಯರೆ ಸವಿದುಂಡು । ವೊರೆಯಿಡುವುದು ನೀತಿಯಹುದೆ ೯೧

ಧರ್ಮಮಾಱಿರೊಳಗುಳ್ಳ ವಸ್ತುವ ಬ[6]ಲ್ಲವ[6]ರು । ಅಱಿಯರೆ ಆಗಲೋದಿದ
ಕೆರವಿನ ಬೆಲ್ಲಯೆಂಬುವನಱಿಯದೆ ತಿಂದ । ದುರುಳನ ನೃಪ ಮೆಚ್ಚಬಹುದೆ ೯೨

ನಮ್ಮಯ್ಯ ಸತ್ತು ಹುಲ್ಲಿನೊಳು ಪುಟ್ಟಿದನೆಂದು । ತಮ್ಮ ಜ್ಞಾನದೊಳು ಪುಟ್ಟಿ[7]ದೊಡೆ
ಸುಮ್ಮಾನದಿಂದ ಅವರು ಜ್ಞಾನವಿಲ್ಲದೆ । ತಮ್ಮ ಕೆರವ ತಿಂದರೀಗ ೯೩

ಜ್ಞಾನಹೀನರ ನುಡಿ[8]ಯನು[8] ಈಗ ಭೂಪಾ[9]ಲ[9] । ತಾನು ಮೆಚ್ಚುವರೆ ಈ ನುಡಿಯು
ಭೂನಾಥನೊಳು ಪೇಳೆಂದು ತಳಾರನೊಳು । ಮಾನಿನೀಮಣಿ ಪೇಳ್ದಳಾಗ ೯೪

ಚರ[10]ರೆ[10]ಯ್ದಿ ಪೇಳಲು ಕೇಳ್ದು ಭೂಪಾಲನು । ಒರೆದನು ಅವರೊಳಿಂತೆಂದು
ಗುರುಗಳು ಪೇಳ್ದುದು ಪುಸಿಯೊ ನಿಜವೋಯೆಂದು । ಅಱಿವೆನೆನುತ ಮಾಡಿದಳು ೯೫

ಜ್ಞಾನವಂತರು ನೀವು ಎಡೆಯೊ[11]ಳ[11]ಗಿರುತಿಹ । ಹೀನವಸ್ತುವ [12]ನ[12]ಱಿಯದೆ
ಸಾನುರಾಗದಿ ಉಂಬರೆ [13]ಎಂ[13]ದು ಭೂಪಾಲ । ಆನದೆ ಪೇ[14]ಳಿ[14] ಮತ್ತವರು ೯೬

ನಮ್ಮ ವ್ರತವ ಪಾಪಿ ಕೆಡಿಸಿದಳೆಂದೆ[15]ಲ್ಲ[15] । ಉಮ್ಮಳಿಸುತ ಪೇಳೆ ನೃಪಗೆ
ಘಮ್ಮನೆ ಆ ಪಾಪಿಯನೆಳತಂದೀಗ । ನಮ್ಮೂರ ದಾಟಿಸಿಯೆಂದ ೯೭

---

1 ರ (ಗ) 2 ಯುಮಾರ್ಗವ (ಗ) 3 ದ (ಕ) 4 ಒದರಿದರ್ (ಕ) 5 ದರು (ಕ)
6 ಲ್ಲ (ಕ) 7 ಟ್ಟ (ಕ) 8 ಯ (ಗ) 9 ಲಕ (ಕ) 10 ನೆ (ಕ) 11 ಳು (ಕ)
12 ನೀವ (ಕ) 13 ಯಂ (ಕ) 14 ಳಿ (ಕ) 15 ಂಬ (ಕ)

ಚರರೊಳು ಪೇಳ್ದ[1]ನು[1] ಲಂಡೆಯು ಪುರದಿಂದ । ಪೊಱಮಡಿಸಂದೆನಲಾಗ
ತ್ವರಿತದಿ ಬಂದು ತಳಾರರು ಪುರದಿಂದ । ತೆರಳಿಸಿದರು ಪದ್ಮಶ್ರೀಯ ೯೮

ಈ ತೆಱನನು ಕಂಡು ಪದ್ಮಸಂಘನು ತಾನು । ಜಾತಿಯುವರ ಬಿಟ್ಟು ಬಳಿಕ
ಪ್ರೀತಿಯಿಂದಲಿ ತಾನು [2]ಪ[2]ತ್ರಿಯು ಬೆಂಬಳಿಯೊಳು । ತಾ ತಳುವದೆ ಪೊಱಮಟ್ಟು ೯೯

ಇಂದು ಸತಿಯು ಹಿಂದೆ ಬುದ್ಧಸಂಘನು ಪೋದ । ನೆಂದು ಪೇಳಲು ಬುದ್ಧದಾಸ
ಕಂದಿ ಮನವು ಗೃಹದಿಂದಲು ಪೊಱಮಟ್ಟು । ಬಂದಿಂತು ಪೇಳ್ದ[3]ನು[3] ಸುತಗೆ ೧೦೦

ಕಂದ ನೀನವಳ ಬೆಂಬಳಿಯೊಳು ಪೋಗದೆ । ಬಂದಿರು ನಮ್ಮ ಮನೆಯೊಳು
ತಂದು ನಿನಗೆ ಒಂದು ಹೆಣ್ಣನು [4]ಶ್ರೀಘ್ರದಿ[4] । ಬಂಧುಗಳೊಳು [5]ಈಗ[5] ನಾನು ೧೦೧

ಅತಿರೂಪವತಿಯನು ರತಿಯ ಸೋಲಿಪ ಚೆಲ್ವ । ಮತಿವಂತೆಯನು ತಂದು ನಿನಗೆ
ಅತಿಪ್ರೀತಿಯಿಂದ ಮದುವೆನಾಡುವೆನೆಂದು । ಪಿತನು ಪೇಳಲು ಕೇ[6]ಳ[6]ದವನು ೧೦೨

ಏಣಾಕ್ಷಿಯೊಡನಲ್ಲದೆ ಇ[7]ರುವವ[7]ನಲ್ಲ । ಪ್ರಾಣಹೋದರು ಬಿಡೆನೆಂದು
ಉಣ್ಣಿಸಿದ ತಂದೆಯು ಪಾತನು ವಿನಾ[8]ಜಿ[9] ತಾ[8] । ಮುಂದಕ್ಕೆ ನಡೆದ ಮಾತ್ರ[9]ವನು ೧೦೩

ಪುರವನು ಪೊಱಮಟ್ಟು ಸತಿಪುರುಷ[10]ರು[10] ತಾವು । ಬರುತಿರೆ ತಂದೆ ತಾ ಸುತಗೆ
ಹರುಷದಿ ಸಾಹಸ್ರ ಹೊನ್ನಗಳನಿತ್ತನು । ತೆರಳಿದರು ಪಥವಿಡಿದಾಗ ೧೦೪

ಪಱದೇಶದಿಂದ ಈಶ್ವರದತ್ತ ಇ[11]ಭ[11]ದತ್ತ । ಪರದುಗೆಯ್ಯಲಾಯೆಂದೆನುತ
ಹರುಷದಿ ಈರ್ವ[12]ರು[12] ಪುರದ ಸಮಿಾಪದಿ । ಇರುತಿರೆ ಬೀಡಿನೊಳವರು ೧೦೫

ಆಗಲಾ ಬೀಡಿಗೆ ಪದ್ಮ[13]ಸಂಘನು[13]ಸಹ । ಸಾಗಿಬಂದರು ಬೀಡಿನೆಡೆಗೆ
ಬೇಗದಿ ಇ[14]ಭ[14]ದತ್ತ ಕಂಡು ನಿಲಿಸಿದನು । ರಾಗದಿಂದಲಿ ದಂಪತಿಗಳ ೧೦೬

ತನ್ನನುಜೆಯು ಕಂಡಂತೆ ಪದ್ಮ[15]ಶ್ರೀ[15]ಯು । ಚೆನ್ನಾಗಿ ಭಾವಿಸುತಿದು
ಮನ್ನಣೆ ಬುದ್ಧಸಂಘಗೆ ಸನ್ಮಾನದಿ । ಭಿನ್ನವಿಲ್ಲದೆ ಇರುತಿರ್ದ ೧೦೭

---

[1] ದು (ಕ) [2] ಸವ (ಗ) [3] ಳು (ಕ) [4] ತಂದು (ಕ) [5] ತಂದು (ಗ) [6] ಳ (ಗ)
[7] ರು (ಕ) [8] ಜಿ (ಗ) [9] ತ್ರ (ಚ) [10] ರ (ಗ) [11] ಭ (ಕ) [12] ರುರ್ವರು (ಕ)
[13] ಶ್ರೀಪತಿ (ಗ) [14] ಭು (ಕ) [15] ಯು (ಕಚ)

ಬಂದು[1]ಮೇಲಿರಿಸಿ ಈ ಜಾರ[1] ಕೊಬ್ಬಿದಳೆಂದು । ಖಂಡವ ಕೊಯ್ದುಪ್ಪಿನೊಳಗೆ
ಹಿಂಡಿಸಿ ತಿನಿಸಿ ತಲೆಗಡಿವೆನೆನುತ ಪಾಪಿ । ಖಂಡೆಯ ಜಳಪಿಸುತಲಿರ್ದ ೧೧೮

ಹಸಿದ ಹೆಬ್ಬುಲಿಯು ನಂಬಲು[2]ಹು[2]ದಿಗಲು । ಬಿಸವನಗುಳ್ವ ಕಾಳಗನ
ವಶಮಾಡಬಹುದು ಮಾಯದ ಪುಂಜವೆನಿಸಿದ । ಶಶಿಮುಖಿಯರ ನಚ್ಚಬಹುದೆ ೧೧೯

ಹೀರನ[3] ಮಂಡೆಯನೀಜಿ[3] ಧರೆಯೊಳು ಭಿಕ್ಷೆಯ । ತಿರಿದುಂಡಿಸಿದ ಪಾತಕಿಯರು
ಸ್ಮರಗೆ ಕಾಂಚನಮಾಲೆಯೆನಿಸುತ್ತಿ ಇಂದ್ರಗೆ । ಕರೆಯ ಚಾಕಂಗಮ್ಯತಮತಿಯು ೧೨೦

ಈಪರಿ ಮಾ[4]ಯಂ[4] ಮಾಡುವ ಸತಿಯರ । ರೂಪು ವಿಲಾಸವ ನೋಡಿ
ಕಾಪುರುಷರು ಮೆಚ್ಚಿ ಕೆಡುವರು ಎಂದಾಗ । ಚಾಪಲಾಕ್ಷಿಯ ನಿಂದಿಸಿದನು ೧೨೧

ಈಪರಿ ಬಂದುದು ನಾ ಮುನ್ನ[5]ಲಿಸಗಿ[5]ದ । ಪಾಪದ ಫಲವಿದುವೆಂದು
ಕೋಪರಹಿತ ಜಿನದೇವನೆ ಶರಣೆಂದು । ಸ್ಥಾಪಿಸಿದಳು ಮನದೊಳಗೆ ೧೨೨

ನನಗೆ ಈ ಭವದೊಳು ಬುದ್ಧಸಂಘನೆ ಪತಿ । ಜಿನದೇವನೇ ದೇವನೆಂದು
ಘನಶೀಲವತಿ ಪಂಚಪದಗಳ ತನ್ನಯ । ಮನದಿ ಭಾವಿಸುತಿರ್ದಳಾಗ ೧೨೩

ಈಗ ನನಗೆ ಬಂದ ಉಪಸರ್ಗ ಪರಿಹರ । ವಾಗುವ ಪರಿಯಂತರವು
ಆಗದು ಚತುರ್ವಿ[6]ಧಾಹಾರ[6]ನಿವೃತ್ತಿಯೆಂದು । ರಾಗದಿ ಕೈಕೊಂಡ[7]ಳೆಂ[7]ದು ೧೨೪

ಮನದೊಳೀ ಉಪಸರ್ಗ ಹಿಂಗಿದಾಕ್ಷಣ ನಾನು । ಜಿನದೀಕ್ಷೆಗೊಂಬೆನೆಂದೆನುತ
ಮನದಿ ಭಾವಿಸುತಿರೆ ಬುದ್ಧದಾಸನು ತಾನು । ಘನಕೋಪದೊ[8]ಳು ಒದರಿ[8]ದನು ೧೨೫

ದುರ್ಜನ ಸಂಸರ್ಗದಿಂದಲಿ ಧರೆಯೊಳು । ಸಜ್ಜನರು ಕೆಡದೆ ಬಾಳುವರೆ
ನಿರ್ಜರಪತಿ ವಂದ್ಯಜಿನರ ಭಜಿ[9]ಸೆ[9] ಕರ್ಮ । ಜರ್ಜರವಾದಿ ಪೋಗುವುದು ೧೨೬

ಕುಂದದೆ ಪದ್ಮ[10]ಶ್ರೀಯು[10] ದೃಢವ ಕಂ[11]ಡು[11] । ಬಂದು ನಗರದೇವತೆಯರು
ತಂದುಮವನು ಕೊರಳೊಳಗಿಟ್ಟು ಅಸಿಯನು । ಮಂ[12]ದಾ[12]ರಮಾಲೆ ಮಾಡಿದರು ೧೨೭

---

1 ದು ಮೇಲಿಟ್ಟು ಬಾಲೆ (ಕಚ) 2 ಹುದಂ (ಗ) 3 ರಯಂ (ಕ) 4 ಯಂ (ಗ) 5 ಪಾಡಿ (ಗ)
6 ಧ (ಕ) 7 ಳಂ (ಕ) 8 ಳಾವರಿಸಿ (ಕ) 9 ಸಿ (ಕ) (ಚ) 10 ಶ್ರೀ (ಕ)
11 ಡಾಗಲಂ (ಚಕ) 12 ದ (ಕ)

ಈಪರಿ ನಗರದೇವತೆಯು[1]ರು[1] ನೆರೆದೆಲ್ಲ । ಕೋಪಿಸಿ ಪರದನ ಮೇಲೆ
ಚಾಪಲಾಕ್ಷಿಯು ಪತಿ ವಿಷವೇರಿ ಬಿದ್ದರೆ । [2]ತಾಪವ[2] ಪರಿಹರಿಸಿದ[3]ರು[3] ೧೨೮

ಪರದರ ವಿ[4]ಷವ[4] ನಿರ್ವಿಷ ಮಾಡಿ ಎಬ್ಬಿಸಿ । ಪುಳಕೆಯ್ದಿಸಿ ಸರ್ವಜನರ
ಹರುಷದಿ ಪದ್ಮಶ್ರೀಯ ಕೊಂಡಾಡಲು । ಪುರವೆಲ್ಲ ನಲಿದುನೋಳ್ಪಂತೆ ೧೨೯

ವಿರಚಿಸಿ ನವರತ್ನಮಂಟಪಮಧ್ಯದಿ । ಹರಿಪೀಠದೊಳು ಪದ್ಮಶ್ರೀಯ
ಕರೆದು ಕುಳ್ಳಿರಿಸಿ ವಸ್ತ್ರಾಭರಣವನಿಟ್ಟು । ಸುರಿದರು ಪುಷ್ಪವೃಷ್ಟಿಯನು ೧೩೦

ಆ ಸಮಯದಿ ಅಂಬರದಿಂದ ಸುರರೆಲ್ಲ । ಲೇಸಾಗಿ ಪೂವಿನ ಮಳೆಯ
ಓಸರಿಸದೆ ಕರೆಯಲು ಪುರಜನರೆಲ್ಲ । ಆ ಶಶಿಮುಖಿಯ ನೋಡಿದರು ೧೩೧

ಈ ಪರಿಯನು ಬಂದು ಕಂಡು ಭೂಪಾಲನು । ರೂಪುಸಂಪನ್ನೆಯ ಪೊಗಳಿ
ಚಾಪಲಾಕ್ಷಿಯ ವಸ್ತ್ರಾಭರಣದಿಂ ಪೂಜಿಸಿ । ಭೂಪ ಕೊಂಡಾಡಿದನಾಗ ೧೩೨

ಇಂತು ನಗರದೇವತೆಯರು ಪೂಜಿಸಿ ಪೋಗೆ । ಸಂತೋಷದಿಂ ಭವ್ಯಜನರು
ಚಿಂತೆಯ ಬಿಟ್ಟು ಭೂಪಾಲನು ಸಹ ಬಂದು । ಇಂತೆಣೆಸುತಲಿರ್ದ[5]ರಾ[5]ಗ ೧೩೩

ಜಿನಧರ್ಮವನು ನಂಬಿ ಪದ್ಮಶ್ರೀ ಈಪರಿ । ಘನಪುಣ್ಯ ಪಡೆದಳೆಂದೆಲ್ಲ
ಮನದೊಳು ಸಮ್ಯಕ್ತ್ವ ಜನಿಸಿ ತಾವೆಲ್ಲರು । ಜಿನದೀಕ್ಷೆಗೆನುಕೂಲ[6]ರಾಗಿ[6] ೧೩೪

ತುಂಗವಿಕ್ರ[7]ಮ[7] ದಾಡಿವಾಹನ ನೃಪ ತನ್ನ । ಅಂಗಭವಗೆ ಪಟ್ಟಗಟ್ಟಿ
ಸಂಗಡ ಸಾವಿರ ನೃಪರು ಭವ್ಯರುಸಹ । ಹಿಂಗದೆ ಬಸದಿಗೆ ಬಂದು ೧೩೫

ಜ್ಞಾನಸಾಗರ ಮುನಿಗಳ ಕೈಯ ದೀಕ್ಷೆಯ । ಸಾನುರಾಗದೊಳು ಕೈಕೊಂಡು
ಭೂನುತ ತಪದೊಳು ನೆಗಳುತ್ತ ಕರ್ಮವ । ಹಾನಿಯ ಮಾಡಿ ಅಂತ್ಯದೊಳು ೧೩೬

ಎಲ್ಲರು ತಪದೊಳು ನೆಗಳಿ ತನುವ ಬಿಟ್ಟು । ಉಲ್ಲಾಸದಿಂದೈಯ್ದಿ ದಿವಸ
ನಲ್ಲಳೊಡನೆ ಕೂಡಿ ಸುಖದೊಳಿರ್ದರು ಮತ್ತೆ । ಭೂವನರಸಿ ಪದ್ಮಾವತಿಯು ೧೩೭

---

[1] ರ (ಕ) [2] ತಾ (ಕ) [3] ರೆಂದು (ಕ) [4] ಷ (ಕ) [5] ನಾ (ಕ) [6] ವಾದೆ (ಕಚ)
[7] ಮಂ (ಗ)

ಆ ಸಮಯದಿ ಪದ್ಮಶ್ರೀ ಪುರದೊ[1]ಳಗು[1]ಳ್ಳ । ಸಾಸಿರರಸಿಯರು ಬರಲು
ಓಸರಿಸದೆ ಧರ್ಮಕಂತಿಕೆಯರ ಕೈಯ । ಲೇಸಾಗಿ ಧರಿಸಿ ದೀಕ್ಷೆಯನು ೧೩೮

ಈ ಪರಿಯಲಿ ತಪಮಾಡಿ ಕರ್ಮವನೆಲ್ಲ । ಲೋಪವ ಮಾಡಿ ಅಂತ್ಯದೊಳು
ಐಪೇಳ್ವ ತಮ್ಮಯ ತಪದ ಸಾಮರ್ಥ್ಯದಿ । ಓಪರಾದರು ಸ್ವರ್ಗಸುಖಕೆ ೧೩೯

ಇಂತಿದ ಕಣ್ಣಾ[2]ರೆ ನಾ[2]ಕಂಡು ಸಮ್ಯಕ್ತ್ವ । ಅಂತರಂಗದಿ ಪುಟ್ಟಿತೆಂದು
ಕಾಂತನೊಡನೆ [3]ಪದ್ಮಲತೆ ಪೇಳ್[3] ಹರುಷದಿ । ಕಾಂತೆಯರಿಚ್ಛಾಮಿಯೆನಲು ೧೪೦

ಸಚ್ಚರಿತ್ರದ ಕುಂದಲತೆಯಿಂ[4]ತು ನುಡಿದ[4]ಳು । ಹುಚ್ಚರಾಡಿದ ಮಿಥ್ಯಕತೆಗೆ
ಮೆಚ್ಚುವಳಲ್ಲಯಿಾ ಮಾತನು ನಿಜವೆಂದು । ಹುಚ್ಚರು ಮೆಚ್ಚುವರೈಸೆ ೧೪೧

ಈ ನುಡಿಯನು ಕೇಳಿ ಅರಸು ಮಂತ್ರೀಶನು । ಸಾನುರಾಗದಿ ಆ ನಾರಿ
ತಾನು ಕಂಡುದನಾಡಲು ಇದು ಪುಸಿಯೆಂಬ । ಹೀನತೊತ್ತನು ಅರ್ಕೋದಯಕೆ ೧೪೨

ಮತ್ತೆ ಅವಳ ಹಿಡಿತಂದೀಗ ಅಗಸರ । ಕತ್ತೆಯ ಮೇಲಿಟ್ಟು ಪುರದ
ಸುತ್ತ ಮೆರೆಸಿ ಊರ ಪೊರಮಾಡಿಸುವೆನೆಂದು । ಚಿತ್ತದಿ ಇಂತೆಣಿಸಿದರು ೧೪೩

ಮಠದ ಮೇಗಣ ಕಳ್ಳ ಇಂ[5]ತೆಣಿಸುತಲಿ[5]ರ್ದ । ಕುರು[6]ಡಂ[6]ಗೆ ಕನ್ನಡಿ ಹಿತವೆ
ದುರುಳರು ಸಜ್ಜನರ್ನುಡಿಗೇಕೆ ಮೆಚ್ಚರುಯೆಂದು । ಸ್ಮರಿಸುತಿರ್ದ[7]ನು
ಮನದೊಳಗೆ ೧೪೪

ಪರಮಶಿರೋಮಣಿ ಪಾವನಚರಿತನು । ಸಕಲಜನಸುಖತೇಜಯುತನು
ಪರಮಾನ ಪಾದಸರೋರುಹ ಭೃಂಗನು । ಅರುಹದ್ದಾಸನೊಪ್ಪಿದನು ೧೪೫

ಇದು ಭವ್ಯಜನ ಚಿತ್ತಕುವಲಯಚಂದ್ರ[8]ಮ[8] । ತ್ತಿದು ಸಜ್ಜನರ ಕರ್ಣಾಭರಣ
ಇದು ಸಮ್ಯಕ್ತ್ವ[9]ವ[9] ಪುಟ್ಟಿಪ ವಿತರಣ ಮ । ತ್ತಿದು ಕೇಳ್ದ[10]ವರ[10] ಪಾಪಹರಣ ೧೪೬

ಇದ ಬರೆದೋದಿ ಕೇಳ್[11]ದ[11]ರಿಗೆ ಆರೋಗ್ಯ ಮ । ತ್ತಿದ ಕೇಳ್ದರಿಗೆ ಸೌಭಾಗ್ಯ
ಇದ ಚಿತ್ತದೊಳು ನೆಲೆಗೊಳಿಸೆ ಸ್ವರ್ಗಕೆ ಯೋಗ್ಯ । ಇದು ಮುಕ್ತಿಸತಿಯ
ಸೌಭಾಗ್ಯ ೧೪೭

---

1 ಳಂ (ಜ) 2 ರೆ (ಕ) 3 ಪೇಳೆ ಪದ್ಮವತಿ ತಾನಂ (ಕ) 4 ತೆಂದಳಂ (ಗ) 5 ಹಾಭಾವಿಸಂತಿ (ಗ)
6 ಡ (ಗ) 7 ನಮಕಂ (ಕ) 8 ಮಂಮ (ಕ) 9 ವ (ಕ) 10 ರ (ಕ) 11 ದವ (ಜ)

# ಹನ್ನೆರಡನೆಯ ಸಂಧಿ

ಸುರನರೋರಗ [ಪತಿ] ವಂದಿತಚರಣಾಬ್ಜ । ಪರಮಪಾವನ ಮುಕ್ತಿಯರಸ
ಕರುಣಾಸಾಗರಚಂದ್ರಮ ಸುಪಾರ್ಶ್ವೇಶ । ಶರಣು ಶರಣು ಜಗದೀಶ ೧

ಪರದಶಿರೋಮಣಿ ಅರುಹದ್ದಾಸನು ತನ್ನ । ತರುಣಿಯರನು ಕೇಳ್ದಿಂತು
ದರುಶನ[1]ಶುದ್ಧಿ[1]ಯು ನಿಮಗಾದ ಪರಿಯನು । ಒಲಿಯೊಂದು ಕೇಳೆ ಪೇಳಿದ[2][ಳು][2] ೨

ಸರಸಿಜಮುಖಿ ವಿದ್ಯುಲ್ಲತೆ ಭಕ್ತಿಯೊಳು । ಕರಗಳ [3]ಜೋಡಿಸಿ ನಿಂ[3]ದು
ಪುರುಷನೊಳು ತನಗೆ ಸಮ್ಯಕ್ತ್ವ ಸಂಜನಿಸಿದ । ಪರಿಯ ಪೇಳಿದಳಿಂತೆಂದು ೩

ಧರೆಯೊಳಧಿಕವಾದ ಕೌಶಂಬೀಪುರದೊಳು । ಅರಸು ಸುದಂಡನೆಂಬವಗೆ
ವರಸತಿ ವಿಜ[4]ಯೆಯೆಂ[4]ಬಳುಗೂಡಿ ಸುಖದೊಳು । ಇರುತಿರಲಾ ಭೂಪತಿಗೆ ೪

ಧರೆಯೊಳಪ್ರತಿಮ ಸುಬುದ್ಧಿಯೆಂದೆನಿಸುವ । ವರಮಂತ್ರಿಗೂಡಿರುತಿಹನು
ಇರುತಿಹನಾ ಪುರದೊಳು ವೈಶ್ಯಕುಲದೊಳು । ಪರನ ಸುರದೇವನೆಂಬವನು ೫

ಒಂದು ದಿವಸ ಸುರದೇವನು ಬಸದಿಗೆ । ಬಂದು ಜಿನೇಂದ್ರನಿಗೆರಗಿ
ಚೆಂದದಿ ಮುನಿಗಳಿಗೊಂದಿಸಿ ಪೂಜೆಮಾಟ್ಟು । ಮುಂದೊಂದು ಕಾರ್ಯವ ನೆನೆದ ೬

ಭಂಗುರದೇಶಕ್ಕೆ ಪೋಗಿ ಜಾತ್ಯಶ್ವವ । ಹಿಂಗದೆ ತಂದಿತ್ತು ನೃಪಗೆ
ಪೊಂಗಳ ಘನವಾಗಿ ಪಡೆವೆನೆನುತ ಪೋಪ । ಸಂಗಡವನು ಒಡಗೂಡಿ ೭

ಪುರವ[5]ನು[5] ಪೂಜೆಮಾಟ್ಟು ಭಂಗುರದ್ವೀಪಕ್ಕೆ । ತ್ವರಿತದಿ ಪೋಗಿ ಅಲ್ಲಿರ್ದ
ತುರಗವ ತಂದು ಸುದಂಡ ಭೂಪಾಲಗೆ । ಹರುಷದಿ ಕೊಟ್ಟನಾ ಪರದ ೮

---

[1] ಸುಧೆ (ಕ) [2] ನು (ಕಗಚ) [3] ಮುಗಿದಿಂತೆಂ (ಗ) [4] ಯಂ (ಕ) [5] ನ (ಕ)

ಖ್ಯಾತ್ಯಶ್ವವ ತ[1]ಂದಿತ್ತನೆಂದೆ[1]ನುತಲಿ । ಅತ್ಯಂತ ಪ್ರೀತಿಯೊಳವಗೆ
ನಿತ್ಯಸುಖದೊಳಿರುವಂತೆ ಭೂಪಾಲನು । ಇತ್ತನು ಹೊನ್ನ ಲಕ್ಷವನು ೯

ಪುಣ್ಯದಿಂದಲಿ ದ್ರವ್ಯ ಸಂಗಡಿಸುವುದೀಗ । ಪುಣ್ಯಕಾರಣ ಪರದರಿಗೆ
ಪುಣ್ಯವಂತರು ಧರ್ಮಕೃತ್ಯವ ಮಾಳ್ಪರು । ಪುಣ್ಯದ ಫಲವನೇನೆಂಬೆ ೧೦

ದಾನ ಪೂಜೆಯೊಳಿವನಲ್ಲದೆ ಪರರುಂಟೆ । ಮಾನವಲೋಕದೊಳೆಂದು
ಸಾನುರಾಗದಿ [2]ಸರ್ವ[2]ಜನರು ಕೊಂಡಾಡಲು । ಮಾನವಮದನನೊಪ್ಪಿಹನು ೧೧

ಒಂದುದಿವಸ ಸುರದೇವನು ಮನದೊಳು । ಸಂದ ಸಮ್ಯಕ್ತ್ವಭಕ್ತಿಯೊಳು
[3]ಇ[3]ಂದು ಮುನೀಂದ್ರರಿಗಾಹಾರ ಕೊಡಬೇ[4]ಕು । ಯೆಂ[4]ದು ಪ್ರೀತಿಯೊಳಿರುತಿರ್ದ ೧೨

ಹರುಷದಿಂದಲಿ ಸುರದೇವನು ಮುನಿಗಳ । ಬರವ ನೋಡುತ ಬೀ[5]ದಿಯೊ[5]ಳಗೆ
ಕರದೊಳಗಷ್ಟವಿಧಾರ್ಚನೆಗಳನಾಂತು । ಇರುತಿರಲಾ ಸಮಯದೊಳು ೧೩

ಚಂದ್ರಕೀರ್ತಿಗಳೆಂಬ ಮುನಿಗಳು ತಾ ಬಂದು । ಚಾಂದ್ರಾಯಣದ ನೋಂಪಿಯನು
ಕುಂದದೆ ಮಾಡಿ ಪಾರಣೆ[6]ಗೆ ಐ[6]ನೂರ್ವರು । ಒಂದಾಗಿ ಬರುತಿರೆ ಕಂಡು ೧೪

ಶರಧೀಶ ಶಾಂತನ ಕಂಡಂತೆ ಅ[7]ಂಬುಜ[7] । ಕರಕಿರಣನ ಆನೆಮಲೆಯು ?
ಹರುಷದಿ ಕಂಡಂತೆ [8]ತನ್ನ[8] ನೇತ್ರೋತ್ಪಲ । ಸುರಿದವಾನಂದಭಾಷ್ಪಗಳ ೧೫

ಸಾರಸಂಪೂರ್ಣ ಸಮ್ಯಕ್ತ್ವವುಳಿತಿಗಳು । ಮೂಜು ಮೂಢಗಳೆಂಟು ಮದವ
ಆರನಾಯತ ಸೇವೆಗಳೆಂಟುಶಂಕೆಯು । ದೂರಿಸಿ ತಪದೊಳು ಪರ್ತಿಪರು ೧೬

ನಾಲ್ಕು ಕಷಾಯ ಸಾ[9]ವದ್ಯವ[9] ಬಿಟ್ಟರು । ಕಾಕುವ್ಯಸನವೇಳ ತೊಜ[3]ದು
ಜೋಕೆಯಿಂ ದ್ವಾದಶ ಪ್ರೇಕ್ಷೆಯ ಭಾವಿಪ । ಲೋಕವಿಖ್ಯಾತರೆಯ್ದಿದರು ೧೭

ಹದಿಮೂಜು ತೆಱದ ಚಾರಿತ್ರದೊಳು ನೆಗಳ್ದರು । ವಿದಿತಜ್ಞಾ[10]ನಾ[10]ಭಿಚಂದ್ರಮರು
ಹೃದಯದೊಳು ಪರಮಾತ್ಮ ಧ್ಯಾನಸಂಪನ್ನರು । ಒದದಿಬಂದರು ಚಂದ್ರನಂತೆ ೧೮

---

[1] ದನೆನು (ಕ) ದಿತ್ತನೆನು (ಗ) [2] ಸ್ವರ್ಗ (ಕ) [3] ನಿ (ಕ) [4] ಕೆಂ (ಗ) [5] ಡನೊ (ಕ)
[6] ದೈ (ಕ) [7] ಬು (ಗ) [8] ಕೃನ (ಕ) [9] ಕಪ್ಯದ (ಗ) [10] ತಿ (ಕ)

ತಪದ ಕಾರಣವಾಗಿ ತನುವಿರಬೇಕೆಂದು । ವಪುವಲಘುವನಾಂತು ಬಳಿಕ
ಚಪಲಗತಿಯು ಬಿಟ್ಟು ಮೆಲ್ಲನೆ ಪ್ರಾಣಿಗಳು । ವಪು ಕೆಡದಂತೆಯಿದ್ದರು ೧೯

ಜಪ ತಪ ಶ್ರುತ ಧ್ಯಾನಂಗಳು । ವಪುವಿನಾಧಾರವಂತದಕೆ
ವಪುವಿಗೆ ನಿರಶನವನಿತ್ತರೆ ಧ್ಯಾನ । ಚಪಲವಾಗದು ಇದು ನಿರುತ ೨೦

ಶಾಸ್ತ್ರದಿಂದಲಿ ಜ್ಞಾನ ಜ್ಞಾನದಿಂದಲಿ ತಪ । [1]ಸ್ವಾ[1]ನ ಧ್ಯಾನದಿಂದಲಿ ಜಪವು
ವಿಸರ ಸದ್ಗತಿ ಕಾರಣ ತನುವಿರಬೇಕು । ಪ್ರಶಸ್ತವೆಂಬರು ಬುಧಜನರು ? ೨೧

ಜಲವಿಲ್ಲದ ಬೆಳೆ ಜೀತವಿಲ್ಲದ ಭಟ । ಫಲವ ಪಡೆಯದ ಭೂರುಹವು
ಸುಲಲಿತ ದಯವಿಲ್ಲದ ತಪ ಆಹಾರ । ಬಲುಹುಗುಂದಿದ ತನು ಲಯವು ೨೨

ಮುಂದೆ ನಾಲ್ಕು ಹಸ್ತಪಥವ ನಿರೀಕ್ಷಿಸಿ । ನೊಂದು ಪ್ರಾಣಿಗಳು ಕೆಡದಂತೆ
ಚಂದ್ರಗತಿಯೊಳು ಬರುತಿರ್ದರು ನಕ್ಷತ್ರ । ವೃಂದಮಧ್ಯದ ಚಂದ್ರನಂತೆ ೨೩

ರಾಜಬೀದಿಯೊಳು ಬರುತಿರ್ದ ಯತಿಗಳನು । ರಾಜಶ್ರೇಷ್ಠಿಯು ಸುಕದೇವ
ರಾಜಿಪ ಅಷ್ಟವಿಧಾರ್ಚನೆ ಪಿಡಿದಿರ್ದು । ಓಜೆಯಿಂ ಬಲಗೊಂಡು ಬಳಿಕ ೨೪

ತನ್ನ ಮನೆಗೆ ಯತಿಗಳನೊಯ್ದು ಪರುಷದಿ । ಮು[2]ನ್ನ[2] ಸ್ಥಾಪನವಾದೀ ಕ್ರಮವ
ಭಿನ್ನವಿಲ್ಲದೆ ನವವಿಧಪುಣ್ಯಗಳ ಸಂ । ಪನ್ನ ಮಾಡಿದ ಕ್ರಮುವ[3]ತು[3] ೨೫

ಸ್ಥಾಪನುಚ್ಚ[4]ಸ್ಥಾನ ಪಾದೋದಕ ಪೂಜೆ । ವಿಪೇಳ್ವ ವಂದನೆವೆರಸು
ಕೋಪವರ್ಜಿತ ತ್ರಿಕರಣ ವಿಷಣಶುದ್ಧಿ । ಲೋಪವಿಲ್ಲದೆ ನಡೆಸಿದನು ೨೬

ಆ ವೇಳೆಯೊಳು ಅನರ್ಥದಂಡಾಯುತ । ಜೀವಬಂಧನ ಪಾಪಕೃತ್ಯ
ಪಾವನ ಶೃಂಗಾರ[5]ಮೋ[5]ಹ ವಚನಗಳ । ಭಾವಶುದ್ಧದಿ ತೊಲಗಿಸಿದ ೨೭

ಶ್ರದ್ಧೆ ಶಕ್ತಿ ಯುಕ್ತಿ ಕ್ಷಮೆ ದಯೆ ಲುಬ್ಧತೆ । ನಿರ್ಧರ ಭಕ್ತಿ ಸಮೆ ಕಾ
ಉದ್ಧತನವವಿಧ ಪುಣ್ಯಗುಣಗಳೇಳ । ಪದ್ಧತಿಯನು ನಡೆಸಿದನು ೨೮

---

[1] ಸ್ಥಾ (ಕ) [2] ಂದೆ (ಕ) [3] ದಂ (ಕ) [4] ಚೈ (ಕ) ಚ (ಗ) [5] ವ (ಕಚ)

ಇಂತೀ ಕ್ರಮದಿಂದ ಮುನಿಗೆ ಭಕ್ತಿಯ । ಸಂತೋಷದಿಂದಲಿ ಪೇಳ್[1]
ಅಂತವಿಲ್ಲದೆ ಮುನಿಹಸ್ತದಿ ಅನ್ನವ । ಕಂತುಸನ್ನಿಭನಿತ್ತನಾಗ ೨೯

ಭಿಕ್ಷವ ಕೊಂಡು ಮುಮುಕ್ಷು ಕೈತೊಳೆದು ತಾ । ಅಕ್ಷಯಫಲಮಸ್ತುಯೆನಲು
ಆ ಕ್ಷಣದೊಳು ಮುನಿಪತಿ ಅತಿಶಯಗಳಿಂ । ತಕ್ಷಣದೊಳು ಯೋಮದಿಂದ ೩೦

ಆ ವೇಳೆಯೊಳು ಅಮರರು ಹೊನ್ನಮಳೆಯನು । ಓವದೆ ಕರೆಯೆ ಅಂಗಣದಿ
ಭಾವಜಸನ್ನಿಭ ಸುರದೇವ ಪೊನ್ಗಳ । ತೀವಿದ ತನ್ನ ಮಂದಿರವ ೩೧

ಉತ್ತಮರಿಗೆ ಭಾಗ್ಯ ಬರೆ ನಾಲ್ಕು ದಾನವ । ಮತ್ತು ಮಾಳ್ಪರು ಇದು ನಿರುತ
ನಿತ್ಯಶೀಲೋಪವಾಸಂಗಳ ನೆರೆ ಮಾಡಿ । ಮತ್ತೆ ಮೋಕ್ಷವನೆಯ್ದುವರು ೩೨

ಸ್ವಾತಿಯು ಹನಿ ಚಿಪ್ಪಿನೊಳು ಬಿದ್ದು ತಕ್ಷಣ । ಜಾತಿಮುತ್ತಾಗುವಂದದೊಳು
ಪ್ರೀತಿಯಿಂ ಸನ್ಮುನಿದಿತ್ತನ್ನದಾನವು । ಭೂತಳದೊಳಗಿಂತಹುದು ೩೩

ಮತ್ತಾ ಪುರದೊಳು ವಾರಿಧಿದತ್ತನು । ಚಿತ್ತಜನಿಭರೂಪಯುತ[2]ಗೆ[2]
ವೃತ್ತಪಯೋಧರೆ ಲಕ್ಷ್ಮೀಮತಿಯೆಂಬ । ಸತ್ಯಸದ್ಗುಣಮಣಿ [3]ಸತಿ[3]ಗೆ ೩೪

ಆ ಪುಣ್ಯದಂಪತಿಗಳ ಗರ್ಭದೊಳು ಕುಲ । ದೀಪಕನೆನಿಸಿ ರಾಜಿಸುವ
ರೂಪುಸಂಪನ್ನ ಸಮುದ್ರದತ್ತನು ಪುಷ್ಪ । ಚಾಪಸನ್ನಿಭನುದಿಸಿದನು ೩೫

[4]ಇ[4]ಂತಿರುತಿರ್ದೊಂದು ದಿನದೊಳು ಮನದಲ್ಲಿ । ಚಿಂತಿಸಿ ತನ್ನೊಳು ತಾನು
ಪಿಂತೆ ಧರ್ಮವ ತಾನು ಮಾಡ[5]ದೆ[5] ಬಯಸಲು । ಸಂ[6]ತೋಷ[6]ವೊದಗುವದುಂಟೆ ೩೬

ಕಂತುಸನ್ನಿಭ ಸಮುದ್ರದತ್ತಗೆ ಈಗ । ಪಿಂತಣ ಅಘವಶದಿಂದ
ಸಂತೋಷ ತೊಲಗಿ ಸೌಭಾಗ್ಯ ತೊಲಗಿ ದುಃಖ । ಇಂತೊದಗುವುದು ಲೋಕದೊಳು ೩೭

ಮಿತ್ರರೆಲ್ಲರು ಪಗೆಯಾದರು ಮೆಟ್ಟಿದ । ಧಾತ್ರಿ ಬೆಳೆಯದು ಮತ್ತವನು
ಉತ್ತರದು ವಾಕ್ಯವ ಸಭೆಯೊಳಗಾಡಲು । ನೃತ್ಯನೆಂಬರು ಸಭೆಯೊಳಗೆ ೩೮

---

1 ಳೆ (ಕಖ) 2 ನು (ಕ) 3 ಯಾತ (ಕ) 4 ಉತ್ತಮಾ ಇ (ಕ) 5 ಲೆ (ಕ) 6 ವದ (ಕ)

ಎಲ್ಲರು ಇವನ ಸುವಚನವ ಕೇಳ್ವಾಗ । ಸಲ್ಲದೆಂಬರು ಸಭೆಯೆಲ್ಲ
ಪೊಲ್ಲ[1]ದ[1] ವಚನವ ಎಲ್ಲ[2]ರಾ[2]ಡಲು ಆದ । ಉಲ್ಲಾಸವಮಾಡಿ ಮೆಚ್ಚುವರು ೩೯

ಹಿಂದಣ ಭವದೊ[3]ಳ್[3] ತಾನೆಸಗಿದ ಪಾಪ । ಬಂದೊದಗಿತು ಎಂದು ತಾನು
ನೊಂದು ಮನದೊಳು ದುಃಖಾಬ್ಧಿಯನು ಈಗ । ನಂದಿಪರುಂಟೆ ಲೋಕದೊಳು ೪೦

ಮುನ್ನಿನ ಭವದೊಳು ತಾನೆಸಗಿದ ಪಾಪ । ಬೆನ್ನಲಿ ಬಂದು ತಾನೀಗ
ಬನ್ನಬಡಿಸುವುದ ಬಿಡಿಸುವರಿಲ್ಲೆಂದು । ತನ್ನ ಮನದಿ ಚಿಂತಿಸಿದನು ೪೧

ಉತ್ತಮಧರ್ಮವ ಮುನ್ನ ಮಾಡದೆ ಸುಖ । ಮತ್ತೆ ಬಯಸಲು ಬಂದಪುದೆ
ಬಿತ್ತಿಯ ಮನೆಯಿಂದ ತಾರದೆ ಪಥದೊಳು । ಬಿತ್ತಿ ಬಯಸುವೆಗ್ಗನಂತೆ ೪೨

ಹೊ[4]ಲನ[4]ಗೈದಾತ ತಾ ಬೀಜಗಟ್ಟದೆ [5]ಮುನ್ನ[5] । ಫಲವ ಬಯಸು[6]ವೆಗ್ಗ[6]ನಂತೆ
ಸುಲಲಿತಧರ್ಮವ ಮಾ[7]ದೆ[7] ತಾ ಸುಖ । ಫಲಿಸುವುದುಂಟೆ ಲೋಕದೊಳು ೪೩

ಪುಣ್ಯವಂತರ ಕಂಡು ಪುಲಿ ಸೆಕ್ಕಿ ಪೋ[8]ಪು[8]ದು । ಪುಣ್ಯ ತೊಲಗಿದ ಪುರುಷರ
ಕಣ್ಣಾರೆ [9]ಕು[9]ರಿ ಕಂಡು ತಲೆಯೆತ್ತಿ ಕಡಿದು ತಾ । ಹುಣ್ಣುಮಾಡುವುದು
ಲೋಕದೊಳು ೪೪

ಗಂಟುಳ್ಳ ಕಾಲದಿ ನೆಂಟರೆಲ್ಲರು ತಾವು । ಬಂಟರಂದದಿ ಇರುತಿಹರು
ಗಂಟು ಪೋದವಗೆ ನಂಟರು ತಾವು ಪಗೆಯಂತೆ । ಗಂಟಲಗಾಣವಾಗಿಹರು ೪೫

ಹುಟ್ಟಿದ ಮಕ್ಕಳು ಪಗೆಯಾಗುವರು ಸತಿ । ಕೆಟ್ಟಸ್ತ್ರೀಯಾ[10]ಗಿ[10] ಕಾಡುವಳು
ಕೊಟ್ಟ ಸಾಲವ ಕೇಳಿದರೆ ಅನ್ಯಾಯದಿ । ಬಿಟ್ಟಾಡಿ ಕೊಂದು ನೂಕುವರು ೪೬

ಹಿಂದಣ ಭವದೊಳು ಎಸಗಿದ ಕಿಲ್ಬಿಷ । ದಿಂದ ಬಂ[11]ದುದು[11] ದುಃಖವೆಂದು
ಕಂದಿ ತನ್ನೊಳು ತಾನು ಮರುಗುತ ಮನದೊಳು । ಬಂದುದನುಣಬೇಕುಯೆಂದ ೪೭

ದಾನ ಪೂಜೆಯು ಶೀಲುಪವಾಸ ಮಾಡದ । ಮಾನವಜನ್ಮ ನಿರರ್ಥ
ಹೀನನಂದದಿ ಸುಮ್ಮನಿರುವಾತನ ಗೃಹ । ಕಾನನದೊಳಗಿರಬೇಕು ೪೮

---

1 ರದ (ಕ) 2 ರು ಆ (ಕ) 3 ಳಃ (ಗ) 4 ನ್ನ (ಕ) 5 ಮುಂನೆ (ಕ) 6 ವಹೆದ್ದ (ಗ)
7 ದೆಮುನ್ನ (ಕಗ) 8 ಪ್ಪ (ಕ) 9 ಕ (ಕ) 10 ರಿತಾ (ಕ) 11 ದು (ಗ)

ಹಿಂದೆ ನಮ್ಮವರು ದೊಡ್ಡವರು ಧರ್ಮವ ಮಾಡಿ । ಸಂದರು ಸುಗತಿಗೆ ನಾವು
ಒಂದು ಮಾಡಿದುದಿಲ್ಲ ಅದರಿಂದ ದಾರಿದ್ರ । ಬಂದೊದಗಿತು ನನಗೀಗ ೪೯

ಸತ್ಪಾತ್ರದಾನವ ಮಾಡಿದವ[1]ರು ಎ[1]ಲ್ಲ । ಮತ್ತೆ ಸೌಭಾಗ್ಯವ ಪಡೆದು
ಚಿತ್ತಶುದ್ಧದಿ ಸುಖದೊಳಗಿರ್ದು ಕಡೆಯೊಳು । ಉತ್ತಮಗತಿಯ ಸೇರುವರು ೫೦

ಅವಳಿಲ್ಲದಪ್ಪಪುತ್ರರ ಬಯಸುವರಂತೆ । ಬವಣೆಬಡುವ ಜನಗಳಿಗೆ
ಭುವನದೊಳಗೀ ಸುಖವುಂಟೆ ಚಿಂತಿಸಿದರೆ । ವಿವರವೇನುಂಟೆಂದ ವರದ ೫೧

ಭಂಗುರದೇಶಕ್ಕೆ ಪೋಗಿ ಜಾತ್ಯಶ್ವವ । ಹಿಂಗದೆ ತಂದಿತ್ತು ನೃಪಗೆ
ಪೊನ್ಗಳ ಘನ[2]ವಾದ[2] ಪಡೆವೆನೆನುತ ಪೋಪ ।ಸಂಗಡವನು ನೋಡುತಿರ್ದ ೫೨

ಉದ್ಯೋಗ ಮಾಡಿದವರಿಗೆಲ್ಲ ಲಕ್ಷ್ಮಿಯು । ಪೂರ್ಣ ಸಾಹಾಯ್ಯವಾಗುವಳು
ಬುದ್ಧಿಗೆ ಕರ್ಮ ಸಹಾಯವಾಗುವದಿದು । ಸಿದ್ಧಾಂತವೆಂಬರು ಬುಧರು ೫೩

ಹಡಗಿನ ಬೇಹಾರ ಮಾಡುವ ವರದರು । ಬಿಡದೆ ಬಂಡವ ಕೊಂಡು ಬಳಿಕ
ಹಡಗ ತುಂಬಿಸಿ ಭಂಗುರದ್ವೀಪಕ್ಕೆ ಪೋಪವ । ರೊಡನೆ ಸಾಗುವೆನೆಂದ[3]ವ[3]ನು ೫೪

ಮನೆಗೆಯ್ದು ಅವರೊಳು ನಿಮ್ಮ ಉದ್ಯೋಗಕ್ಕೆ । ಅನುಕೂಲವಾಗಿ ಬರುವೆನು
ವನಧಿಯೊಳಗೆ ಭೈತ್ರವನೇರಿ [4]ಬಹೆನೆಂ[4]ದು । ವಿನಯದ ನುಡಿದವರೊ[5]ಡನೆ[5] ೫೫

ಒಂದುದಿವಸ ವರದರು ಭೈತ್ರಕೆ ಪೋಪೆ । ವೆಂದು ಯೋಚಿಸಿ ಸರ್ವಜನರು
ಬಂದು ಜಿನೇಂದ್ರಗೆ ಪೂಜೆಯನೆಸಗಿ ಮು । ನೀಂದ್ರರಿಗಾಹಾರ[6]ವಿ[6]ತ್ತು ೫೬

ಶುಭದಿನ ವಾರ ತಿಥಿ[7]ಯೋಗತಾರೆಯೊ[7]ಳು । ಶುಭಲಗ್ನದಿಂದೆಲ್ಲ ನೆರೆದು
ಶುಭ[8]ಮುಹೂ[8]ರ್ತದೊಳು ಪೂಜಿಮಡಲು ವಿಪ್ರರುಯೆಲ್ಲ । ಶುಭವಾಗಲೆಂದು
ಪರಸಿದರು ೫೭

ಬಂಧುಜನಂಗಳು ಒಡನೆ ಬರಲು ಅವ । [9]ರ್ನಾದನೆ[9] ವಿನಯ[10]ವ[10] ನುಡಿದು
ಸಂದಭಕ್ತಿಯೊಳೊಂದಿಸಿದರ್ಗೆ ಹರಸುತ್ತ । ಮುಂದಕೆಯ್ದಿದರು ಲೀಲೆಯೊಳು ೫೮

---

1 ರೆ (ಗ)   2 ವಾ (ಗ)   3 ನವ (ಕ)   4 ಬಾಹೆಂ (ಗ)   5 ಳಗೆ (ಗ)   6 ವನಿ (ಕ)
7 ಯೊಳು (ಕ)   8 ಮುಹೂ (ಗ)   9 ರೊಡನೆ (ಕ)   10 ವನು (ಕ)

ಶಂಬರಾರಿಯ ರಿಪು ಶರಣೆಂದು ವಾರ್ಧಿಯೊಳು । ತುಂಬಿದ ಭೈತ್ರವನೇಱಿ[1]
ಸಂಭ್ರಮದೊಳು ಪೋಗುತಿರ್ದ ವಾರಿಧಿಯ । ಭಂಡಾರವನು ಕಂಡು ಆವರು ೭೯

ತೆರೆಯನೇಳಿಸಿ ಬಾಲುನೊರೆಯ ಪಿಂಡವ ನೂಕಿ । ಮೊಱೆ[2]ವುತ್ತ ತಡಿಯನಪ್ಪಳಿಸಿ
ಉರಗ ಮೊಸಳೆ ಏಡಿ [1]ಆಮೆ[1] ಮಿನ್ನಗಳುಸಹ । ಇರದೊಪ್ಪಿತು ಜಲನಿಧಿಯು ೮೦

ಮುತ್ತು ಪ್ರವಾಳ ಕನಕ ಕಂಚ ಶಂಖಗಳು । ಮತ್ತೆ [ಭರ][3]ತ ತೆರೆಸುಳಿಯು
ಉತ್ತಮನವರತ್ನಗರ್ಭದಿ ಅಂಬುಧಿ । ಚಿತ್ತಕ್ಕೆ ಮುದವನೆಬ್ಬಿಪುದು ೮೧

ಹಿಂಗದೆ ವಾರ್ಧಿಯೊಳು ಭೈತ್ರವ ನಡೆಸುತ್ತ । ಭಂಗುರದೇಶ[4]ವ[5] ಪೊಕ್ಕು
ಕಂಗೊಳಿಸುವ ಸರ್ವವಸ್ತುವಾಹನದಿಂದ । ಮಂಗಳವಾಗಿರುತಿಹುದು ೮೨

ಆ ದೇಶದೊಳಗೆ ಪಟ್ಟಣ ಗ್ರಾಮ ಪುರಗಳು । ಮೇದಿನಿಯೊಳು ಘನವೆನಿಪ
ಭೂಧರ ವನರಾಜಿ ಹಯ ಕಸ್ತೂರಿಮೃಗ । ಕಾಧಾರವಾಗಿರುತಿಹುದು ೮೩

ಝಲ್ಲಿಯುಮೃಗ ಚಾತ್ಮತ್ವ ಪುಣುಗು । ಜವ್ವಾದಿಗೆ ತವರು ತಾನೆನಿಸಿ
ಸೊಲ್ಲಿಸಲಳವೆ ಆ ದೇಶದ ಸೊಬಗನು । ಬಲ್ಲವರಾಳಿಯೊಳಗೆ ೮೪

ಅಲ್ಲಿರ್ಪ ಪಟ್ಟಣ ಪುರ ಗ್ರಾಮ [6]ನಗರಗ[6] । *ಕೆಲ್ಲಕ್ಕೆ ಅತಿರಮ್ಯವಾದ
ಬಲ್ಲಿದ ಪಳಂಶಪಟ್ಟಣವಿರ್ಪ ಅದ । ಕೆಲ್ಲರು ಸಾರ್ದರೇನೆಂಬೆ ೮೫

ಏನೆಂಬೆ ಆ ಪಟ್ಟಣದಿಂದ ಪರದರು । ನಾನಾದೇಶಕೆ ಪೋಗಿ ಬಳಿಕ
ಸಾನುರಾಗದಿ ಮೂಱುವರುಷಕ್ಕೆ ಬಹೆವೆಂದು । ಆನದೆ ಪೋಗೆ ಮುತ್ತಿತ್ತ ೮೬

ಆ ವೇಳೆಯೊಳು ಸಮುದ್ರದತ್ತನು ತಾನು । ಭಾವಿಸಿದನು ಮನದೊಳಗೆ
ಓಪದೆ ಎಲ್ಲರು ಬರುವತನಕ ನಾನು । ಈಪುರದೊಳಿರುವೆನೆಂದೆನುತ ೮೭

ಬೀದಿಯೊಳು ಬರುತಿರೆ ಪರದನ ಪೂರ್ವದ । ಧಾಮಪ್ರಣ್ಯವೆ ಇದಿರಾಗಿ
ಪ್ರೇಮದಿ ಪುರುಷರೂಪಾಂತು ಬಪ್ಪಂದದಿ । ಕಾಮಸನ್ನಿಭ ಬರುತಿರ್ದ ೮೮

---

[1] ವ (ಕ) [2] ಬರು (ಕಗಚ) [3] ಕ್ಕೆ (ಕ) [4] ಗಳ (ಕ) [5] ರಲು (ಕ) [6] ಗ (ಕ)
* ಈ ಸಾಲು (ಕ) ಪ್ರತಿಯಲ್ಲಿಲ್ಲ.

ಶೋಕನೆಂದೆಂಬ ಪರದ ತನ್ನ ಕುದುರೆಯ । ಜೋಕೆಮಾಡುವರಿಲ್ಲವೆಂದು
ಬೇಕಾದ ಮನುಜರ ಕಾಣದೆ ಅರಸುತ್ತ । ತಾ ಕಂಡನಿವನ ಪೇಟೆಯೊಳು ೬೯

ನೀನಾರು ನಿನ್ನ[1] ಪೊಳಲು ಅವುದು ಮತ್ತೆ । ಏನಮಾಡುವೆಯೆನಲವಗೆ
ಸಾನುರಾಗದಿ ಸಮುದ್ರದತ್ತನು ಪೇಳ್ದ । ತಾನಲ್ಲಿಗೆಯ್ದಿದ ತೆಜಿಸ ೭೦

ಉತ್ತರದೇಶದಿಂ ಪರದರ[2] ಒಡಗೂಡಿ । ಮತ್ತು ಚೈತ್ರಪನೇಜಿ ಬಳಿಕ
ಚಿತ್ತಶುದ್ಧದಿ ಈ ಪಟ್ಟಣಕೆಯ್ದಿದೆ । ಮತ್ತೆ ಬೇಹರ ಮಾಡಲೆಂದು ೭೧

ಎಲ್ಲರು ಹಲವುದೇಶಕೆ ಪೋಗಿ ಬಂಡವ । ನಿಲ್ಲದೆ ಮಾಜಿ ಮತ್ತಪರು
ಇಲ್ಲಿಗೆ ಮೂಜುವರುಪಕೆ ಬಹರು ಎಂದು । ಎಲ್ಲವ ಪೇಳ್ದ ಶೋಕನೊಳು ೭೨

ಅಂತಾದೊಡೆ ನಿಮ್ಮವರು ಬರುವ ಪರಿ । ಯಂತರ ನಮ್ಮ [3]ಗೃಹದೊ[3]ಳು
ಸಂತೋಷದಿಂದಿರ್ದು ನಮ್ಮ ಕುದುರೆಗಳ । ಸುತ್ತೈ[4]ಸಿಕೊಂಡಿರುಯೆಂದ[4] ೭೩

*ಅಂತಾದೊಡಾಗಲಿ ಮೂಜುವರುಪ ಪರಿ । ಯಂತರ ನಿಮ್ಮ ಗೃಹದೊಳು
ಸಂತೋಷದಿಂದಿರ್ದು ನಿಮ್ಮ ತೇಜಿಗಳನು । ಸಂತೈಸೆ ಏನೀವೆಯೆನಲು ೭೪

ಕಂತುಸನ್ನಿಭ ಮೂಜುವರುಪ ಕುದುರೆಯ । ಸಂತೈಸೆ ಏನೀವೆಯೆನಲು
ಸಂತೋಷದಿಂದ ಸಮುದ್ರದತ್ತಗೆ ಶೋಕ । ಇಂತೆಂದು ಪೇಳ್ದನುತ್ಸಹದಿ ೭೫

ನಿನ್ನ ಮನಸು ಬಂದ ಕುದುರೆಯನೆರಡನು । ಸನ್ನುತದಿಂದಾದುಕೊಂಡು
ನಿನ್ನ ಊರಿಗೆ ಪೋಗೆಂದು ನಂಬುಗೆಯಿತ್ತು । ಮಂದಿರಕೊ[5]ಯ್ದ[5]ನಾಗ ೭೬

ಸಂತೋಷದಿಂದ ಸಮುದ್ರದತ್ತನು । ಕಂತುವೈರಿಯೆ ಶರಣೆಂದು
ಅಂ[6]ತವಿಲ್ಲದೆ[6] ಆ ಶೋಕನ ಮನೆಗೆಯ್ದಿ ನಿ । ಶ್ಚಿಂತೆಯಿಂದಿದ್ದನಾ ಪರದ ೭೭

ಸ್ನಾನ ಭೋಜನಗಳ ಮಾಡಿಸಿ ಉಡುಗೊರೆ । ತಾನಿತ್ತು ಕುದುರೆ ರಕ್ಷಿಸುವ
ಮಾನವರೆಲ್ಲರ ಕರೆಸಿ ಪೇಳಿದ[7]ನಿಂ[7]ತು । ಏನೆಂಬೆನವನ ವಿನಯವ ೭೮

ಈತನ ಹೆಸರು ಸಮುದ್ರದತ್ತನು ಮ । ತ್ತೀತನು ಏನ ಹೇಳಿದರು
ಮಾತ ಮೀಜದೆ ನೀವು ಬೆಸಗೆಯ್ವುದೆಂದು ವಿ । ಖ್ಯಾತ ನುಡಿದು ಸುಖಮಿರಲು ೭೯

---

[1] ಮ್ಮ (ಗ) [2] ರು (ಕ) [3] ಪೆಯೊ (ಕ) [4] ಸೆಂದೆನಲು (ಕ) [5] ಯದ (ಕ) [6] ತ (ಕ) [7] ರಿ (ಕ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ.

9

[ಅ] ಶೋಕನ ವಧು ಶೋಕಿಯುದರದಿ ಪುಟ್ಟಿದ । ಭಾಸುರಗುಣನಿಧಿಯೆನಿಪ
ಶೇಷವೇಣಿ[1]ಯು[1] ಕಮಲೆಯೆಂಬ ಸುತೆ ಪುಟ್ಟಿ । ವಾಸವೇಂದ್ರನ ಸತಿಯಂತೆ ೮೦

ತುಂಬುದಿಂ[2]ಗಳ[2] ಮುಖ ತುರುಗೆವೆಯುಲರ್ಗಣ್ಣು । ತುಂಬಿಗುರುಳ ತೊಂಡೆವಾಯಿ
[3]ತುಂಬುಜವ್ವನೆ ಕುರಂಗಲೋಚನೆ ಪೊಸ । ಪೊಂಬಣ್ಣಮೆಯ್ಯ ಲತಾಂಗಿ[3] ೮೧

ಪೊಂಬಾಳೆದೊಡೆಯು ಕನ್ನಡಿಕದಪಿನ ಹೇಮ । ಕುಂಭಕುಚದ ತಳಿರಡಿಯು
ಕಂಭುಕಂದರೆ ಮಂದಯಾನೆ ಪಿಡಿನಡು । ಬಿಂಬಾಧರೆ[4]ಗೆ ಒ[4]ಪ್ಪಿದವು ೮೨

ಪೊಂಬಾಳೆದೊಡೆಯು ಕನ್ನಡಿಕದಪಿನ ಹೇಮ । ಕುಂಭಕುಂಚದ ತಳಿರಡಿಯ
ತುಂಬುಜವ್ವನೆ ಕುರಂಗಲೋಚನೆ ಪೊಸಪೊಂಬಣ್ಣಮೆಯ್ಯ ಲತಾಂಗಿ ೮೩

ಕಾಮನ ಅಧಿದೇ[5]ವತೆ[5]ಯೊ ಕಮಲಾಕ್ಷನ । ಭಾಮಿನಿಯೊ ಅಬ್ಜಭವನ
ಪ್ರೇಮದಂಗನೆಯಂತೆ ಸಿರಿ ಜಾಣ್ಮೆ ರೂಪಿಂದ । ಸೋಮವದನೆ ಒಪ್ಪಿದಳು ೮೪

ಉಟ್ಟ ಶಾಲಿಯ ಸೀರೆ ಕಸ್ತೂರಿತಿಲ[6]ಕ[6] । ನಿಟ್ಟು ಸರ್ವಾಭರಣಗಳ
ತೊಟ್ಟು ಚಿತ್ರದ ರವಿಕೆ[7]ಯ[ನುಟ್ಟ ][7] ಮನ್ಮಥನ । ಪಟ್ಟದರಾಣಿಯಂತಿಹಳು ೮೫

ಹಾರ ಪದಕ ಹರಳೋಲೆ ಕಡಗ [8]ಕ[8]ಣೆ । ತೋರಮು[9]ತ್ತಿನ[9] ಮೂಗುತಿಯು
ನಾರಿಶಿರೋಮಣಿಯಿಟ್ಟು [10]ರಾಜಿಸಿದಳು[10] । ವಾರಿಜಾಕ್ಷನ ಸತಿಯಂತೆ ೮೬

ರತಿಯೊ ಭಾರತಿಯೊ ಪಾರ್ವತಿಯೊ ಕ್ಷೀರಾಬ್ಧಿಯ । ಸುತೆಯೊ ಸೀತೆಯೊ ದ್ರೌಪದಿಯೊ
ಕ್ಷಿತಿಯೊಳಗಿವಳ ಸೊಬಗಿಗೆ ಸ್ವರ್ಗದೊಳಿರ್ಪ । ಸತಿ ನಾಲ್ವರಿಗೆ ಬಂದಪುದೆ ೮೭

ಇಂತಿ[11]ಹ[11]ಳಂಗವ ಮಾಡಿಗೊಂಡು ಮನ್ಮಥ । ಸಂತೋಷದಿಂದೈಯ್ದು ಶರಧಿ
ಅಂತವಿಲ್ಲದೆ ಮೋಹಿಜನಗಳ ಎದೆಯನು । ನಿಂತು ಎಸೆದು ಕೆಡಹಿದನು ೮೮

ಈ ರೀತಿಯೊಳಗಿರ್ದ ಕಮಲೆ ತನ್ನಂಗವ । ಸೇರಿದ ಜವ್ವನದಿಂದ
ನಾರಿಗೆ ಪುರುಷನ ಮೇಲಣ ಮೋಹವು । ತೋರಿತು ಮದಸೊಕ್ಕಿನಿಂದ ೮೯

---

1 ಯೂ (ಕ) 2 ಳು (ಕ) 3 ಕಂಬುಕಂದರೆ ಮಂದಯಾನೆ ಪಿಡಿನಡು ಬಿಂಬಾಧರೆಗೊಪ್ಪಿದವು(ಗ)
4 ಗೊ (ಗ) 5 ವಿ (ಕ) 6 ವುತಾ (ಕ) 7 ಯು (ಕ) ಯೂ (ಗ) 8 ಅ (ಕ) 9 ತ್ತಿ (ಕ)
10 ಶೃಂಗರವಾಗಿ (ಗ) 11 ವ (ಕಚ)

ಮನೆಯೊಳಗಿರುವ ಸಮುದ್ರದತ್ತನ ಮೇಲೆ । ಮನಸು ಪುಟ್ಟಿತು ಮೋಹವೆರಸಿ
ಅನುಕೂಲವಾಗುವದೆಂತೆಂದು ಮನದೊಳು । ವನಿತೆ ಚಿಂತಿಸುತಿರ್ದಳಾಗ ೯೦

ಒಂದುದಿವಸ ಸಮುದ್ರದತ್ತನು ಮುದ । ದಿಂದ ಕೋಮಲೆಯು ಮುಂಗಡೆಯ
ಇಂದಿಗೆ ಮೂಜುತಿಂಗಳಿಗೆ ನಮ್ಮವರೆಲ್ಲ । ಬಂದಪರೆಂದುಸುಂದನು ೯೧

ಮತ್ತೆ ನಮ್ಮವರು ಬಂದರೆ ಅವರೊಡನೆ ಬೆಂ । [1]ಬಾ[1]ತ್ತಿಪೋಗುವೆ[1]ನು ಎಂದೆನುತ[1]
ಪೃತ್ತಪಯೋಧರೆ ಸಮುದ್ರದತ್ತಗೆ । ಮುತ್ತಿಂತು ನುಡಿದಳಾ ಜಾಣೆ ೯೨

ಒಂದುದಿವಸ ಸುಪ್ರಭಾತಕಾಲದಿ ತಾನು । ಸಂದ ಮೋಹದಿ ಆ ಕಮ[2]ಲೆ[2]
ಬಂದು ಪೇಳ್ದಳು ನಿನ್ನ ಒಡನೆ ನಿಮ್ಮೂರಿಗೆ । ಬಾದಪೆನೆಂದುಸುರಿದಳು ೯೩

ನಮ್ಮ ಊರಿಗೆ ನೀನು ಬರುವುದೆಂತೆಲೆ ನೀರೆ । ನಮ್ಮ ದೇಶವು ಬಲುದೂರ
ನಿಮ್ಮವರೆಂತು ಬಿಡುವರು ನಿನ್ನನು ನಾನು । ಸುಮ್ಮ[3]ನೆ ಒಯ್ವುದು[3]ಚಿತವೆ ೯೪

ದೂರವಾದರೆ ದೇಶ ಅದಕೊಂದು ಯುಕ್ತಿಯು । ತೋಜುವೆನೊಂದುಪಾಯುವನು
ವಾರಿಧಿಯನು ದಾಂಟಿ ನಿಮ್ಮ ದೇಶಕೆ ಪೋಪ । ದಾರಿಯು ಪೇಳ್ವೆ ಕೇಳೆನಲು ೯೫

ನೀನು ಕುದುರೆಗಳ ರಕ್ಷಿಸೆ ನಮ್ಮಯ್ಯ । ಏನ ಇತ್ತಪೆನೆಂದ ನಿನಗೆ
ಮಾನಿನೀಮಣಿ ಕೇಳು ಮೂಜುವರುಷಮಿರ್ದು । ನೀನು ಹೋಗುವ ವೇಳೆಯೊಳು ೯೬

ಈ ಕುದುರೆಗಳೊಳು ನಿನ್ನ ಮನ[4]ಸು[4] ಬಂದ । ಬೇಕಾದ ಕುದುರೆಯೆರಡನು
ಜೋಕೆಯಿಂ ಕೊಂಡುಪೋಗೆಂದು ನಂಬುಗೆಯಿತ್ತು । ತಾ ಕರೆತಂದನು ಗೃಹಕೆ ೯೭

* ಈಗ ನಿನಗೆ ಸೌಭಾಗ್ಯಸಂಪದ ಬಂದು । ರಾಗೆ ಹುಟ್ಟುವ ಕಾರ್ಯವನು
ಬೇಗದಿ ತೋಜುವೆ ಕೇಳೆಂದು ಕಮಲೆ ತಾ । ರಾಗದಿ ಪೇಳ್ದಳಿಂತೆಂದು ೯೮

ಕೋಟಿಹೊನ್ನು ಕೊಟ್ಟರೆ ಎರಡಶ್ವಕ್ಕೆ । ಪಾಟಿಯಿಲ್ಲದಜಿಂದ ನಿನಗೆ
ಚೂ[5]ಟಿ ಯ[5] ತೋಜುವೆ ಮೃದುರೋ[6]ಮ[6] ಕಿ[7]ರಿ[7]ವಾಲ । ಪಾಟ ಮೂಜಂಗುಲ ೯೯

ಕರ್ಣ

---

[1] ನು ಎಂದೆನುತ (ಕಚ) [2] ಲೆಗೆ (ಕ) [3] ನೊಯ್ವುದು ಉ (ಕ) [4] ಗೆ (ಕ) [5] ಬಿ (ಕ)
[6] ಮಪು (ಗ) [7] ರದು (ಕ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಜಲವನು ಮುಟ್ಟಿ ಮುಟ್ಟದೆ ಪೋಗುತಿರ್ಪುದನು । ಜಲಗಾಮಿನೀ ನೀಲವರ್ಣೆ
ಬಲಗಡೆ [1]ಮುತ್ತಿ[2]ಯಿಪ್ಪ[2]ದುದೆಂದು [3]ಜಲ[3]ಗಾಮಿ । ಯೊಳವ ಪೇಳ್ವೆಳು ಅವ
[4]ನೋ[4]ಡನೆ ೧೦೦

[5]ಮ[5]ತ್ತೊಂದು ಗಗನಗಾಮಿನಿಯಿರ್ಪ[6]ದದ[6] ತಾನು । ಉತ್ತಮವಾಜಿಯಂತದಕೆ
ಮತ್ತೆ ವಿ[7]ಶಾಲ[7]ವದನ ಸುಪ್ರದ[8]ಕ್ಷಿ[8]ಣ । ನೆತ್ತಿಯ[9]ಮಣಿನಾಗಮಣಿ[9]ಯು ೧೦೧

ಭೂಮಿಯಿಂದಲಿ ಲಂಘಿಸಿ ನಿಮಿಷಕೆ ತಾನು । ವ್ಯೋಮಕೆ[10]ಳ್ವುದು[10] ಅದು[10] ಗಗನ
ಗಾಮಿನಿಯನು ಪ್ರತ್ಯಕ್ಷಛಾಯವೆಸೆಯಲು । ಭೂಮಿ ಮೂಜಗೆಯಲ್ಲವದಕೆ ೧೦೨

ಧಾಮನಿತಂಬ ವಿಶಾಲವದನ ಮೃದು । ರೋ[11]ಮ[11] ಚರಣ ನೀಲವರ್ಣೆ
ಭೂಮಿಯಿಂದಲಿ ಹಾ[12]ರಿ[12] ವ್ಯೋಮದಿ ನಡೆವುದು । ಧಾಮವವನ ಪಾಜಿಮತೆ ೧೦೩

ಇಂತೆಂದು ಪೇಳಿದ ಕಮಲೆಯ ಮೇಲೆ ತಾ । ಭ್ರಾಂತು ಪುಟ್ಟಿತು ಮೋಹದಿಂದ
ಸಂತೋಷದಿಂದ ಸಮುದ್ರದ[13]ತ್ತನವಳ್ಗೆ[13] । ಇಂತೆಂದು ಪೇಳ್ದನುತ್ಸಹದಿ ೧೦೪

ರಾಜೀವಮುಖಿ ನೀನು ಪೇಳಿದ ತೇಜಿಯ । ವಾಜಿಯನೆಲ್ಲವ ತಂದು
ವಾಜಿಕೊಂಡಿರುವೆನು ಮನದೊಳು ಪೋಪನ್ನ । ವಾಜಿಯ ಕೇಳ್ ಕಮಲಾಕ್ಷಿ ೧೦೫

ಈ ಪರಿಯೊಳು ಕಮಲೆಗೆ ಪೇಳಿ ಮನಸಿನ । ತಾಪವ ತಾ ಪರಿಹರಿಸಿ
ರೂಪುಸಂಪನ್ನ ಸಮುದ್ರದತ್ತನು ಪುಷ್ಪ । ಚಾಪಸನ್ನಿಭನಿರುತಿರ್ದ ೧೦೬

ಒಂದುದಿವಸ ಸಮುದ್ರದತ್ತನು ಅಶ್ವ । ವೃಂದದೆಡೆಗೆ ಬಂದು ಬಳಿಕ
ಕುಂದದೆ ಹಯಗಳ ರಕ್ಷಿಪ ಜನಗಳ । ಕಂದರ್ಪರೂಪ ತಾ ಕರೆದು ೧೦೭

ಲೋಹಮವಿಕ್ಕೆ ಹಯಂಗಳ ರೋಹಣ । ತಾವನುಮಾಡಬೇ[14]ಕೆಂದು[14]
ಸಾಹಸಿ ಕುದುರೆಯ ತರಿಸಿ ನೀವೆಲ್ಲರು । ಸಾಹಾಯುವಾಗಿರಿ ಎಂದ ೧೦೮

*ವಾಜಿಯ ಮುಖದ ನೇವರಿಸಿ ಪಂಕವ ಮೆಟ್ಟಿ । ಓಜೆಯಿಂದಲಿ ಲಂಘಿಸಿದನು
ರಾಜಿಸುವನು ರಾಜರಾಜನಂದದಿ ಮತ್ತೆ । ತೇಜಿವ್ಯಾಯಾಮ ಮಾಡಿದನು ೧೦೯

---

[1] ಮು (ಕ) [2] ಪ್ಪ (ಗ) [3] ಗಜ (ಗ) [4] ಆಿ (ಕ) [5] ಇ (ಚ) [6] ಮ (ಕ)
[7] ಶಾಸ (ಕ) [8] ಕ್ಷ (ಕ) [9] ಮಣಿನಾಗಕುಳಿಯು (ಕ) [10] ದ (ಕ) [11] ಯುಚಾರು (ಕ)
[12] ಮ (ಕ) [13] ಯ (ಚ) * ೧೦೭ ರಿಂದ ೧೧೫ ರ ವರೆಗಿನ ಪದ್ಯಗಳು (ಗ) ಪ್ರತಿಯಲ್ಲಿಲ್ಲ.

ಕುಂಭಕಾರನ ಕೈಯ ಚಕ್ರವೆನಲು ಅಶ್ವ । ಅಂಬುಧಿಯೊಳು ಸುಳಿಯಂತೆ
ಕುಂಬಾರನ ಕೈಯ ಕೋಲಿನಂತೆಸೆದನು । ಶಂಬರಾರಿಯ ರೂಪನಾಗ ೧೧೦

ಹಿಂದುಮುಂದನು ಮಾಡಿ ತಿರುಗಿಸಿ ವಾಜಿಯ । ಬಂದು ನೋಡುವರೆಲ್ಲ ಅದನು
ಅಂದು ನೋಡಿದರು ನೋಟಕರು ಈ ಅಶ್ವಕೆ। ಮೂಲೋಕ ಎಣೆ[1]ಯಿ[1]ಲ್ಲವೆನಲು ೧೧೧

ಈಯಂದದೊಳು ಚಾರಿಮಾಡಿದ ಅಶ್ವದ । ಕಾಯದೊಳು ಪುಟ್ಟಿದ ಬೆಮರು
ತೋಯನಿಧಿಯೊಳುದಿಸಿದ ನಿಜಾಶ್ವ । ಆಯವಾದುದು ನೋಡುವರಿಗೆ ೧೧೨

ತುರಗವ ಈ ರೀತಿ ಸಾಧಕ ತಾ ಮಾಡಿ[2] । ಪರದನ ಮೆಚ್ಚಿ [3]ಅ[3] ಶೋಕ
ಹರುಷದಿ ವಸ್ತ್ರಾಭರಣವನಿತ್ತನು । ಧರೆಯೆಲ್ಲ ಮೆಚ್ಚುವಂದದೊಳು ೧೧೩

ಆ ಹಯಗಳಿಗೆಲ್ಲ ರೋಗ ಬಂದರೆ ತಾನು । ವಾಹಕವೈದ್ಯ ತಾನಾದಿ
ಸಾಹಾಯವಾಗಿ ಕವಳವಿತ್ತು ರಕ್ಷಿಸೆ । ಆ ಹಯ ರಂಜಿಸುತಿಹುದು ೧೧೪

ಕುದುರೆಗಳನು ಕೊಳ್ಳಬಂದವರಿಗೆಯೂ । ವಿಧವ ತಿಳಿದು ವರಾಜಿ ಹೊನ್ನ
ಸದಮಲಗುಣನಿಧಿ ಆ ಶೋಕನಿಗಿತ್ತನು। ಮುದದಿ ನೂರಾರು ಸಾವಿರವ ೧೧೫

ಈ ರೀತಿ ಹಯದ ಸಮೂಹವ ರಕ್ಷಿಸಿ। ವಾರಿಧಿದತ್ತನು ಜಿನರ
ನೀರೇಜಪದಗಳ ಭಜಿಸುತ್ತ ಪರದರ । ದಾರಿಯ ನೋಡುತ್ತಲಿರ್ದ ೧೧೬

ಇ[4]ದ[4] ಬರೆದೋದಿ ಪೇಳಿದವರಿಗೆಯಾರೋಗ್ಯ । ಇದ ಕೇಳಿದವರಿಗೆ ಸೌಭಾಗ್ಯ
ಇ[5]ದ[5] ಚಿತ್ತದೊಳು ನೆಲೆಗೊಳಿಸೆ ಸ್ವರ್ಗಕೆ ಯೋಗ್ಯ । ಇದು ಮುಕ್ತಿ ಸತಿಯ
ಸೌಭಾಗ್ಯ ೧೧೭

---

1 ಯಾ (ಚ) 2 ಡ (ಕ) 3 ಅ (ಚ) 4 ದಾ (ಗ) 5 ದು (ಗ)

# ಹದಿಮೂರನೆಯ ಸಂಧಿ

ಮದನವಿಜಯ ಮಂಗಲಮೂರ್ತಿ [1]ಭವ್ಯರ[1] । ಹೃದಯಸುಧಾಬ್ಧಿಚಂದ್ರಮನು
ಸದಮಲಗುಣ ಸುಪಾರ್ಶ್ವನಾಥ ಎನಗೆ । ಮುದದಿ ಪಾಲಿಸು ಮುಕ್ತಿಸುಖವ ೧

ಮಂಗಲದಾಯಕನೆನಿಸಿದ ಅಭವಗೆ । ಮಂಗಲಮದನವಿಜಯಗೆ
ಮಂಗಲಮೂರ್ತಿ ಸುಪಾರ್ಶ್ವಜಿನಪಗೆ । ಮಂಗಲ ಸರ್ವ[2]ಜ್ಞ[2]ನಿಗೆ ೨

ಅತ್ತಲು ಪರದರು ಪೇಟೆಗಳನು ಪೊಕ್ಕು । ಮತ್ತು ತಾವ[3]ಯ್ದು[3] ಬೇಹರವ
ನಿತ್ಯ ವೆಚ್ಚವ ಮಾಡಿ ಕೊಂಡರು ಅಲ್ಲಿರ್ದ । ಅತ್ಯಂತ ಘನವಸ್ತುಗಳನು ೩

ಮುತ್ತು ಮಾಣಿಕ ವಜ್ರ ಚಿನಿಚೀನಾಂಬರ । ಮತ್ತೆ ಕಸ್ತೂರಿ ಕರ್ಪೂರ
ಉತ್ತಮಗಂಧ ಜಾತ್ಯಶ್ವ ಗಜಂಗಳ । ಮತ್ತವರು ಕೊಂಡರಂತಲ್ಲಿ ೪

ಝಲ್ಲಿಯು ಬಣಬೆ ಪ್ರವಾಳದ ಪೇರುಗ । ಳೆಲ್ಲ ದ್ವೀಪಾಂತರದೊಳಗೆ
ಅಲ್ಲಿರ್ದ ಮೇಲುವಸ್ತ್ರಾಭರಣಂಗಳ । ಉಲ್ಲಾಸದಿಂ ಕೊಂ[4]ಡರಾ[4]ಗ ೫

ಪರುಷ ಮೂಜಿಕೆ ಘನವಾದಿ ಗಳ[5]ಸಿ[5] ಹೊನ್ನ । ಹರುಷದಿ ಕೊಂಡು ಬೇಹರವ
ತ್ವರಿತದಿ ಪೇರ ತುಂಬಿಸಿ ಅಲ್ಲಿಂದಲಿ । ತೆರಳಿಬಂದರು ಬೀಡಬಿಟ್ಟು ೬

ಅಲ್ಲಿಂದ ಪೊಡಮಟ್ಟು ಪಲಾಶಗ್ರಾಮಕ್ಕೆ । ಎಲ್ಲರು ಬಂದರೊಗ್ಗಿನಲಿ
ಉಲ್ಲಾಸದಿಂದೆಲ್ಲ ನಾನಾದೇಶಕೆ ಪೋದವರೆಲ್ಲ । ರಲ್ಲಿಗೆ ಬಂದರಾಗ ೭

ಇಂತಿವರೆಲ್ಲರು ಪೇಟೆಹೊಜಗೆ ಬೀಡ । ಸಂತೋಷದಿಂದ ಬಿಟ್ಟಿರಲು
ಕಾಂತುಸನ್ನಿಭ ಸಮುದ್ರದತ್ತನು ಕಂ[6]ಡ[6] । ನಂತೆಂಬೆನವನ ಉತ್ಸವವ ೮

---

[1] ಮಹಿಮನು (ಕ) [2] ಜಿ (ಗ) [3] ಯಿದ (ಗ) [4] ಡಾ (ಕ) [5] ಪಿದ (ಗ) [6] ಡು (ಕ)

ಬಂಧುಗಳೆಲ್ಲರು ಬಂದರೆನುತ ಆ । ನಂದಹೃದಯ ತಾನಾಗಿ
ನಂದನೆ ಹೃದಯಶುದ್ಧಿ ನುಡಿದವರೊಳು । ಮಂದಿರಕೈತಂದು ಬಳಿಕ ೯

ಪರಪಶಿರೋಮಣಿ ಶೋಕವೇನಿಂತೆಂದು । ಒರೆದನು ನಮ್ಮವರೆಲ್ಲ
ತ್ವರಿತದಿ ಊರಿಗೆ ಪೋಗಲೆನುತ ಊರ । ಹೊಱಗೆ ನಿಂದಿಹರೆ ಕೇಳೆಂದ ೧೦

ಮಱು ವರುಷವಾಯ್ತು ಬಂದವರೆಲ್ಲರು । ಊರಿಗೆ ಹೋಗಲೆಂದೆನುತ
ಸಾರಿ ಬಂದರು ಅವರೊಡನೆ ನಮ್ಮೂರಿಗೆ । ಸೇರಿಕೊಂ[1]ನಿನು[1] ಎಂದು ಪೇಳ್ದ ೧೧

ಇಂತೆನು ಪೇಳ್ದ ಸಮುದ್ರದತ್ತಗೆ ಶೋಕ । [2]ಇಂತೆಂದು[2] ನಾ ಮುನ್ನ ನಿನಗೆ
ಸಂತೋಷದಿಂದಲಿ ನಿನಗಿತ್ತ ಮಾತಿಗೆ । ಅಂತಸ್ಯವಿ[3]ಲ್ಲ[3] ಬಯ್ಕೆಂದ ೧೨

ಭೇದವಿಲ್ಲದೆ ಲಾಯಕೆ ಪೋಗಿ ತೇಜಿಯ । ನಾದುಕೊ ಮನಬಂದವೆರಡ
ಕಾದ ಕೂಲಿಯ ತೀರಿಸಿಕೊಂಡು ಪೋಗೆಂದು । ಸಾಧುವಾಕ್ಯವ ಪೇಳ್ದನವಗೆ ೧೩

ಮುನ್ನ ತನ್ನೊಳು ಪರದನ ಸುತೆ ಪೇಳಿದ । ಸನ್ನುತಕುದುರೆಯನೆರಡ
ತನ್ನ ಕೈ[4]ಯೊಳು[4] ಪಿಡಿತಂದು ನಿಲ್ಲಿಸಿ ಶೋಕ । ಇನ್ನೇನ ಮಾಡಲಿ[5]ಯೆಂದ[5] ೧೪

ಜಾತಿಯಾಶ್ವಗಳೆಂಬ ಕುರುಹನು ಪೇಳಿದ । [ನಾಥ][6]ನಾರಿವನೊಳಗೆಂದು
ನೀತಿನಿಪುಣ ಕೇಳೆ ಜೀತದವರನೆಲ್ಲ । ಪ್ರೀತಿಯಿಂದೊರೆದರಿಂತೆಂದು ೧೫

ನಿಮ್ಮ ಮಾತಿಲ್ಲದೆ ನಮ್ಮೊಳಗೊರ್ವನು । ಸುಮ್ಮನೆ ಪೇಳುವರಲ್ಲ
ನಿಮ್ಮ ಮನೆಯೊಳು ನಿಮ್ಮವರ ಕೇಳೆನೆ ಶೋಕ । ಸುಮ್ಮಾನಗುಂದಿದ ಮನದಿ ೧೬

ಇವ ನಮ್ಮ ದೇಶಕ್ಕೆ ಬಂತೆ ಬಂದವನಲ್ಲ । ಇವನಿಲ್ಲಿ ನಮ್ಮ ಭಾಷೆಯನು
ವಿವರವ ತಿಳಿದವನಲ್ಲದೆ ಹಯಗ[7]ಳ[7] । ವಿವರ ಪೇಳ್ದವನೊ ಇವಗೆ ೧೭

ಇವನ ಲಾವಣ್ಯ[8]ಇ[8]ವನ ರಸಿಕತೆಗೆ ಮ । ತ್ತಿವನ ಸೊಬಗು ಗಾಡಿ ಪೋಡಿ
ಇವನ ಜಾಣ್ಮೆಯ ಕಂ[9]ಡು[9] ಲೋಕದಿ ಸೋಲದ । ಯುವತೀಜನಗಳುಂಟೆಯೆಂದು ೧೮

---

[1] ಬಿ (ಕ) [2] ನಿಂದ (ಕ) [3] ಲ್ಲದೆ (ಗ) [4] ಯ್ಯಲಿ (ಗ) [5] ಯು (ಕ) [6] ಶಾ (ಕಗಚ)
[7] ಳ ಊಗ (ಕಗ) [8] ಯು (ಕ) [9] ಡ (ಗ)

ಇವನ ಮೇಲಣ ಮೋಹದಿಂದಲಿ ಇವನಿಗೆ । ದಿವರಾತ್ರಿಯೊಳು ಎಡೆಬಿಡದೆ
ಸವಿವಡೆದಿಹ ಪಂಚಭಕ್ಷ್ಯಲೇಪನಗಳ । ಯುವತಿ ಮಾಳ್ಪಳು ಸ್ನೇಹದಿಂದ ೧೯

ನಮ್ಮಯ ತನುಜಾತೆ ಕಮಲೆಯಿಂದಲ್ಲದೆ । ಹೊ[1]ಮ್ಮ[1]ದು ಹೊಜಿಗೆ ಈ ಮಾತು
ಕಮ್ಮಗೋಲಿಗೆ ಸಿಕ್ಕಿದ ಜನರೆಲ್ಲರು । ನಮ್ಮವರ್ ಕೆಡುವರೆಂದಪರೆ ೨೦

ವಾರಣ ವಾಜಿ ಉರಗ ಸಿಂಹ ವ್ಯಾಘ್ರನ । ಸೇರಿ ಬದುಕಬಹುದೀಗ
ನಾರೀಜನಂಗಳ ಮನವನು ಧರೆಯೊಳು । ಆರೈದು ತಿಳಿವರಾರೆಂದು ೨೧

ಉರಗಾಭರಣ[2]ನರಿವೆಣ್ಣಾದ[2] ಧರೆಯೊಳು । ಸುರಪತಿಯಾದ ಕುಕ್ಕುಟನು
ಸರಸಿಜೋದ್ಭವ ತಾನು ಶಿರವ ನೀಗಿದ ಹರಿ । ತುರುಗಳ ಕಾಯ್ದ [3]ಲೋಕ[3]ದೊಳು ೨೨

ತಾಯಿ ತಂದೆಯು ಬಲ್ಲರೇ ಮೋಹಿಜನಗಳು । ಕಾಯುವಳಿದು ಪೋಗೆ ತಮ್ಮ
ಪ್ರಿಯದಿಂದಲಿ ಕುಲಗತಿಗೆಟ್ಟು ಪೋಪು[4]ದ[4] । ಆಯುಶಾಕ್ಷಿಯರೆಣಿಸುವರೆ ೨೩

ಕೊಳದೊಳು ಮೀನಿನಡಿಯು ಕಾ[5]ಣ[5]ಬಹುದು ಮು । ತ್ತಿಳಿಯೊಳು ಬಿಳಿಯ ತುಂಬಿಗಳ
ಬಳಗವ ಕಾಣಬಹುದು ನಾರಿಯರ ಚಿತ್ತ । ದೊಳವ ಕಾಣುವರಾರು ಜಗದಿ ೨೪

ತಾಯಿ ತಂದೆಗೆಯುಪಕೀರ್ತಿಯೆಂಬರೆ ಮತ್ತೆ । ಕಾಯುವಳಿದು ಪೋಗೆ ತಮ್ಮ
ಪ್ರಿಯ ದಕ್ಕಿದರೆ ಸಾಕೆಂಬರು ಮೋಹದು । ಪಾಯದಿ[6]ನ್ನೆ[6]ಂತೊ ಲೋಕದೊಳು ೨೫

ತುತ್ತಿನೊಳ್[7]ಬು[7]ತ್ತಿತ್ತು ಸಲಹಿದ ತಂದೆ ತಾ । ಯೆತ್ತ ಪೋದಡೆ ಪೋಗಲೆಂದು
ಮತ್ತೆನ್ನ ಬಾಳಿಗೆ ಕೇಡ ತಂದಳುಯೆಂದು । ಚಿತ್ತದಿ ನೋಡದ ಆ ಶೋಕ ೨೬

ದೊಡ್ಡವರಿಗೆನ್ನೊಂದು ಚಿಂತೆ ಬಂದರೆಯದು । ಚಡ್ಡಿಮಾಡುವರೆ ತಮ್ಮೊಳಗೆ
ಗುಡ್ಡೆಣಿಕೆಯನೆಣಿಸಿದರುಂಟೆ ಲೋಕದಿ । ದಡ್ಡರಂದದಿ ಬಲ್ಲ ಜನರು ೨೭

ಇಂತೆಂದು ಮನದೊಳು ಎಣಿಸಿ ಆ ಶೋಕನು । ಭ್ರಾಂತನುಳಿದು ಭವಹರನ
ಸಂತೋಷದಿಂದ ಭಾವಿಸುತಿರ್ದನು ಮತ್ತೆ [ನಾ] । ನೆಂತೆಂಬೆನವನ ಸದ್ಗುಣವ ೨೮

---

[1] ಂದ (ಕಚ) [2] ನಾ (ಕ) [3] ಕಾಲ (ಕ) [4] ದು (ಕ) [5] ಣಲು (ಕ) [6] ನ್ನೊ (ಕ)
[7] ಬಂ (ಕ)

ಧರಣಿಯು ಹೊರ್ದು ಕರಗುಳ ತಪ್ಪಲು । ಗಿರಿ[1]ಯುನಿಟ್ಟಂ[1]ಬು ತಪ್ಪಿದರೆ
ಸುರಗಿರಿಯುಲುಗೆ ವಾರಿಧಿ ಮೇ[2]ರೆ[2] ಮೀಜಿಲು । ಒರೆದು ತಪ್ಪುವರೆ ಸಜ್ಜನರು ೨೯

ತರಣಿ ಪಶ್ಚಿಮದಲ್ಲಿ ಉದಿಸೆ ಸಿತಾಂಶು ತಾ । ಉರಿಯಗ್ನ[3]ಗೆ[3] ಸರಸಿಜ ಗಿರಿಯು
ಆಜಿ[3]ಯೊಳಗುದಿಸೆ ಸಜ್ಜನರಾಡಿವ ವಾಕ್ಯವ । ಮಾಜಿ[3]ದಾಡುವ[4]ರೆ[4] ಪ್ರತಿನುಡಿಯ ೩೦

ನುಡಿದು ತಪ್ಪಿದಡಪಕೀರ್ತಿ ಮುಂದಣಗತಿ । ಕೆಡುವುದು ನಾಲಿಗೆಯೆರಡು
ಪೊಡವಿಯೊಳಗೆ ಉಂಟೆ ಸಜ್ಜನರಿಗೆಯೆಂದು । ಬಿಡದೆಣಿಸಿದ ತನ್ನ ಮನದಿ ೩೧

ಇಂದು ನಾ ನುಡಿದ ಮಾತೆರಡಾ[5]ದರೆ ದುಃಖ । ಹಿಂ[5]ದಕ್ಕೆ ಬೀಳ್ವುದು ನಯವೆ
ಮುಂದೆ ಭವಾಂಬುಧಿಯೊಳು ಬಿದ್ದು ಕೆಡುವುದು । ಅಂದವೆ ಬಲ್ಲವರ್ಗೆಂದ ೩೨

ಇಂದು ನನ್ನಯ ಮನಬಂದ ಕುದುರೆಯನು । ಒಂದನಿತ್ತರೆ ಪೋಗುವನು
[6]ಮುಂ[6]ದೆ ನಂಬುಗೆಯಿತ್ತು ಈಗ ತಪ್ಪಲು ಪಾಪ । ಬಂಧವಾಗುವವೆಮಗೆಂದು ೩೩

ಅರ್ಧಚಕ್ರಿಯ ಸಂಪದ ಪರನೃಪರಿಗೆ । ಹೋದ್ದಲಿಲ್ಲವೆ ಈಗ ನನಗೆ
ಇದ್ದ ಸಿರಿಯೊಳರ್ಧ ಪೋದಡೆ ನನಗೀಗ । ಇದ್ದುದೆ ಸ್ಥಿರವಾಗಲೆಂ[7]ದ[7] ೩೪

[ಉ][8]ಳಿವುದೆ ಕಾಯ ಮತ್ತುಳಿವುದೆ ಕೀರ್ತಿಯು । ಅಳಿ[9]ವ[9]ದಾಸೆಗೆ ಮನಸಂದು
ಕಳವನಾಡಲು ಸತ್ತು ಏಳನೆ ನರಕಕ್ಕೆ । ಇಳಿವರು ಇದುವೆ ಸಿದ್ಧಾಂತ ೩೫

ಸಂತೋಷದಿಂದ ಸಮುದ್ರದತ್ತಗೆ ಶೋಕ । ನಿಂತೆಂದನೆಲೆ ಹು[10]ಚ್ಚ[10] ನೀನು
ಇಂತಪ್ಪ ಕುದುರೆಯನಾದುಕೊಂಬರೆಯಾಗ । ಭ್ರಾಂತನಲ್ಲವೆಯೆಂದನವಗೆ ೩೬

ಅಂಬುಜಮಿತ್ರನ ತೇಜ[11]ಕ್ಕೆ ಮಿಗಿಲೆಂಬ[11] । ತುಂಬಿದಮೈಯ ವಾಜಿಗಳ
ಸಂಭ್ರಮದಿಂ ಕೊಳ್ಳದಿಂತಪ್ಪ ಕುದು[12]ರೆ[12] ತೆ। ಕೊಂ[13]ಬುವ[13] ಗಾವಿಲರುಂಟೆ ೩೭

ಸ್ಥೂಲನಿತಂಬ ತುಂಬಿದ ಮೈಯ ಮೃದುರೋಮ । ಮೇಲೆ ರಾಜಿಪ ಶುದ್ಧ ಸಳಿಯು
ಬಾಲಪ್ರಾಯದ ಜಾತ್ಯಶ್ವವ ಕೊಳ್ಳದೆ । ಕಾಲ್ಗೆ[14]ಟ್ಟ[14] ಕುದುರೆಯ ಪಿಡಿವರೆ ೩೮

---

[1] ಗಿಟ್ಟ (ಕ) [2] ರಂ (ಗ) [3] ಡಿ (ಕ) [4] ರೀ (ಕ) [5] ದ ಬಂ (ಚ) [6] ದೆ (ಕಗ)
[7] ಇ (ಕ) [8] ದು (ಕ) [9] ಅ (ಕಗಚ) [10] ವಾ (ಕಗ) [11] ಜ್ಜ (ಗ)
[12] ವ ಗೆಲಿಸುವ (ಗ) [13] ಡೆಯಂ (ಕ) [14] ಬ (ಕ)

ರಾಜರೇಜಾವ ತೇಜಿಗೆಣೆಯೆನಿಸುವ ಚೆಲ್ವ । ತೇಜಿಗಳನು ನೀನಪ್ಪೊಯ್ದು
ರಾಜರಿಗಿತ್ತು ತೇಜವ ಪಡೆಯುದೆ ನಿನಗಿದು । ಓಜೆ[1]ಯೆಂದ[1] ಶೋಕನವಗೆ ೩೯

ಹಿಂದಣ ಭವದೊಳು ಪಡೆಯುದಲ್ಲದೆ ಬೇರೆ । ಒಂದನು ಬಯಸಲು ಬಹುದೆ
ಮುಂದೆ [2]ನಿನಗೆ ಸೇರುವದಿಪ್ಪಕೆ ಪ್ರಾಪ್ತಿ । ಬಂದುದೇದನು ಶೋಕನೊ[3]ಡನೆ[3] ೪೦

ನಿನ್ನ ಪುಣ್ಯವು ಘನವಾಗಿದೆ ಅದರಿಂದ । ನಿ[4]ನ್ನ[4] ಸೇರಿದವು ತೇಜಿಗಳು
ಇನ್ನು ಈ ತೇಜಿಯ ಗುಣಗಳ ಪೇಳ್ವೆ ನೀ । ಚೆನ್ನಾಗಿ ಕೇಳೆಂದನವಗೆ ೪೧

ಇದು ಜಲಗಾ[5]ಮಿ[5] ಮತ್ತೊಂದು ಗಗನಗಾ[6]ಮಿ[6] । ಇದಕೆಣೆಯಹುದೆ ಮೂಜಗವು
ಇದ ದೊಡ್ಡದೊರೆಗೀಯೆ [7]ಸಕಲ[7] ಸೌಭಾಗ್ಯವು । ಒದಗುವುದೆಂ[8]ದ[8] ಶೋಕ ೪೨

ಮತ್ತು ಹರುಷದಿಂದಾ ಶೋಕನು ಸಮುದ್ರದತ್ತಗೆ । ಹೃದಯಶುದ್ಧಿಯೊಳು
ಇತ್ತು ಒಪ್ಪಿಸಿದನು ತೇಜಿಯನೆರಡನು । ಚಿತ್ತಜನಿಭಗೆ ಲೀಲೆಯೊಳು ೪೩

ಆ ಸಮಯದೊಳು ಸಮುದ್ರದತ್ತನು ಬಂದು । ಭಾಸುರಗುಣನಿಧಿಯೆನಿಪ
ವಾಸವಪತಿನಿಭ ಶೋಕನಿ[9]ಗೆ[9]ರಗಿ ಮತ್ತೆ । ಮೂಸದ ಮನಭಕ್ತಿಯಿಂದ ೪೪

ಇವನು ಸದ್ಗುಣಮಣಿಭೂಷಣಸಂಯುತ । ಇವನಿಗೆ ನಮ್ಮ ನಂದನೆಯು
ಭುವನ ಪೊಗಳುವಂತೆ ಮದುವೆಯ ಮಾಡುವೆ । ಇವನಿಂದ ಗುಣವಂತರುಂಟೆ ೪೫

ರತಿಪತಿನಿಭರೂಪ ವ್ರತಗುಣಶೀಲಗೆ । ವಿಧಿತವಿಜ್ಞಾನಿಯೆಂದೆನಿಪ
ವ್ರತಗುಣನಿಧಿ ಸಮುದ್ರದತ್ತಗೆ ಶೋಕ । ಹಿತವನೆಣಿಸಿ ಈವೆನೆಂದ ೪೬

ಒಂದುದಿವಸ ಶೋಕ ಕರೆಸಿ ಪುರೋಹಿತ । ರೆಂದದನು ಶುಭಲಗ್ನದೊಳು
ಎಂದಿಗೆ ಬರ್ಪುದದು ಎನೆ ಕೇಳಿ ವಿಪ್ರರು । ಒಂದಾಗಿ ಪೇಳ್ದರಿಂತೆಂದು ೪೭

ಇಂದಿನ ದಿನ ಮೂರಿಕೆ ಶುಭಲಗ್ನವು । ಬಂದವುದೆನೆ ಲೇಸೆನಲು
ಕಂದು ತಾಂಬೂಲದಕ್ಷಿಣೆ ಉಡುಗೊರೆಗಳ ಮುದ । ದಿಂದ ತಂದಿತ್ತು ಶೋಕ ೪೮

ಮತ್ತೆ ತನ್ನಯ ಮಿತ್ರ ಸುಮತಿಯ ಮನೆಗಂದು । ಚಿತ್ತಜರೂಪನೆಂದೆನಿಪ
ಉತ್ತಮಗುಣನಿಧಿ ಸಮುದ್ರದತ್ತನ । ಚಿತ್ತಶುದ್ಧದಿ ಕಳುಹಿದನು ೪೯

---

1 ಯೆಂದನಂ (ಚ) 2 ನಾ (ಕಚ) 3 ಳಗೆ (ಕ) 4 ನಗೆ (ಕ) 5 ಮಿನಿ (ಕ)
6 ಮಿನಿ (ಕ) 7 ಸಾಸಕ (ಕ) 8 ನ (ಕ) 9 ಗೆಯೂ (ಗ)

ಮಾನಿನೀಮಣಿ[1]ಯರು ಇ[1]ರುತಿಹ ಗೃಹದೊ[2]ಳು[2] । ತಾನಿರಬಾರದೆಂದೆನುತ
ಭೂನುತ ಮದವಣಿಗನ ಪರಗೃಹಕಂದು । ತಾ[3]ನಾಗ ಕಳುಹಿದ ಶೋಕ[3] ೫೦

ಕಂದರ್ಪರೂಪನ ಕರೆತಂದು ಹಸೆಯೊಳು । ಇಂದುಮುಖಿಯರು ಕುಳ್ಳಿರಿಸಿ
ಚೆಂದದಿ ಕಮ್ಮೆಣ್ಣೆ ತಿಗುರೆ ವಾದ್ಯ[4]ದ[4] ಧ್ವನಿ । ಅಂದು ತುಂಬಿತು ದೆಸೆದೆಸೆಯ ೫೧

ಚಿನ್ನದ ಕಳಸದಿಂದಲಿ ಪನ್ನೀರ್ಗಳ । ಚೆನ್ನೆಯರೊಲವಿಂದಲೆರೆದು
ಸನ್ನುತದಿಂದ ಮಜ್ಜನವನೆಸ[5]ಗೆ[5] ತಾನು । ಮುನ್ನೀಸರಂತೆ ರಂಜಿಸಿದ ೫೨

ಮೇಲುಚೌಕಳಿ ಕಂಠಮಾಲೆ ಕಡಗರತ್ನ । ಕೀಲಿಸಿ ಚೆನ್ನದಿಂದೆಸೆವ
ಸಾಲುವುಂಗುರವು ಕರಾಂಗುಲಿಗಳೊಳು । ವಿರಾಜಿಸೆ ಲೀಲೆಯಿಂದೆಸೆದ ೫೩

ಅತ್ತಲು ವರದನ ಸುತೆಯನು ಕರೆತಂದು । ವೃತ್ತಕುಚೆಯರೆಲ್ಲ ನೆರೆದು
ಮತ್ತೆ ಮಜ್ಜನವ ಮಾಡುವೆವೆಂದು ಕಮಲೆಯ । ಸುತ್ತಿರುತಿರ್ದರ್ಕೃದೆಯರು ೫೪

ರತ್ನ ಕೆತ್ತಿಸಿದ ಚಿನ್ನದ ಹಸೆಮಣೆಯೊಳು । ಚೆನ್ನೆಯ ಕರೆದು ಕುಳ್ಳಿರಿಸಿ
ಕನ್ನೆಯ ಅಳಕಕ್ಕೆ ಕಮ್ಮೆಣ್ಣೆಯೆರೆದರು । ಸನ್ನುತ ವಾದ್ಯ ತಾ ಮೊಳಗೆ ೫೫

ವಾರಿಜಮುಖಿಯ ಕುಂತಳವನು ಒರಸುವ । ನಾರಿಯ ಕರತಳ[6]ನ[6]ಖವು
ತೋರುತಿರ್ದವು ಕಾರ್ಮುಗಿಲೊಳಗಣ ಮಿಂಚು । ದಾರಿಗಾಣದೆ ತೊಳಲ್ವಂತೆ ೫೬

ನಾರಿಯರೆ[7]ಲ್ಲರು[7] ನೆರೆದು ಪನ್ನೀರ್ಗಳ । ರಾಣಿಗೆ ಕಲಶವನೆತ್ತಿ
ವಾರಿಜಮುಖಿಯರು ಕಾಶೀಜಲವ ತಂದು । ನಾರಿಗೆ ಎರೆದರರ್ತಿಯೊಳು ೫೭

ಕುಂಭವಾಗಲು ಕುಚ ಬಾಹು [8]ಸೊಂ[8]ಡಿಲು ಕರಿ । ಯೆಂಬಂತೆ ಸತಿಯರೊಪ್ಪಿದರು
ಅಂಬುಜದೊಳು ರಾಜಿಪ ಲಕ್ಷ್ಮಿಯಂದದಿ । ಕಂಬುಕಂದರೆಯು ಒಪ್ಪಿದಳು ೫೮

ಜಳಕವ ಮಾಡಿದ ಮೈಬೆಳಗೊಪ್ಪಿತು । ಥಳಥಳಿಸುವ ಹೊನ್ನಬೊಂಬೆ
ಬೆಳದಿ [9]ಒಪ್ಪವ[9]ನಿಟ್ಟಂತೆ ಶೋಭಿಸಿದಳು । ನಳಿನಾಕ್ಷಿ ಮಿಂಚಿನಂದದೊಳು ೫೯

---

[1] ಯೀ (ಗ) [2] ಳು ಈಗ (ಗ) [3] ಕಳುಹಿದ ಶೋಕನಾಗ (ಕ) [4] ದ್ಯ (ಕಗ) [5] ಗ (ಕ)
[6] ಮು (ಕ) [7] ಲ್ಲ (ಕ) [8] ಸು (ಗ) [9] ಪ್ಪ (ಕ)

ಭಾವಜ ಪಿಡಿದ ಪೊನ್ನಲಗೊ ಕಮಾಹಕರೆದೆ । ಭಾವಾರಣ್ಯದ ಸೆರೆ ಸುಡುವಾ
ದಾ[1]ವಾ[1]ಶಿಖಿಯು ತೇಜದಂತೆ ಒಪ್ಪಿದಳಾ । ಭಾಮಿನಿಯರ ಶಿರೋರನ್ನೆ ೬೦

ಜಳಕವ ಮಾಡಿ ದೇವಾಂಗವ ತೊಳೆದುಟ್ಟು । ಪೊಳೆವ ಚಿತ್ರದ ರವಕೆಯನು
ನಳಿನಾಕ್ಷಿ ರಂಜಿಸಿದಳು ಇಂದುವಿನಕಳೆಯಂತ । ಪರಸತಿಯರು ಗೆಲುವಂತೆ ೬೧

ಹಾರ ಪದಕ ಪರಕೋಲೆ ವಜ್ರದ ಸರ । ತೋರಮುತ್ತಿನವಾಲಗುತಿಯು
ಭಾ[2]ರಿ[2]ಯು ಸರಪಣಿ ಕಾಂಚೀದಾಮವನಿಟ್ಟು । ನಾರಿ ಶೃಂಗರವಾದಳಂದು ೬೨

ಕಾಲಲಂದು[3]ಗೆ ಗೆ[3]ಜ್ಜೆ ಕಿಱುಪಿಲ್ಲಿ ಮೆಂಟಿಕೆ । ಮೇಲುಮುತ್ತಿನ ಹಸ್ತಗಟ್ಟು
ಸಾಲು ಕಟ್ಟಾಣಿಯಸರ ರತ್ನಮುದ್ರಿಕೆ । ಬಾಲೆಯಂಗುಲಿಗೆ ಒಪ್ಪಿದವು ೬೩

ಕಸ್ತೂರಿ ತಿಲಕ ಚಂದನದುಣ್ಬು[4] ಮಲ್ಲಿಗೆ । ಮಸ್ತಕದೊಳು ಒಪ್ಪುತಿರಲು
ವಿಸ್ತರಿಸುವರಳಲ್ಲ ಕಲ್ಯಾಣ[5]ದ[5] । ವಸ್ತುವನೇನ ಬಣ್ಣಿಪೆನು ೬೪

ಬಣ್ಣದುಟಿಯ ಭಾಮಿನಿಯ ಮಸ್ತಕದೊಳು । ಸಣ್ಣಜಾಜಿಯ ಸರಗಳನು
ಕಣ್ಣಗಂಡನ ಕಾಲ್ಗ[6]ತ್ತಿಗೆ[6] ಬಿಟ್ಟರು । ಹೆಣ್ಣಿಗ[7]ಳಧಿ[7]ನಾಯಕಿಗೆ ೬೫

ಮದನನ ಮಂಗಲಲಕ್ಷ್ಮಿಯಂಬಂದದಿ । ಸುದತಿ ಶಿರೋಮಣಿಯೆನಿಸಿಯೆ
ಸದಮಲಗುಣನಿಧಿ ಮಂಗಲಪೂಜೆಯ । ಮದನವಿಜಯಗೆ ಮಾಡಿಸಿ[8]ದನು[8] ೬೬

ಮತ್ತೆ ಕಲ್ಯಾಣಮಂಟಪವನು ನವರತ್ನ । ತೆತ್ತಿಸಿ ತಾನು ಮಾಡಿಸಿದ
ಸುತ್ತಲು ಹಸುಹಂದರಕೆ ಪೂಮಾ[9]ಲೆ[9]ಸಾಲಿಂದ । ಎತ್ತಿಕಟ್ಟಲು ಚೆಲುವಾಯ್ತು ೬೭

ಹಸಿರುಹಂ[10]ದರಕೆ[10] ಹನ್ನೆರಡು ಕಂಬವನಿಕ್ಕಿ । ಎಸೆವ [11]ರಾಶಿ[11]ಯ ಸಾಕ್ಷಿಮಾಡಿ
ಹಸನಾದಿ ರಘುಲ್ಲಿ ಪೂಮಾಲೆ ಸಾಲಿಂದಲಿ । ಹಸನಾಗಿ ರಂಜಿಸಿತು ಹಂದರವು ೬೮

ಕನ್ನಡಿಕದಪಿನ ಕಮಲವದನೆ ಹೊ[12]ಸ । ಹೊನ್ನ[12]ಬಣ್ಣದ ಮೈಸೊಬಗ
ಚೆನ್ನೆಯ ಮೊಗವ ನೋಡಲು ತಾ ಕ್ಷಣದಲ್ಲಿ । ರನ್ನಗನ್ನಡಿ ತಂದಿ[13]ಟ್ಟರಾ[13]ಗ ೬೯

---

1 ವಾ (ಕ) 2 ರತಿ (ಕ) 3 ಗೆ (ಗ) 4 ಣ್ಬ (ಕ) 5 ವ (ಕ) 6 ಗೆ (ಕ)
7 ಳಧಿಕ (ಕ) ಆದಿ (ಗ) 8 ದಳು (ಗ) 9 ಲೆಯ (ಕ) 10 ದ (ಕ) 11 ನಾಸಿ (ಕಚ)
12 ನ್ನ (ಕ) 13 ಪೆಳ (ಕ), ಟ್ಟಳಾ (ಚ)

ಅಂಬುಜಾಕ್ಷನ ಅರಸಿಯು ಸೊಬಗನು ಗೆಲ್ವ । ಕಂಬುಕಂದರದಿಂದಲೆಸೆವ
ಕುಂಭಕು[1]ಚೆಯು[1] ಪೊಗ ನೋಡಲು ಹೇಮದ । ಕುಂಭವ ತಂದಿಟ್ಟಳಾಗ ೭೦

ಪೊಳೆವ ಪೊಂಬಾಳೆದೊಡೆಯು ಅಳಿಗುರುಳಿನ । ತಳಿರಡಿ ತಾರಾನಖದ
ಎಳೆವೆಣ್ಣಿನ ಮೊ[2]ಗವ[2] ನೋಡಲು ಹೇಮದ । ಕಳಸವ ತಂದಿಟ್ಟಳಾಗ ೭೧

ಇಕ್ಷುಕೋದಂಡನ ಸತಿಯು ಗೆಲುವ ಅಂಬು । ಜಾಕ್ಷಿಯು ಪೊಗ ನೋಡಲವಳು
ತಕ್ಷಣದೊಳು ಸಣ್ಣಶಾಲಿಯು[3]ಖ[3]ಂಡಿತ । ಅಕ್ಷತೆ ತಂದಿಟ್ಟಳಾಗ ೭೨

ಗಂಧ ಕಸ್ತೂ[4]ರಿ ಸಾಧು[4]ಸಿರಿಪಚ್ಚೆ ಮುಡಿವಾಳ । ಕುಂದದೆ ಕುಂಕುಮವೆರಸಿ
ಇಂದುಮುಖಿಯರು ತಂದಿಟ್ಟರು ಹರುಷದಿ । ಹಂದರಮಧ್ಯ ಮಂಟಪದಿ ೭೩

ಬಾಲಮೃಗಾಕ್ಷಿಯ [5]ಬ[5]ಂದುಗೆಯಧರದ । ಬಾಲೆಯು ಪೊಗ ನೋಡಲವಳು
ಲೀಲಾಮಾತ್ರದಿ ಮಲ್ಲಿಗೆಹೂವ ಕಟ್ಟಿದ । ಮಾಲೆಯು ತಂದಿಟ್ಟಳಾಗ ೭೪

ಹೊಸತಾಗಿ ಮಾಡಿದ [6]ಹ[6]ಸೆಯುಕಲ್ಲನೆ ತಂದು । [7]ಸು[7]ನಿತ್ತು ಹಂದರದೊಳಗೆ
ಈ ಪರಿಯೊಳು ಮಂಗಳವಸ್ತುವನೆಲ್ಲ । ಚಾಪಲಾಕ್ಷಿಯರು ತಂದಿಡಲು ೭೫

ಏಪೇಳ್ವೆ ವಿವಹಕ್ಕೆ ತಕ್ಕ ವಸ್ತುಗಳನ್ನು । ರೂಪುಸಂಪನ್ನ ಬರಿಸಿದನು
ಧಾತ್ರಿಯೊಳಿರುವ ಜನರಿಗೆಲ್ಲ ಅತಿಶಯು । ನೂತನವಾದಿರುವಂತೆ ೭೬

ಬಂಡುಣಿಗುರುಳ ಭಾವಕಿಯು ನೋಡಲು ತಾ[8]ನು[8] । ತೊಂಡಲ ತಂದು ಮಲ್ಲಿಗೆಯ
ದಂಡೆವೆರಸಿ ಕನ್ನಿಕೆಯು ಮುಡಿಗೆ ಪ್ರಚಂಡೆ । ಸೂಡಿದಳರ್ತಿಯಿಂದ ೭೭

ಮತ್ತೆ ಪುರೋಹಿತರಾಗಲು ಘಟಿಕೆಯು । ಪಾ[9]ತ್ರೆಯೊಳು[9] ಘಳಿಗೆವಿಟ್ಟಲನು
ಚಿತ್ತಶುದ್ಧದಿ ನೋಡುತಿರಲು ಲಗ್ನವು ಬಂದು । ಹೊತ್ತು ಸವಿಸಾಪವಾಯ್ತೆನಲು ೭೮

ಮತ್ತೆ ಸಮುದ್ರದತ್ತನು ಶೃಂಗರವಾಗಿ । ಮುತ್ತಿನಿಂದೆಸೆವ ಬಾ[10]ಸಿಗವ[10]
ನೆತ್ತಿಯೊಳಗೆ ಇಟ್ಟು ವಾದ್ಯದ ಘೋಷದಿ । ಚಿತ್ತಜನಿಭ ಬಂದನಾಗ ೭೯

---

[1] ಚದೆ (ಕ) [2] ಗ (ಕ) [3] ಕ (ಕಗ) [4] ರಿ (ಕ) [5] ಬ (ಕ) [6] ಸಿ (ಕಖ)
[7] ಶಶಿಯಿಂ (ಕಗ) [8] ವು (ಗ) [9] ತ್ರೆ (ಕ) [10] ಸಿಂಗ (ಗ)

ಹಂದರದಡಿಯೊಳು ವಿಪ್ರರು ತೆರೆಯನು । ತಂದು ಹಿಡಿದು ಮಂಗಲವ
ಚಂ[1]ದದ[1]ಷ್ಟಕಗಳ ಪಾಡುತಿರ್ದರು ಲಗ್ನ । ಬಂದು ನಿಂದರು ಮದವಣಿಗೆ ೮೦

ಬಾಲಾರ್ಕನುದಯಾದ್ರಿ ಏಱುವಂದದಿ ತಾನು । ಮೇಲುವೆಟ್ಟಕ್ಕಿಗೂಡೆಯೊಳು
ಶಾಲಿತಂಡು[2]ಲದ[2] ಮೇಲ್ಲಕ್ಷಣಪಾದವ । ಲೀಲೆಯಿಂದಿಟ್ಟು ನಿಂದಿರ್ದ ೮೧

ಅತ್ತಲು ಕಮಲೆಯು ಶೃಂಗಾರವನು ಮಾಡಿ । ಮೊತ್ತದಾಳಿಯರೆಲ್ಲ ಬಳಸಿ
ಸುತ್ತ ನಿಂದಿರ್ದರು ವಾ[3]ದ್ಯದ[3] ಘೋಷ[4]ಣೆ[4] । ಮುತ್ತಿತು ನಭದೆಸೆಗಳನು ೮೨

ಕಂಬುಕಂದರ[5]ದ[5] ಕಮಲಮುಖಿ ತಳಿರಡಿ । ಬಿಂಬಾಧರೆ ಮಂದಯಾನೆ
[6]ತುಂಬಿ[6]ಗುರುಳ ನೀರೆಯರಾ ಪೆಣ್ಣಿನ । ಬೆಂಬಳಿಯಯಿದ್ದರಾಗ ೮೩

ತಳಿರಡಿ ತಾರಾನಖ ಬಾಳೆದೊಡೆಗಳ । ಸುಳಿನಾಭಿಯು ಚಂದ್ರಮುಖದ
ಕಳಶಕುಚದ ಕಾಮಿನಿಯರಾ ಪೆಣ್ಣಿನ । ಬಳಸಿ ನಡೆದರೊಗ್ಗಿನಲಿ ೮೪

ಈ ರೀತಿ ಊಳಿಗವೆಣ್ಗಳೆಲ್ಲರು ಸಹ । [7]ನಾ[7]ರಿ ಬಂದಳು ಹರುಷದೊಳು
ಸಾರಿಬಂದಾಗ ಮಂಟಪದೊಳು [8]ಹ[8]ಸೆಕಲ್ಲ । ನೇರೆ ಏಱಿ[9]ದಳರ್ತಿಯೊಳು ೮೫

ಇಕ್ಕೆಲದೊಳು ಪೊಂದಟ್ಟೆಯೊಳಗೆ ಶಾಲಿ[ಯ] । ಅಕ್ಕಿಯ ಪಿಡಿದು ನಿಂದಿರಲು
ಕಕ್ಕಸಕುಚದ ಕಾಮಿನಿಯರು ಇದ್ದರು । ದಿಕ್ಕುದಿಕ್ಕಿನೊಳಿಡೆವಿಡ[10]ದೆ[10] ೮೬

ಅತ್ತಲು ಶುಭಲಗ್ನವೇಳೆ ಆಯಿತುಯೆಂದು । ಉತ್ತಮ ವಿಪ್ರಸಮೂಹ
ಎತ್ತಿ ಗಂಟೆಯು ಪೊಯ್ಯೆ ನಾದವ ಕೇಳ್ದೆಲ್ಲ । ಸುತ್ತ ಬಳಸಿನಿಂದ[11]ರಾಗ[11] ೮೭

ದೀಪ ದೀ[12]ವಟಿ[12]ಗೆಗಳೆಲ್ಲ ವಾದ್ಯಂಗಳು । ವ್ಯಾಪಿಸೆ ಅಮರಲೋಕವನು
ಆ ಪೇಳ್ವೆ ಸತಿ ಪುರುಷರು ಮುತ್ತಿನಾಕ್ಷತೆ । ಸ್ಥಾಪಿಸಿದರು ಮಸ್ತಕದಿ ೮೮

ಮದವಣಿಗನ ಹಸ್ತ[13]ವಲ್ಲಿ[13] ಲೀಲೆ[14]ಯಿಂದಲಿ[14] । ಮದವತಿ ಹಸ್ತವನಿಟ್ಟು
ಚದುರಶೋಕನು ಧಾರೆ ಧರ್ಮಕಲ್ಯಾಣವ । ವಿಧಿ ತಪ್ಪದಂತೆ ಅರ್ತಿಯೊಳು ೮೯

---

[1] ದಾ (ಕ) [2] ಲ (ಚ) [3] ದ್ಯ (ಕ) [4] ಣೆಯಿಂದ (ಕ) [5] ರ (ಗ) [6] ತುಱು (ಕ)
[7] ಸಾ (ಕ) [8] ಕ (ಕ) [9] ಟಿ (ಕ) [10] ದ (ಗ) [11] ರೆಲ್ಲ (ಕ) [12] ವಿ (ಗ)
[13] ದಿ (ಗ) [14] ಯೊಳಂದು (ಕ)

ಹಂದರವನಡಿಯೊಳು ವಿಪ್ರರು ಹವನವ । ಚಂದದಿಂದಲಿ ಮಾಡಿ ಬಳಿಕ
ಬಂದಾಗ ಮದುಮಕ್ಕಳು ಶ್ರೀಪ್ರದಕ್ಷಿಣೆ । ಯಿಂದಾಹುತಿಯ ನಡೆಸಿದರು ೯೦

ತನ್ನಯ ಸತಿಯ ದಕ್ಷಿಣಹಸ್ತಾಂಗುಲಿಯನು । ಚೆನ್ನಾಗಿ ತನ್ನಯ ವಾಮಕರದಿ
ಬಿನ್ನಣವಿಂಗೆ ಪಿಡಿದೈದಿದ ಸ್ಮರ ರತಿ । ತನ್ನ ಮಂದಿರಕೈದುವಂತೆ ೯೧

ಆ ಸಮಯದಿ ಪರದನ ಸತಿ ವೀತಶೋಕೆ । ಲೇಸಾಗಿ ಮುತ್ತೈ[1]ದೆರಿಗೆ[1]ಲ್ಲ
ಭಾಸುರಫಲಪುಷ್ಪ ಗಂಧ ತಾಂಬೂಲವ । ಓಸರಿಸದೆ ಇತ್ತ[2]ಳಾ[2]ಗ ೯೨

ಪರಿಮಳ ಗಂಧ [3]ಪೂಮಾಲೆ ತಾಂಬೂಲಾ[3]ದಿ । ಭರಿತದಿಂದೆಸೆವ ಬಾಗಿನವ
ಪರದನ ಸತಿ ಸುವಾಸಿನಿಯರ್ಗೆ ಇತ್ತಳು । ಹರುಷದಾ ಹಿರಿಯವರು ೯೩

ಈ ಪರಿ ಉಡುಗೊರೆ ದಕ್ಷಿಣೆ ತಾಂಬೂಲ । ಒಪ್ಪಿಸೆ ಹರುಷಲಂತವರು
ತಪ್ಪದೆ ಸರ್ವರಿದಿತ್ತ ತಾಂಬೂಲ[4]ವ[4] । ಒಪ್ಪಿಸೆ ಪೋದರಾ ದ್ವಿಜರು ೯೪

ಬಂಧುಗಳೆಲ್ಲರು ತಂದುಡುಗೊರೆ[3]ಯನು । ಚಂದದಿಂದಲಿ ಶೋಕ ತನ್ನ
ನಂದನೆ ಸಹ ಅಳಿಯಗೆ ಹೊದ್ದಿಸಲವ । ನೇಂ ಚದುರನೋ ಧರೆಯೊಳಗೆ ೯೫

ನಾ[5]ಗ[5]ವಲಿಯು ಕಂಬವಲಿಯು ನಿರ್ವರ್ತಿಸಿ । ರಾಗದಿಂದಲಿ ಬಂಧುಜನಕೆ
ಆಗಿಸಿ ಅವ್ರತಣ ಉಡುಗೊರೆ[3]ಗಳ ಕೊಟ್ಟು । ರಾಗಿಸಿದನು ಮನದೊಳಗೆ ೯೬

ಘನವಾಗಿ ಬಂದಿರ್ದ ಬಂಧುಗಳೆಲ್ಲರ್ಗೆ । ವಿನಯುವ ನುಡಿದು ಕೈಮುಗಿದು
ಅನುನಯದಿಂದ ಬೀಳ್ಕೊಟ್ಟನು ಪರದನ । ಘನವನೇನ ಬಣ್ಣಿಪೆನು ೯೭

ಇಂತು ಬಂಧುಗಳಿಗೆ ಸಂತೋಷದಿಂ[6]ದ[6]ವ । ಸಂಕವ ತುಂಬಿಸಿ ಬಳಿಕ
ಅಂತವಿಲ್ಲದ ಯಾಚಕರಿಗೆ ತ್ಯಾಗವ । ತಾಂ ತಳುವದೆ ಕೊಟ್ಟನಾಗ ೯೮

ಸಂತೋಷದಿಂದ ಸಮುದ್ರದತ್ತಗೆ ಶೋಕ । ತಾಂ ತಳುವದೆ ವಸ್ತ್ರಾಭರಣ
ಅಂತವಿಲ್ಲದೆ ಕೊಟ್ಟು ಮಗಳಿಗೆ ಪ್ರೀತಿಯೊಳು । ಕಂತುಸನ್ನಿಭನಿಂತು ನುಡಿದ ೯೯

---

[1] ದೆ (ಕ) [2] ವಾ (ಗ) [3] ತಾಂಬೂಲ ಪುಷ್ಪಗಳಾ (ಕಚ) [4] ಲ (ಗ) [5] ಣಾ (ಕ)
[6] ದಲಿ (ಕ)

ನಿನ್ನ ಮನಸು ಬಂದ ವಸ್ತ್ರಾಭರಣಗಳ । ಕನ್ನೆ ನೀನೊಯ್ಯೆಂದನಾಗ
ಚಿನ್ನ ರನ್ನದಿ ಮಾಡಿದ ವಸ್ತ್ರಾಭರಣವ ಕಟ್ಟಿ । ತಾನಾಗ ಪೆಂಡಿಗಳನು ೧೧೦

ಪೆಟ್ಟಿಗೆಯೊಳಗೆ ತುಂಬಿದಳು ಆಭರಣವ । ಪುಟ್ಟಿತು ಮೋಹ ಶೋಕನಿಗೆ
ಇಷ್ಟು ಸಾಲದುಯೆಂದು ಸುತೆಗೆ [1]ಹೊ[1]ನ್ನನು ಮನ ।ದಿ[2]ಟ್ಟದಿ
ಕೊಟ್ಟನಂದ[2]ವನು ೧೧೧

ರತಿಯೊಳಂಗಜ ಕ್ಷೀರಸುತೆ[3]ಯೊಳು[3] ಹರಿ ದಿರಿ । ಸುತೆಯೊಳು ಈಶ್ವರ
ವಾಣಿಯೊಳು
ಚತುರ್ಮುಖ ಸೀತೆಯೊ[4]ಳು[4] ರಾಮನಿರ್ಪಂತೆ । ಸತತ ಕಾಮಿನಿಯೊಳಗಿರ್ದ ೧೧೨

ಅತಿಪ್ರೀತಿಯಿಂದ ಸಮುದ್ರದತ್ತನು ನಿತ್ಯ । ಅತಿರೂಪವತಿ ಕಮಲೆಯೊಳು
ಹಿತಗೂಡಿ ಸುಖದೊಳಗಿ[5]ರ್ದು ತ[5]ಮ್ಮಾರ್ಗ । ಯುತವಾಗಿ ಪೋಗಬೇಕೆಂದು ೧೧೩

ಮಾವಾಜಿ ಕೇಳು ನಮ್ಮವರೆಲ್ಲ ಸೀಮೆಗೆ । ತಾವೀಗ ಪೋಗುತಲಹರೆ
ಈ ವೇಳೆಯೊಳು ಭೈತ್ರವನೇರಿ ಶರಧಿಯು । ನಾವು ದಾಂಟಲುಬೇಕೆಂದ ೧೧೪

ನಿಮ್ಮ ಮನಸು ಬಂದಂತೆ ಆಗಲಿಯೆಂದು । ಸ[6]ಮ್ಮ[6]ತವಾಕ್ಯವ ನುಡಿದು
ತನ್ನ ಮಗಳಿಗೆ ಬೇಕಾದ ವಸ್ತುವನೆಲ್ಲ । ಸನ್ನುತದಿಂದಿತ್ತ ಮುದದಿ ೧೧೫

ಮತ್ತೆ ತನ್ನಳಿಯಗೆ ವಸ್ತ್ರಾಭರಣವ । ಉತ್ತಮತೇಜಿ ಸಮೇತ
ಚಿತ್ತಶುದ್ಧದಿ ಈಯೆ ಮಾವಗೆ ಹರುಷದಿ । ಮತ್ತೆಬಿಗಲು ಹರಸಿದನು ೧೧೬

ಶುಭದಿನ ತಿಥಿ ವಾರ ಲಗ್ನವ ತಿಳಿ[7]ದು[7] ತಾ । ಶುಭವೆಂದು ವಾರಿಧಿದತ್ತ
ಶುಭಶಕುನಂಗಳ ಕೈಕೊಂಡು ಪೊಜಿಮಟ್ಟು । ವಿಬುಧವಿಪ್ರರು ಹರಸಿದರು ೧೧೭

ಬಂಧುಗಳಿಗೆ ತಾನು ವಂದನೆಯನು ಮಾಡಿ । ಕಂದರ್ಪನಿಭ ಕಮಲೆಯನು
ಒಂದಾಗಿ ಒಡಗೊಂಡು ಬಂದನು ಆಪೂರ । ಮುಂದಣ ನಂದನವನಕೆ ೧೧೮

ಅಲ್ಲಿರ್ಪ ಪುರದರ ಸಭೆಗೆಲ್ಲ ವಂದಿಸಿ । ಉಲ್ಲಾಸದಿಂದ ತಾನಾಗ
ಪುಲ್ಲಾಸ್ತ್ರವಿಜಯನೆ ಗತಿಯೆಂದು ಜಲಧಿಗೆ । ಮೆಲ್ಲನೆ ನಡೆದ[8]ನ[8]ರ್ತಿಯೊಳು ೧೧೯

---

[1] ಶಾ ಹೊ (ಕ) [2] ಷ್ಪಕೈ ಭೇದ (ಗ) [3] ತೇ (ಕ) [4] ಳ್ (ಚ) [5] ರ್ದನಂ (ಚ)
[6] ಮು (ಗ) [7] ದ (ಗ) [8] ರ (ಗ)

ಪರದೇಶದಿಂದಲಿ ಬಂದಿರ್ದ ಪರದರ್ಗೆ । ಕರವ ಮುಗಿದ ಶೋಕನಾಗ
ಪರಮಸಖರು ನೀವು ನಮಗೆಂದು ವಿನಯದಿ । ಒರೆದನು ಅವರೊಳಿಂತೆಂದು ೧೧೦

ಸಮ್ಮತಿಯನು ನಮ್ಮ ಸುತೆಯನು ಈಗಲು । ನಿಮ್ಮೊತ್ತನೈದಿಪೆವೆಂದು
ನಿಮ್ಮೂರಿಗೆ ಸೇರಿ[1]ಸಿಯೆಂ[1]ದು ಹರುಷದಿ । ಸಮ್ಮತವಾಕ್ಯವ ನುಡಿದ ೧೧೧

ಅಂತಾಗಲೆಂದೆಲ್ಲ ಪರದರು ಪೇಳಲು । ಸಂತೋಷದಿಂದ ಶೋಕನಿಗೆ
ಪಿಂ[2]ತ[2]ಕ್ಕೆ ತಿರುಗಿದನತ್ತಲು ಪರದರು । ಮತ್ತೆ ನಡೆದರಬ್ಧಿಯೆಡೆಗೆ ೧೧೨

ಮದನಸ್ವರೂಪ ಮಂಗಲಮೂರ್ತಿ ಸುಜನರ । ಹೃದಯವಾರಿಧಿಚಂದ್ರಮನು
ಸದಮಲಗುಣನಿಧಿ ಒಪ್ಪಿದನೀಗಲು ಸುದತೀಜನಕೆ ಮನಸಿಜನು ೧೧೩

ಇದು ಭವ್ಯಜಿನಚಿತ್ತಕುವಲಯಚಂ[3]ದ್ರ[3]ಮ । ತ್ತಿದು ಸಜ್ಜನರ ಕರ್ಣಾಭರಣ
ಇದು ಸಮ್ಯಕ್ತ್ವವೃಕ್ಷಕೆ ಬೀಜ ಭಾವಿಸೆ । ಇದು ಮುಕ್ತಿಸತಿಯ ಸೌಭಾಗ್ಯ ೧೧೪

ಕ್ಷಿತಿಧರವೈ[4]ರಿಯ[4] ಸುತನ ಭಾವನ ಪ್ರಿಯ । ಸತಿಯ ಸುತನ ಮದವಳಿದು
ಗತಿನಾಲ್ಕ ಗೆಲಿದ ಸುಪಾರಿಶ್ವದೇವ ಸದ್ಗತಿಯ । ಪಾಲಿಸು ದಯದಿಂದ ೧೧೫

---

[1] ಪಿಂ (ಗ) [2] ದ (ಗ) [3] ದ್ರಮ (ಕ) [4] ರಿ (ಗ)

## *ಹದಿನಾಲ್ಕನೆಯ ಸಂಧಿ

ಶತಮಿಂದ್ರಮೌಲಿಕೀಲಿತ ರತ್ನರಂಜಿತ । ಶತಪತ್ರಯುಗಲ ಶೋಭಿತನೆ
ನುತಜನಕಲ್ಪಭೂರುಹ ರಕ್ಷಿಸೆನಗೆ ಸ । ನ್ಮತಿದೋಱು ಸುಪಾರಿಶ್ವಜಿನಪ ೧

ಶುಭದಿನದೊಳು ಪರದರುಯೆಲ್ಲ ಒಂದಾಗಿ । ಅಭವಗೆ ಪೂಜೆಯನೆಸಗಿ
ವಿಭವದಿ ವಾರಿಧಿಯೊಳಗಣ ಚೈತ್ರವ । ಶುಭವಾಗಲೆಂದೇಱಿದರು ೨

ಮತ್ತೆ ಸಮುದ್ರದತ್ತನು ಸತಿಸಹವಾಗಿ । ಉತ್ತಮಜಿನರ ಪಾದವನು
ಚಿತ್ತದೊಳಗೆ ಇಟ್ಟು ಹಡಗೇಱಲಾಕ್ಷಣ । ಅತ್ತ ಪಾರಿತು ಜಲಧಿಯೊಳು ೩

ವಾರಿಧಿಯೊಳು ಸುಖದಿಂದ ಚೈತ್ರ ನಡೆಯಲು । ಊರ ಸೇರುವ ಆಸೆಯಿಂದ
ನಾರೀಸಹಿತ ಸಮುದ್ರದತ್ತನು ತಾನು । ಭೂರಿವೈಭವದೊಳಿಯ್ದಿದನು ೪

ಮತ್ತೆ ಚೈ[1]ತ್ರಕೆ[1] ಮುಖ ಪರದನು ಆಗಲು । ಉತ್ತಮಜಲಗಾಮಿನಿಯನು
ಚಿತ್ತಶುದ್ಧದಿ ನನಗಿತ್ತಲ್ಲದೆ ಚೈತ್ರ । ಹತ್ತಲೀಯೆನೆಂದು ನುಡಿದ ೫

ಕೆಲಕಾಲ ಜೀತ[2]ವನಿ[2]ದ್ದು ಕೂಲಿಗೆ ಈ[3]ಗ[3] । ಜಲಗಾಮಿನಿಯನು ತಂದಿಪಗೆ
ಫಲಮಾಡುವದು ಏನೆಂದು ಸತಿಯುಸುಹ । ಜಲಗಾಮಿನಿಯು ಮೇಲೇಱಿದನು ೬

ವಾರಿಧಿಯೊಳು ತೇಜಿ ನೀರ ಸೋಂಕುತ ಬರೆ । ನಾರೀಸಹಿತ ನಲವಿಂದ
ಸೇರಿ ಗಗನದಲಿ ಗಗನಗಾಮಿನಿ ಬರೆ । ವಾರಿಧಿಪಾರ್ಶ್ವಪಿಡಿದಿರಲು ೭

ಈ ರೀತಿಯೊಳು ಬಂದು ವಾರಿಧಿಯನು ದಾಂಟಿ । ಸೇರಿದರು ತಮ್ಮ ದೇಶವನು
ವಾರಿಜಾಕ್ಷನು ಲಕ್ಷ್ಮೀಸಹಿತ ಉಚ್ಚೈಃಶ್ರವ । ನೇಱಿ ಧರೆಗೆ ಬರುವಂತೆ ೮

---

[1] ತ್ರ (ಜ) [2] ವಿ (ಜ) [3] ಗಲು (ಜ) * ಈ ಸಂಧಿಯ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಬಂದು ತಮ್ಮೂರ ನಂದನವನದೊಳಗಾ । ನಂದದಿ ಕುಳ್ಳಿರಲತ್ತ
ಕುಂದದೆ ಬಂಧುಗಳೆಲ್ಲರು ಕೇಳ್ದಾ । ನಂದಹೃದಯರಾದರಾಗ ೯

ಅಲ್ಲಿಂದ ಶುಭದಿನದೊಳು ಪುರವನು ಪೊಕ್ಕು । ನಿಲ್ಲದೆ ತಮ್ಮ ಮಂದಿರಕೆ
ಸಲ್ಲೀಲೆಯಿಂದ ಸಮುದ್ರದತ್ತನು ಬಂದು । ಎಲ್ಲಸಹಿತ ಹೊಕ್ಕು ಗೃಹವ ೧೦

ಉತ್ತಮವಾಜಿಗಳ್ತಂದನೆಂಬುದ ಕೇಳಿ । ಚಿತ್ತಜರೂಪ ರಾಜೇಂದ್ರ
ಚಿತ್ತಶುದ್ಧದಿ ಕರೆಯಿಸಿ ವಾಜೀಗಮನವ । ಮತ್ತೆ ತಾ ನೋಡುವೆನೆಂದು ೧೧

ಆಗ ಭೂಪಾಲನು ತೇಜಿಯ ತರಿಸಿ ತಾ । ಬೇಗ ವ್ಯೆಯಾಳಿ ಮಾಡಿಸಲು
ರಾಗದಿ ನೋಡಿದ ಜನರೆಲ್ಲ ಮನದೊಳು । ರಾಗಿಸಿ ನುಡಿದರಿಂತೆಂದು ೧೨

ರಾಜಸಹಿತ ಸರ್ವಜನರು ನೋಡುತಲಿರೆ । ಸೋಜಿಗವೆನೆ ಗಗನದೊಳು
ವಾಜಿ ನೆಗೆದು ಪಾರುತಿರೆ ನೋಡಿ ಭೂಪಾಲ । ತೇಜಿಯ ಗುಣಕೆ ಮೆಚ್ಚಿದನು ೧೩

ಬಂದುದು ಕಡುಲೇಸುಯೆಂದು ಬಂಧುಗಳೆಲ್ಲ । ಚೆಂದದಿ ಕೇಳಿ ಮತ್ತವಗೆ
ಕುಂದದೆ ಸ್ನಾನ ಭೋಜನಗಳ ಮಾಡಿಸೆ । ಕಂದರ್ಪರೂಪನೊಪ್ಪಿದನು ೧೪

ಆ ಮಜುದಿವದಿ ಸಮುದ್ರದತ್ತನು ತಂದು । ಪ್ರೇಮದಿ ತೇಜಿಗಳೆರಡ
ಭೂಮಿಪಾಲಕಗೆ ಒಪ್ಪಿಸೆ ಪದಗೆ ತಾನು । ಕಾಮಿತಾರ್ಥವನೀವೆನೆಂದು ೧೫

ತನ್ನ ರಾಜ್ಯದೊಳರ್ಧವನಿತ್ತು ಭೂಪಾಲ । ತನ್ನ ಸುತೆಯ ಧಾರೆಯೆರೆದು
ಚೆನ್ನಾಗಿ ನುಡಿದು ವಸ್ತ್ರಾಭರಣವನಿತ್ತು । ಮನ್ನಿಸಿ ಮನೆಗೆ ಬೀಳ್ಕೊಟ್ಟ ೧೬

ನಂಟರು ನನಗೆ ದಾರಿದ್ರ ಬಂದಾಗಲು । ಭಂಟರಂದದಿ ಕಾಣುತಿಹರು
ಗಂಟು[1]ಳ್ಳ ಕಾಲ[1]ಕ್ಕೆ ನಮ್ಮವನೆಂಬರು । ತುಂಟರಲ್ಲವೆ ನಂಟರೆಂದ ೧೭

ಸಿರಿ ಬಂದಿತೆಂದು ನಂಬುವನು ಹೆಡ್ಡನು ಮತ್ತೆ । ಸಿರಿಯೆಂಬುದ[ದು] ಸಂಜೆಗೆಂಪು
ಸಿರಿ ಮೇಘದೊಡ್ಡು ಮಂಜಿನಪುಂಜ ಸಂಜೆಯ । ನೆರವಿಯಲ್ಲವೆಯೆಂದನಾಗ ೧೮

---

1 ಗಳ್ಳವಾಲಗ (ಗ)

ಮಿಂಚಿನಮಾಲೆ ವಾರಿಧಿತೆರೆನೊರೆಪಿಂಡು । ಅಂಜುಗುಳಿಯು ಚಿತ್ತ ಚಳಕ
ಬೆಂಚಿಯು ನೀರಸೊಬ್ಬುಳಿಕೆ ಕಾಮನಬಿಲ್ಲು । ಸಂಚಲವೈಸೆ ಭಾವಿಸಲು ೧೯

ಪುಣ್ಯದಿಂದಲಿ ಸುಖ ಪಾಪದಿಂದಲಿ ದುಃಖ । ಪುಣ್ಯವಂತರು ತಿಳಿದಿವನು
ಪುಣ್ಯವ ಮಾಡುವರೀಗಲು ಪಾಪಿಗಳು । ಪುಣ್ಯದ ತೇಜನ ನೋಡುವರೆ ೨೦

ದುರ್ಜನರಿಗೆ ಸಿರಿ ಬಂದರೆ ಧರ್ಮಕ್ಕೆ । ಸಜ್ಜಾಗಿ ಇರುವರೆ ತಾವು
ಕಜ್ಜವಿಡಿದ ಜನ ಮಱುಗುವಂದದಿ ಈಗ । ನಿರ್ಘರಿಸುವರು ಧರ್ಮವನು ೨೧

ಧರ್ಮದಿಂದಲಿ ಭಾಗ್ಯ ಬಂದುದು ತಾನೆಂದ । ಧರ್ಮವ ಮಱೆಯುರುತ್ತಮರು
ನಿರ್ಮಳಧರ್ಮದಿ ನಿತ್ಯ ನೆಗಳಿ ತಾವು । ಕರ್ಮವ ಲಯಮಾಡುತಿಹರು ೨೨

ಮುನ್ನ ಮಾಡಿದ ಫಲದಿಂದಲಿ ಸುಖವೆಂದು । ಸನ್ನುತದಿಂ ತಿಳಿದವರು
ಭಿನ್ನವಿಲ್ಲದೆ ಉತ್ತಮರು ಧರ್ಮಂಗಳ । ಇನ್ನು ಮಾಡದೆ ಸುಮ್ಮನಿಹರೆ ೨೩

ದಾನಪೂಜೆಯು ಶೀ[1]ಲ ಉ[1]ಪವಾಸಗಳ ಮಾಡಿ । ಹೀನಕರ್ಮವನೆಲ್ಲ ಕೆಡಿಸಿ
ತಾನು ಮಾಡಿಸಿದನು ಜಿನವಾಸಗಳ ನೂಱ । ನೇನೆಂಬೆನ[2]ವನ[2] ಧರ್ಮವನು ೨೪

ಇವನಲ್ಲದುಂಟೆ ಧರ್ಮದೊಳೀಂದೆಲ್ಲರು । ಭುವನದೊಳು ಕೊಂಡಾಡುತಿಹರು
ಭವಹರ ಜಿನರ ಪ್ರತಿಷ್ಠೆಗಳನು ತಾನು । ಸವಿನಯದಿ ಮಾಡುತಿಹನು ೨೫

ಮತ್ತಾ ಕೌಶಂಬೀಪುರದೊಳು ಧಾರ್ಮಿಕ । ಚಿತ್ತಜಸನ್ನಿಭರೂಪ
ಉತ್ತಮವೃಷಭದಾಸನು ಆತನ ಸತಿ । ಚಿತ್ರವಲ್ಲಭೆ ಗುಣವತಿಯು ೨೬

ಸುಂದರಧೀರ ಮಹಾಪುಣ್ಯಪುರುಷನು । ಬಂಧುಜನಕೆ ಚಿಂತಾಮಣಿಯು
ಕಂದರ್ಪವಿಜಯನ ಪಾದಾಬ್ಜಭೃಂಗ ತಾ । ನೊಂದು ಕಾರ್ಯವ ಚಿಂತಿಸಿದನು ೨೭

ಮತ್ತೊಂದು ದಿನದೊಳು ವೃಷಭದಾಸನು ತಾನು । ಚಿತ್ತದೊಳಿಂತೆಣಿಸಿದನು
ಉತ್ತಮಜಿನರ ಕರ್ಮಕ್ಷಯ ಭೂಮಿಗೆ । ಮತ್ತೆ ತಾ ಪೋಗಬೇಕೆಂದು ೨೮

---

1 ಉ (ಚ)  2 ವ (ಗ)

ಎಲ್ಲ ತೀರ್ಥಂಕರ[ರ] ಕರ್ಮಕ್ಷಯಭೂಮಿ । ಇಲ್ಲಿಗೆ ಅತಿದೂರವುಂಟು
ನಿಲ್ಲದೆ ಪರ್ವ ತಿಥಿಗಳೊಳು ದೂರಕ್ಕೆ । ಸಲ್ಲದು ಗಮನವೆಂದೆನುತ ೨೯

ಇಲ್ಲಿಗೆ ಅತಿದೂರವಿಲ್ಲ ತೀರ್ಥಗಳೆಂದು । ಅಲ್ಲಿಗೆ ಹೋಗಿ ತಾ ಮತ್ತೆ
ಇಲ್ಲಿಗೆ ಬರುವದಕೆಂಟುದಿವಸಗ । ಳಲ್ಲದೆ ಬರಲಾಗದೆಂದು ೩೦

ಉರ್ವೀಶನೆಡೆಗೆಯ್ದಿ ಕರಗಳ ಮುಗಿಯುತ । ಸರ್ವತಿಥಿಗಳೊಳು ಜಿನರ
ನಿರ್ವಾಣಭೂಮಿಗೆ ಪೋಗಿ ಬರುವುದಕೆ । ಪರ್ವತವಡ್ಡವಾಗಿದೆಕೊ ೩೧

ನಿಮ್ಮ ಗಗನಗಾಮಿನಿಯನಿತ್ತರೆ ಪೋಗಿ । ಘಮ್ಮನೆ ಬರುವೆನೆಂದೆನುತ
ಸುಮ್ಮಾನದಿಂದ ಕೇಳಲು ಕ್ಷಿತಿಪತಿ ತಾನು । ಸಮ್ಮತವಾಕ್ಯವ ನುಡಿದ ೩೨

ಇನ್ನು ಈ ತೇಜಿಯು [1]ನೀನೊಯ್ದು[1] ಜತನದಿ । ನಿಮ್ಮ ಗೃಹದೊಳಿಟ್ಟುಕೊಂಡು
ಚೆನ್ನಾಗಿ ರಕ್ಷಿಸಿಕೊಂಡಿರ್ದು ತೇಜಿಯ । ಬೆನ್ನೇರಿ ಪೋಗು ನೀನೆಂದ ೩೩

ಅತಿಜತನವು ತೇಜಿಯೆಂದು ಅರಸು ಪೇಳೆ । ಹಿತವ ನುಡಿದು ಕೊಟ್ಟು ಕಳುಹೆ
ಮತಿವಂತ ತನ್ನ ಮನೆಗೆ ಬಂದು ಜಿನಪನೆ । ಗತಿಯೆಂದು ನೆನೆದನು ಮನದಿ ೩೪

ನೆಲದೊಳಗೊಂದು ಮಾಳಿಗೆಯನು ಮಾಡಿಸಿ । ಹಲವು ಗವಾಕ್ಷವ ಬಿಟ್ಟು
ನಲವಿಂದ ತೇಜಿಯನಾ ಮಾಳಿಗೆಯೊಳಿಟ್ಟು । ಬಲುಜತನದೊಳಿರುತಿರ್ದು ೩೫

ಪರ್ವತಿಥಿಗಳೈದು ಬಂದಾಗ ವಿಜಯಾರ್ಧ । ಪರ್ವತಾಗ್ರದೊಳು ರಂಜಿಸುವ
ಸರ್ವಾಮರಾರ್ಚಿತ ಜಿನಪತಿ ಪೂಜೆಗೆ । ಉರ್ವಿಯಿಂದಲಿ ಪೋಪೆನೆಂದು ೩೬

ಮಿಗೆಹರುಷದೊಳು ವೃಷಭದಾಸನು ತಾನು । ಗಗನಗಾಮಿನಿಯ ಮೇಲೇರಿ
ಸೊಗಸಿನೊಳಗೆ ಪೋಗಿ ತಾನಾಗ ವಿಜಯಾರ್ಧ । ನಗದ ಶಿಖರವ ಸಾರಿದನು ೩೭

ಅಲ್ಲಿ ಹಲವು ರತ್ನಂಗಳಿಂ ಸಮೆದಿರ್ಪ । ಫುಲ್ಲಾಸ್ತ್ರವಿಜಯನಾಲಯವ
ಸಲ್ಲೀಲೆ ಮಿಗೆ ತೇಜಿಯಿಂದ ಪ್ರದಕ್ಷಿಣೆ । ಯಲ್ಲಿ ಬಂದನು ಮೂಱು ಸೊ[2]ಳ[2] ೩೮

---

[1] ನೆಯ್ದು (ಗ) [2] ಳಂ (ಚ)

ಅತ್ತಲು ವಿಜಯಾರ್ಧನಗರಶಿಖರದ ಮೇಲೆ । ಉತ್ತಮವೀಥಿಯಿಂದೆಸೆವ
ಮುತ್ತು ಹವಳರತ್ನದಿಂದಲಿ ಸಮೆದಿಹ । ಚಿತ್ರಜಾಲಿಯ ಭವನಕ್ಕೆ ೩೯

ಪಚ್ಚೆಯ ತೊಲೆ ಪವಳದ ಬೋದಿಗೆ ಮೇಲೆ । ಮುಚ್ಚಿದ ವಜ್ರದ ಹಲಗೆ
ಸ್ವಚ್ಛಮಾಣಿಕ್ಯದಕಂಬ ನೀಲದನೆಲ । ಆಶ್ಚರ್ಯವಾಗಿರುತಿಹುದು ೪೦

ಸಾಸಿರ [1]ನೇಸರ ಕಾಂತಿಯ [2]ಪಳಿಯುತ್ತ । ಭಾಸುರ ಜಿನರೂಪನಾಂತು
ಲೇಸಾದಿ ನೆಲಸಿತೋಯೆನೆ ಮಾಣಿಕ್ಯದ । ಆ ಸರ್ವೇಶನೊಪ್ಪಿದನು ೪೧

ಚಿತ್ರ ಮನವ ರತ್ನದಿಂದಲಿ ಸಮೆದಿಹ । ಚಿತ್ರಜಾಲಿಯ ನಿಜಗೃಹಕೆ
ಮುತ್ತಿನ ಲಂಬಣ ಕನಕಕಳಶದಿಂ ಚೆ । ಲ್ವೆತ್ತೊಪ್ಪಿತಾ ಜಿನಗೇಹ ೪೨

ಕರಕಿರಣನ ಕಂಡ ಕಂಜ ಅರಳುವಂತೆ । ವರಪುಣ್ಯಪುರುಷನ ಕಂಡು
ಬಿರಿದವು ಅರುಹನಾಲಯದ ಕವಾಟವು । ಹರುಷದಿ ಜಯಜಯವೆಂದ ೪೩

ಜಿನಪತಿಪ್ರತಿಬಿಂಬ ಥಳಥಳಿಸಲು ಕಂಡು । ಅನುರಾಗ ಮಿಗೆ ಭಕ್ತಿಯಿಂದ
ಘನಬುದ್ಧಿಯಿಂದಲಿ ಕರಗಳ ಜೋಡಿಸಿ । ಜಿನಪತಿಯನು ಸ್ತುತಿಸಿದನು ೪೪

ಸುರನರೋರಗವಂದ್ಯ ಸುಜ್ಞಾನಭರಿತನೆ । ದುರಿತಾರಣ್ಯಕುಠಾರ
ಕರುಣಾಸಾಗರಚಂದ್ರಮ ರಕ್ಷಿಸೆನ್ನನು । ಪರಮಪಾವನ ಜಯಜಯತು ೪೫

ಅಷ್ಟಕರ್ಮಾರಣ್ಯನಿಕರದಾವಾನಲ । ದುಷ್ಟಸಂಸಾರವಿದೂರ
ಅಷ್ಟಮಭೂಮಿಗಧೀಶನೆ ಸಲಹೆಂದು । ಸಾಷ್ಟಾಂಗವೆರಗಿದನಾಗ ೪೬

ಪರಮಪಾವನಮೂರ್ತಿ ಪಾವನಚರಿತನೆ । ದುರಿತತಿಮಿರಭಾಸ್ಕರನೇ
ಧರೆಮೂಜಗಕೊಡೆಯನೆ ನಿನ್ನ ದಾಸಗೆ ಈಗ । ಪರಮಪದವ ಪಾಲಿಸಭವ ೪೭

ಇಂತು ರೂಪಸ್ತವ ಗುಣಸ್ತವನೆಲ್ಲವ । ಕಂತುಪರನ ಕೊಂಡಾಡಿ
ಸಂತೋಷದಿಂದಲಿ ಅಲ್ಲಿರ್ದ ಮುನಿಗಳ । ಸಂತತಿಗಳಿಗೆರಗಿದನು ೪೮

---

[1] ನೇ (ಗ) [2] ಏಳಿಕೆಯ್ಯ (ಗ)

ಆಗಲು ಅಶ್ವವು ಒಡೆಯನ ಬೆಂಬಳಿ । ಬೇಗದಿ ಬಲವಂದು ಬಳಿಕ
ರಾಗದಿ ಜಿನಪಗೆ ವಂ[1]ದನೆ[1] ಮಾಡಿತು । ಕೂಗಿ ಹೂಂಕರಿಸಿ ಭಕ್ತಿಯೊಳು ೪೯

[2]ಪ್ರೌ[2]ಢವಿಯೊಳು ಪಂಚೇಂದ್ರಿಜೀವಂಗ[3]ಳು[3] । ಒಡೆಯನು ಪೇಳೆ ಸಂಜ್ಞೆಯೊಳು
ನಡೆಯುತಲಿರ್ಪವು ಅದರಿಂದ ಬಸದಿಯು । ಬಿಡದೆ ತಾ ಬಲಬಂದುದಾಗ ೫೦

ಮನನೊಲಿದೆರಗಿ ಸಾಷ್ಟಾಂಗದಿಂದಲಿ ತಾನು । ಪುನರ್ದರುಶನವೆಂದು ನುಡಿದು
ಅನುನಯದಿಂದಲಿ ಜಿನಪನ ಬೀಳ್ಕೊಂಡು । ಘನಪುಣ್ಯನಿಧಿ ಪೋಜಿಮಟ್ಟ ೫೧

ಬರುತ ಬಟ್ಟೆಯೊಳು ಬಸದಿಗೆ ವಂದಿಸಿ । ಬರುತಿರ್ದ ತನ್ನಯ ಪುರಿಗೆ
ಹರುಷದಿಂದಲಿ ಬಂದು ಸ್ನಾನ ಭೋಜನಗಳ । ವಿರಚಿಸಿದನು ಮುದದಿಂದ ೫೨

ಈ ಪರಿಯೊಳು ಸರ್ವ ತೀರ್ಥಂಗಳೆಲ್ಲವ । ನೇಪ್ರೊತ್ತು ತಾನೆಡೆಬಿಡದೆ
ಭೂಪನು ಕುದುರೆಯ ಬೆನ್ನೇರಿ ಪೋಗುತ್ತ । ರೂಪುಕಂದರ್ಪನೊಪ್ಪಿದನು ೫೩

ಉತ್ತಮಗುಣನಿಧಿ ವೃಷಭದಾಸನು ತಾನು । ಚಿತ್ರಜಾರಿಯ ಭವನಗಳ
ಮತ್ತೆ ತಾ ತೀರ್ಥವಂದನೆಗಳ ಮಾಡುತ್ತ । ಚಿತ್ರಜರೂಪನೊಪ್ಪಿದನು ೫೪

ಅತ್ತಲು ಕಾಶ್ಮೀರವಿಷಯದೊಳೊಪ್ಪುವ । ಉತ್ತಮ ವಿಜಯಾರ್ಧಪುರದ
ಚಿತ್ರಜನಿಭ ಜಿತಶತ್ರು ಭೂಪಾಲಗೆ । ಮತ್ತಿಂತು ನುಡಿದ ಕಿಂಕರನು ೫೫

ಧರಣೀಶ ಕೇ[ಳಾ][4] ಕೌಶಂಬಿಯ ಪುರದೊಳು । ಪರವೈಶ್ಯಾಂಬರಭಾನುವೆನಿಪ
ಪರಮದಯಾನಿಧಿ ವೃಷಭದಾಸನು ತಾನು । ಇರುತಿಹನಧಿಕಲೀಲೆಯೊಳು ೫೬

ಅರಸನ ಗೃಹದೊಳು ಗಗನಗಾಮಿನಿಯಿರೆ । ಪರವ ಕೇಳಿದ ನೃಪತಿಯನು
ಹರುಷದಿ ವಿಜಯಾರ್ಧ ಶಿಖರಿಯ ಬಸದಿಯ । ದರುಶನಮಾಡುವೆನೆನುತ ೫೭

ಎನ್ನ ಗಗನಗಾಮಿನಿಯನಿತ್ತರೆಯಾಗ । ಸನ್ನುತದಿಂದಲಿ ಬಳಿಕ
ಘಮ್ಮನೆ ಬರುವೆನೆನುತ ಕೇಳಿ ಭೂಪಾಲ । ಸಮ್ಮತವಾಕ್ಯವ ನುಡಿದ ೫೮

---

[1] ದಿಸಿ (ಗ) [2] ಈಪೊ (ಜ) [3] ೪ (ಗ) [4] ಳ (ಗಜ)

ಇಂತಪ್ಪ ತೇಜಿಯು ತಾ ಬಂದು ಪರದನು । ಸಂತೋಷದಿಂದ ಮತ್ತದನು
ಕಂತುಸನ್ನಿಭ ತಾನು ಜತನಮಾಡುವೆನೆಂದು । ಚಿಂತೆರಹಿತ ಮಱುದಿವಸ ೫೯

ಪೇಳಲಳವೆ ನೆಲದೊಳಗೊಂದು ಚೆಲುವಿನ । ಮಾಳಿಗೆಯನು ಕಟ್ಟಿಯದಕೆ
ದಾಳಂಜಿಗಳ ನೂಱು ಮಾಡಿಸಿ ಕೋಟೆಯು ಸುತ್ತ । ಏಳುಸುತ್ತನು ಹಾಕಿಸಿದನು ೬೦

ಮತ್ತೆ ಆ ಲಾಯಕ್ಕೆ ಭಟರ ಸಾಹಸ್ರವ । ಸುತ್ತ ಕಾವಲನಿಟ್ಟು ಬಳಿಕ
ಉತ್ತಮ ಗಗನಗಾಮಿನಿಯನು ಅದಱೊಳು । ಚಿತ್ರಶುದ್ಧದೊಳಿಟ್ಟನಾಗ ೬೧

ಉರ್ವಿಯಿಂದಲಿ ಗಗನಕೆ ಪೋಗಿ ವಿಜಯಾರ್ಧ । ಪರ್ವತಾಗ್ರದ ಜಿನಗೃಹಕೆ
ಪರ್ವತಿಥಿಗಳೆಯ್ದೆ ಬಾದಾಗ ಪರದನು । ಪೂರ್ವಾಹ್ಣದೊಳು ಪೋಗುತಿಹನು ೬೨

ಹಿಂಗದೆ ತೇಜಿ ತಾ ನೂಱುಗಾವುದವನು । ಲಂಘಿಸುತಿರೆ ಜಾವದೊಳಗೆ
ಅಂಗಜರೂಪನದಱ ಬೆನ್ನನೇಱಿ ತಾ । ತುಂಗವಿಕ್ರಮ ಪೋಗುತಿಹನು ೬೩

ಇಂತೆಂದು ಪೇಳಿದ ಚರನ ನುಡಿಯ ಕೇಳಿ । ಸಂತೋಷದಿ ಜಿತಶತ್ರು
ಭ್ರಾಂತ ಆ ಕುದುರೆಯ ತಾನೇಱಬೇಕೆಂದು । ಇಂತೆಂದು ನುಡಿದನೋಲಗದಿ ೬೪

ಕುದುರೆಯ ತಂದವನಿಗೆ ಅರ್ಧರಾಜ್ಯವ । [1]ನಾ[1] ಕೊಡುವೆನು [2]ಎನ[2]ಲಾಗ
ಮಱುಗುವಟ್ಟಿರೆ ಸಭೆ ಕುಂಡನೆಂದೆಂಬೊರ್ವ । ತಾನು ಕೈಮುಗಿದಿಂತು ನುಡಿದ ೬೫

ಉತ್ತಮಕುದುರೆ ಇರುವ ಲಾಯಕೆ ಏಳು । ಸುತ್ತಿನ ಪ್ರಾಕಾರ ಹಾಕಿ
ಮತ್ತೆ ಸಹಸ್ರಭಟರ ಕಾವಲು ಅದ । ಱೊತ್ತಿಗೆ ಪೋಗುವಡಸಖ್ಯ ೬೬

ಬಲ್ಲಿದಾರಣ್ಯದಿ ಇರುತಿಹ ವ್ಯಾಘ್ರಗೆ । ಹಲ್ಲಣವನು ಹಾಕಬಹುದು
ಮೆಲ್ಲನೆ ಸಿಂಹನ ಗವಿಯಿಂದ ಹಿಡಿತಂದು । ಕಲ್ಲಕಂಬಕೆ ಕಟ್ಟಬಹುದು ೬೭

ಅಂಬುಧಿಯೊಳಗಿರ್ದ ಸಕಲ ರತ್ನಂಗಳ ಕ । ದಂಬವ ತರಬಹುದೀಗ
ಕುಂಭಿನಿಯೊಳು ಪರದನ ಕುದುರೆಯ ಕಣ್ಣ । ತುಂಬ ನೋಡುವರಾರು ನೃಪತೀ ೬೮

---

1 ನಾನು (ಬ)  2 ನೆನುತ ಪೇಳೆ (ಬ)

ಹರಣದಾಸೆಯ ಬಿಟ್ಟು ಮರಣವೆ ಸ್ಥಿರವೆಂದು । ತೆರಳಿ ನಾ ಪೋದಿ ಮತ್ತುಳಿದು
ಮರಳಿ ನಾ ಬಂದು ತೇಜಿಯನು ತಂದಿತ್ತರೆ । ಧರೆಯನೀವುದು ನಿಜವುಂಟೆ ೬೯

ನೀನು ರಾಜ್ಯದೊಳರ್ಧವೀವೆನೆನುತಲೀಗ । ಭೂನಾಥ ನನಗೆ ನಂಬುಗೆಯ
ಸಾನುರಾಗವ ಮಾಡಿ ಕೊಟ್ಟಡೆ ನಾ ಪ್ರಾಣ । ಹಾನಿಯಾಗದೆ ತರುವೆ ಹಯವ ೭೦

ದಾನ ದಂಡವು ಸಾಮದಿಂದಲಿ ತೇಜಿಯ । ತಾನು ಬಾರದು ಕೇಳು ನೃಪತಿ
ನಾನೊಂದು ತಂತ್ರವೊದವಿ ತರುವೆನು ಮುಂದೆ । ನೀನೆ ಮೆಚ್ಚುವೆಯೆನ್ನೊಡೆಯ ೭೧

ಕುಂಡನ ವಚನವ ಕೇಳಿ ಭೂಪಾಲನು । ಖಂಡಿತವಾದಿ ಭಾಷೆಯನು
ಮಾಂಡಲಿಕರ ಮುಂದೆ ಸತ್ಯವ ನುಡಿಯಲು । ಕುಂಡನು ನಲಿದ ಚಿತ್ತದೊಳು ೭೨

ಗಗನದೊಳಗೆ ನೂಱುಗಾವುದ ಜಾವಕ್ಕೆ । ನೆಗೆದು ಪಾಱುವುದು ಮತ್ತದಕೆ
ಜಗದೊಳಗೆಣೆಯಿಲ್ಲ ಅದಱ ಸದ್ಗುಣವನು । ಪೊಗಳಲಳವೆ ಎಂದನಾಗ ೭೩

ಇಂತೆಂದು ನುಡಿದಗೆ ನಂಬುಗೆ ತಾನಿತ್ತು । ಸಂತೋಷದಿಂದ ಪಟ್ಟೆಯ[ವ]ನು
ಕಂತುಸನ್ನಿಭ ಉಡುಗೊರೆ ಇತ್ತು ಮನ್ನಿಸೆ । ಭ್ರಾಂತ ಪೋದನು ತನ್ನ ಮನೆಗೆ ೭೪

ಅಂತಕವಾಸಕ್ಕೆ ಪೋಗುವ ಪಾಟಿಯಿಂ । ಬಂತೆ ಪೋದನು ನಿಜಗೃಹಕೆ
ಭ್ರಾಂತ ಕೆಡುವುದನಱಿಯದೆ ಮನದೊಳು । ಸಂತೋಷದಿಂದಿರುತಿರ್ದ ೭೫

ಕೊಂಡಕ್ಕೆ ಬೀಳ್ವ ರೆಂಡೆಯವೊ[1]ಲು ಕು[1]ಡಿತೆ ತಾ । ಕೊಡದೊಳ್ ಬಿದ್ದು ಸಾವಂತೆ
ಲಂಡ ತಾ ಕೆಡುವುದನಱಿ[2]ಯದೆ ಮನದೊಳು । ಪುಂಡ ಯೋಚಿಸುತಿರ್ದನಾಗ ೭೬

ಆಸೆವೊಂದಕೆ ಆನೆ ಮೀನು ಪತಂಗವು । ಘಾಸಿಬಂದಲ್ಲಿ ಸಾವಂತೆ
ಸಾಹಸಿಗ ಸಕಲ ಸುಖಕೆ ತಾನು ಗಾಟಿಸಿ । ನೀಸುವ ತನ್ನ ತನುವನು ೭೭

ಅರಸುಗಳ್ ಕಳ್ಳರ ಹಿಡಿತಂದು ಸೆರೆಯೊಳು । ಇರಿಸಿಕೊಳ್ಳುವರು ಲೋಕದೊಳು
ಧರೆಯೊಳು ಕಳ್ಳಗೆ ರಾಜ್ಯವನಿತ್ತು [ತಾ][3] । ವ[3]ಱಿ[3]ದು[3]ಕೊಂಬರೆ ನೃಪರುಗಳು ೭೮

---

[1] ಲ್ಯ (ಚ) [2] ಶದ್ದು ಹಾ (ಗಚ) [3] ರಿಸಿ (ಚ)

ವಾಜಿಯು ತಂದು ನೃಪತಿಗಿತ್ತು ರಾಜ್ಯವ । ನೋಜೆಯಿಂದಾಳುವೆನೆಂದು
ಬೀಜವಿಲ್ಲದೆ ಫಲ ಬರುವುದೆ ಪುಣ್ಯದ । ವಾಜಿಯಿಲ್ಲದೆ ರಾಜ್ಯ ಬಹುದೆ ೭೯

ಕಳ್ಳರ ಹಿಡಿದು ಬಡಿಸುವಂಥಾ ದೊರೆಗಳು । ಕಳ್ಳರಿಗಿತ್ತು ರಾಜ್ಯವನು
ಕೊಳ್ಳುವ ನೃಪರುಂಟೆ ಕದ್ದು ವಸ್ತುವ ತಾವು ಸೆಳ । ಕೊಳ್ಳದಿಹರೆ ಲೋಕದೊಳು ೮೦

ಕೆಡುವಕಾಲಕೆ ಕೆಟ್ಟಬುದ್ಧಿ ತಾ ಬರೆ ಕಂಡು । ಕಡುಪಾಪಿ ಮನದೊಳು
ಬಿಡದೆ ತಾ ನರಕಕ್ಕೆ ಪೋಗುವ ಬಗೆಯನು । ಒಡನೆ ಮಾಡಿದನಿಂತೆಂದು ೮೧

ಇಂತಿದಕೇನು ಉಪಾಯವೆನುತ ತಾನು । ಚಿಂತಿಸಿದನು ಮನದೊಳಗೆ
ಕಂತುವೈರಿಯು ಭಕ್ತನವನಿಗೆ ನಾನೊಂದು । ತಂತ್ರವ ಮಾಡುವೆನೆಂದು ೮೨

ಜಿನಮುನಿಗಳನಲ್ಲದೆ ಅನ್ಯಜನಗಳ । ಮನೆಯೊಳು ಹೊಗಲೀಯನವನು
ಮುನಿವೇಷ ಧರಿಸಿ ಸಲ್ಲದೆ ನನ್ನ ಕಾರ್ಯವು । ಅನುಕೂಲವಾಗದೆಂದೆನುತ ೮೩

ಕುಂಭಿನಿಯೊಳು ಕೆಟ್ಟರೋಗ ಪಾಪಿಗೆ ಹುಟ್ಟಿ । ಹಂಬಲಿಸುತ ಸತ್ತು ನರಕ
ಕುಂಭಿನಿಯೊಳು ಬಿದ್ದು ಕೆಡುವಂತೆ ಕುರುಡನು । ಹಂಬಲಿಸುತಲಿ ಪಲಬಗೆಯ ೮೪

ದೂರದೇಶಕೆ ಪೋಗಿ ಜಿನಮಾರ್ಗದೊಳವನು । ಆರೈದು ತಿಳಿದು ಚೆನ್ನಾಗಿ
ಸಾರಸಮ್ಯಕ್ತ್ವವ ಧರಿಸಿದಲ್ಲದೆ ಕಾರ್ಯ । ಸೇರುವದಿಲ್ಲ ಕೈಗೆ[1]ಂದ ೮೫

ಆದಜಿಂದ ಪೊಱಮಟ್ಟು ಬಡಗಣದೇಶಕೆ । ಒದಗಿ ತಾ ಪೋಗಿ ಅಲ್ಲಿರ್ದ
ಮದನವಿಜಯ ಮುನಿ ಸೇವೆಯ ಮಾಡುತ್ತ । ಮುದದಿಂದಲಿದ್ದು ತಾನಲ್ಲಿ ೮೬

ಅವರ ನಡತೆಯುವರೊಳವಿನ ಸುಳುಹನು । ವಿವರವನೆಲ್ಲವ ತಿಳಿದು
ಅವರು ಕೊಡುವ ವ್ರತ ನೇಮ ನಿಷ್ಠೆಗಳನು । ಸವಿನಯದಿಂದ ತಾ ತಿಳಿದು ೮೭

ವಸ್ತ್ರ ಆಭರಣವನೆಲ್ಲವ ಕಳೆದು ತಾ । ಮಸ್ತಕವನು ಬೋಳುವಾಡಿ
ವಿಸ್ತರಿಸುವರಳವಲ್ಲಣುವ್ರತದಿ ಪ್ರ । ಶಸ್ತವಾದನು ಧರೆಯೊಳಗೆ ೮೮

[1] ಗಿ (ಗ)

ಉರಗ ಪೊರೆಯ ಬಿಡೆ ವಿಷವ ತಾ ಬಿಡುವುದೆ । ಧರೆಯೊಳು ವಸ್ತ್ರಾಭರಣವ
ದೊರಕದಿರ್ದಡೆಯುವ ಯೋಗಿಯೆಂಬರೆ ಮತ್ತೆ । ಆಜೀಕವಂಶರು ಅವನಿಯೊಳು ೮೯

ಪರ್ವತದೊಳು ಪುಟ್ಟುವ ಜೀವವೆಲ್ಲವು । ನಿರ್ವಾಣ ಪಶು ನರರೆಲ್ಲ
ಉರ್ವಿಯೊಳಗೆ ಉಡು ತೊಡವಿಲ್ಲದಿರ್ದೊಡೆ । ನಿರ್ವಾಣಮುನಿಯೆನ್ನಬಹುದೆ ೯೦

ಕಟ್ಟಿಗೆಯೊಳಗಿರ್ದ ಅ[1]ಗ್ನಿ[1]ಯರಣ್ಯವ । ಸುಟ್ಟುಬಿಡದೆ ಸುಮ್ಮನಿ[2]ಹುದೆ[2]
ಕೆಟ್ಟಪಾಪಿಗಳೆದೆಯೊಳಗಿರ್ದ ಖುಲ್ಲ[3]ರು[3] । ಕಟ್ಟಿಕೊಳ್ಳರೆ ನರಕವನು ೯೧

ಉಲ್ಲಾಸದಿಂದ ತಾನಿಟ್ಟ ಆಭರಣವ । ನೆಲ್ಲವ ತೆಗೆದು ತಾ ಮುಂದೆ
ಸಲ್ಲದಗತಿಗೆಯ್ದುವರಿಗೆಯಾಭರಣವು । ಸಲ್ಲವೆಂದಾತನೆ ಕಳೆದ ೯೨

ಮತ್ತಾ ಕಳ್ಳನು ತಾನು ಅಣುವ್ರತವೇಶದಿ । ಉತ್ತಮ ಕೌಶಂಬೀಪು[4]ರಕೆ[4]
ಚಿತ್ತವಿಕಳ ಬಂದು ಪೊಕ್ಕು ವೃಷಭದಾಸ । ಮತ್ತು ನಿರ್ಮಿಸಿದ ಬಸದಿಗೆ ೯೩

ಬಂದು ಜಿನೇಂದ್ರನ ಬಸದಿಯ ಬಲವಂದು । ಚೆಂದದಿ ಪಾದವ ತೊಳೆದು
ಬಂದೊಳಪೊಕ್ಕು ಸಾಷ್ಟಾಂಗವೆರಗಿದನು । ಕಂದರ್ಪವಿಜಯಗರ್ಭಿಯೊಳು ೯೪

ಆ ವೇಳೆಯೊಳು ಶ್ರಾವಕರು ಪೀಠವ ತಂದು । ಭಾವಶುದ್ಧದಿ ಬಂದು ಬಳಿಕ
ದೇವರು ಬಿಜಮಾಡಿ ಎನೆ ಕುಳ್ಳಿರ್ದನು । ಭಾವಜಾರಿಯೆ ಶರಣೆಂದು ೯೫

ಬಂದು ಶ್ರಾವಕರೆಲ್ಲ ವಂದಿಸುವರೆ ಪುಣ್ಯ । ಬಂಧವಾಗಲಿ ನಿಮಗೆಂದು
ಚೆಂದದಿಂದಲಿ ಮುನಿ ಹರಸೆ ಕುಳ್ಳಿರೆ ಭವ್ಯ । ವೃಂದ ಕುಳಿತರಿದಿರಾಗಿ ೯೬

ಆಗಲು ಅಣುವ್ರತಿ ಬೇಗದಿ ಕಣ್ಣಿಗೆ । ರೋಗವೆನುತ ಅರುವೆಯನು
ರಾಗದಿಕಟ್ಟಿರುತಿರ್ದು ತಾ ಬಾಧೆಗೆ । ಕೂಗುವಂದದಿ ನರಳುವ[5]ನು[5] ೯೭

ಬಂದು ಬಸದಿಯೊಳಗಹರೆ ಮುನೀಂದ್ರರು । ಎಂದು ವೃಷಭದಾಸಗೆರುಹೆ
ಕುಂದದೆ ಇಂದ್ರರು ಪೋಗಿ ಪೇಳಲು ತಾನು । ವಂದಿಸಿದನು ಮನದೊಳಗೆ ೯೮

---

1 ನೀಲ (ಚ) 2 ಹನೆ (ಚ) 3 ರ (ಗ) 4 ರಿಗೆ (ಚ) 5 ತವ (ಗ)

ಭೂರಿಗುಣಾನ್ವಿತ ಮಾರಸನ್ನಿಭರೂಪ । ನಾರೀಜನಕೆ ಚಿತ್ರಜಾತ
ಕಾರುಣ್ಯಪುರುಷ ವಂಶಾಬ್ಧಿಗೆ ಚಂದ್ರಮ । ಧೀರವೃಷಭದಾಸನೆಸೆದ ೯೯

ಇದು ಭವ್ಯಜನವಾರ್ಧಿವರ್ಧನಚಂದ್ರಮ । ಇದು ಸಜ್ಜನರ ಕರ್ಣಾಭರಣ
ಇದು ಮುಕ್ತಿಹರ್ಮ್ಯಕ್ಕೆ ಪಡುವ ಸೋಪಾನ । ಇದು ಬಲ್ಲರಿಗೆ ಅಮೃತಪಾನ ೧೦೦

# ಹದಿನೈದನೆಯ ಸಂಧಿ

ಶತಯಿಂದ್ರ ಮೌಳಿಕಿರೀಟರತ್ನರಂಜಿತ । ಶತಪತ್ರಯುಗಲಶೋಭಿತನೆ
ನುತಜನಕಲ್ಪಭೂರುಹ ರಕ್ಷಿಸೆನಗೆ ಸ । ನ್ಮತಿದೋಱು ಸುಪಾರಿಶ್ವಜಿನಪ ೧

ಉತ್ತಮಗುಣನಿಧಿ ವೃಷಭದಾಸನು ತಾನು । ಮತ್ತೆ ಜಿನಾಲಯಕೆಯ್ದಿ
ಚಿತ್ರಜವಿಜಯಗೆಱಗಿ ಮುನಿಗೊಂದಿಸಿ । ಮತ್ತೆ ಹರಸಿದನು ಮುನಿಪ ೨

ಪಸೋರಣ ಕಣ್ಗೆ ಆರುವೆ ಕಟ್ಟಿರುವುದು । ಆನ[1]ದೆ[1] ಪೇಳಿ ನೀವೆನಲು
ಸಾನುರಾಗದೊಳಿಂತು ನುಡಿದನು ನಯನಕ್ಕೆ । ತಾನಂದು ಬಂದ ರೋಗವನು ೩

ಕಂಗ[2]ಳ[2]ವಾಯು ನನಗೆ ಬಾದು ತಾನಾರು । ತಿಂಗಳಾಯಿತು ನಮ್ಮ ಕರ್ಮ
ಭಂಗಬಡಿಸುತಿದೆ । ವೇದನೆ ಘನವಿದ । ಹಿಂಗಿಸುವರ ಕಾಣೆನೆಂದ ೪

ನಾಪಿದ್ದು ಫಲವೇನು ನಿಮ್ಮ ಲೋಚನಗಳ । ನೋವ ಬಿಡಿಸುವೆ ನಾನೀಗ
ನೀವೆನ್ನ ಮನೆಗೆ ಚಿತ್ತೈಸಬೇಕೆಂದಾಗ । ಭಾವಶುದ್ಧದಿ ಪೇಳ್ದ ವರದ ೫

ಮುನಿಗಳು ತಾವು ಅರಣ್ಯದೊಳಗಿರಬೇಕು । ಮನವಿಲ್ಲ [3]ಕಲಿ[3]ಕಾಲದೊಳಗೆ
ಘನಸರ್ಪ ವ್ಯಾಘ್ರ ಸಿಂಹಗಳ ಭಾಧೆಗಳಿಂದ । ವನದೊಳಗಿರಬಾರದೀಗ ೬

ವನದೊಳಗುತ್ತಮ ಮುನಿವಾಸ ಮಧ್ಯಮ । ಮನೆಯೊಳಿರುವುದು ಕನಿಷ್ಠ
ಇನಿಸು ಹೊತ್ತಿರುವುದುಚಿ[4]ತ[4]ವಲ್ಲವೆಂದಾಗ । ಮುನಿಪತಿ ಪೇಳ್ದ ನೀತಿಯನು ೭

ಮನೆಯೊಳು ಮುನಿಯಿರೆ ಅವರ ಕೃತ್ಯಂಗ[5]ಳ[5] । ಅನುವನೆಲ್ಲವ ಕಾಣಬೇಕು
ಮನವಾರೆ [6]ಅವರ[6] ವಿಲಾಸ ಸೌಂದರ್ಯವ । ಇನಿಸುಕಾಣಲು ದೋಷ ಬಹುದು ೮

---

[1] ದ (ಕ) [2] ಳಂ (ಕ) [3] ಯಿಾ (ಗ) [4] ತ್ರ (ಗ) [5] ಳಂ (ಗ) [6] ವ (ಕ)

ಅವರು ಹಲವು ಬಗೆ ರಸವಸ್ತುಗಳನೆಲ್ಲ । ಸವಿನಯದಿಂದುಣುವಾಗ
ವಿವರಿಸಿ ನೋಡೆ ಮನದಿ ವಾಂತಿ ಪುಟ್ಟು[1]ಗು[1] । ಹವಣಿಗೆ ನಿ[2]ಲ್ಲು[2]ದೆ ವ್ರತವು ೯

ಸಣ್ಣವರೆಲ್ಲರು ಮಲಮೂತ್ರಗಳ ಬಿಡೆ । ಕಣ್ಣಾರೆ ಕಾಣಬೇಕದನು
ಉಣ್ಣಬಾರದ ವಸ್ತುವ[3]ನು । ಉ[3]ಣುತಿರೆ ನೋಡಿ । ಜಣ್ಣಗೆಡದೆ ಎನ್ನ ವ್ರತವು ೧೦

ಅದಱಿಂದ ನಿಮ್ಮ ಗೃಹದೊಳು ನಾವಿರುವುದು । ವಿಧವಲ್ಲ ಅದಱಿಂದ ವ್ರತವು
ಹದಗೆಡುವುದು ಸಂಸಾರಿಗಳಿರುತಿಹ । ಸದನ ಸಲ್ಲದು ಯತಿಗಳಿಗೆ ೧೧

ಇಂತೆಂದು ಪೇಳಿದ ಮುನಿಪಗೆ ಪರದನು । ತಾಂ ತಳುವದೆ ಪೇಳ್ದನಿಂತು
ಸಂತೋಷವಾಗಿಯಿದ್ದರೆ ದೋಷ ವ್ಯಾಧಿಗೆ । ಚಿಂತೆಯಿಲ್ಲದಕೇನು ಮುನಿಪ ೧೨

ರೋಗ ಬಂದರೆ ಜಪ ತಪ ಕೆಡುವುದು ಮತ್ತೆ । ಆಗ[4]ಲೀ[4]ಯುದು ಧ್ಯಾನ ಶ್ರುತವ
ಈಗ[5]ಲ್ಲೀ[5] ನಾಲ್ಕು ಇದ್ದರೆ ಬೇಗ ಮುಕ್ತಿಗೆ । ಸಾಗಿಸುವುದು ನಿಮುಪದೊಳು ೧೩

ಸರ್ವೇಂದ್ರಿಯೊಳು ನಯನೇಂದ್ರಿ ಮುಖ್ಯವು ಮತ್ತೆ । ಸರ್ವವಸ್ತುವ
ತೋಱುತಿಹುದು
ಉರ್ವಿಯೊಳಗೆ ಸರ್ವರಿಗೆ ಚಕ್ಷುಗಳಿರೆ । ಸರ್ವಕಾರ್ಯವು ಸಿದ್ಧಿಯಹುದ ೧೪

ಮುನಿಗಳಿಗೊಂದು ರೋಗವು ಬಂದಡೆ ತಾನು । ಅನುವಾದೌಷಧಿಯಿತ್ತು
ತನುವ ರಕ್ಷಿಸಿದರೇನಯ್ಯ ಪಥ್ಯವ ಮತ್ತೆ । ತನಗೆ ಬಹುಮ ಪುಣ್ಯವೆಂದ ೧೫

ಅದುಕಾರಣ ನಮ್ಮ ಗೃಹದೊಳು ನಿಮಗೀಗ । ಮುದದಿಂದ ಪಥ್ಯಪಾನಗಳ
ವಿಧವನಱಿತು ಮಾಡಿಸುವೆನು ನೀವೆನ್ನಯ । ಸದನಕ್ಕೆ ಗಮಿಸಬೇಕೆಂದ ೧೬

ಮತ್ತಾ ಮಾ[6]ಯದ[6] ಬ್ರಹ್ಮಚಾರಿಣ ತಾನು । ಉತ್ತಮ ಜನರಿಗೆ ಎಱಗಿ
ಚಿತ್ತಶುದ್ಧದಿ ತನ್ನ ಕಾರ್ಯವಾಯಿತುಯೆಂದು । ಮತ್ತೆ ಸದ[7]ದ[7] ಮನೆಗಾಗಿ ೧೭

ಮತ್ತೊಂದು ಮನೆಯ ಸಜ್ಜಿ[8]ಮ[8] ಮಾಡಿ ಪರದನು । ವತ್ತುವ ಮುನಿಯನಲ್ಲಿರಿಸಿ
ನಿತ್ಯ ವೈಯ್ಯಾವೃತ್ಯಮಾಡುತರ್ಲಿದನು । ಚಿತ್ತಜರೂಪ ಭಕ್ತಿಯೊಳು ೧೮

---

[1] ದಂ (ಠ) [2] ಲ್ಲ (ಕ) [3] ಸು (ಗ) [4] ಲಿಅ (ಠ) [5] ಲ್ಲಿ (ಠ) [6] ದ (ಗಚ)
[7] ದಂ (ಠ) [8] ವು (ಠ)

ಕಣ್ಣಿಗೆ ಕಪ್ಪುಲೇ[1]ಪ[1]ನಗಳ ಮಾಡಿಸಿ । ಸನ್ನುತದಿಂದವರ್ಗಿತ್ತು
ಭಿನ್ನವಿಲ್ಲದೆ ಪಥ್ಯವಸ್ತುವನೆಲ್ಲವ । ತನ್ನ ಕೈಮುಟ್ಟಿ ಕೊಡು[2]ವ[2]ನು ೧೯

ಪರದರೆಲ್ಲರು ಪರದೇಶದ ಮುನಿಯುನು । ಇರಿಸಿಕೊಂಬರೆ ಮನೆಯೊಳಗೆ
ಅರಸಿನ ತೇಜ[3]ಯಿರುವ[3] ಮನೆಯೊಳಗಿವ । ನಿರುವುದು [4]ಪೊ[4]ಲ್ಲವೆಂದೆನಲು ೨೦

ಎತ್ತಣ ದೇಶದವರು ಎಂದು ಅಜಿ[3]ಯುದೆ । ಉತ್ತಮರೆಂದು ನೀನವರ
ಚಿತ್ತವನಜಿ[3]ಯುದೆ ನಂಬಬಹುದೆಯೆಂದು । ಮತ್ತೆ ಪೇಳಿವರು ಬಂಧುಗಳು ೨೧

ಈ ಪರಿಯಲಿ ತನ್ನ ಮಿತ್ರರು ಪೇಳಲು । ರೂಪುಸಂಪನ್ನನಿಂತೆಂದ
ಮಹಾ[5]ಪುರುಷರ ಕಣ್ಣರೋಗ ಮಾದೊಡೆ[6]ಯೆ[6]ನ್ನ । ಪಾಪ ಪಿಂಗುವುದೆಂದನವನು ೨೨

ಏಕೆ ಇವರ ಕಳ್ಳರೆಂಬಿರಿ ಇವರಿಗೆ । ಲೋಕದೊಳಗೆ ಎಣೆಗಾಣೆ
ಆಕಾಶ ಮೇಲೆ ಬಿ[7]ದ್ದರು[7] ಅಬ್ಧಿ ಮೀಜಲು । ಲೋಕ ತಾ ಉಳಿವುದೆ ಎಂದ ೨೩

ಹೆತ್ತ ತಾ[8]ಯಿಯು[8] ಮೊಲೆಹಾಲು ವಿಷವಾಗಲು ಉಂಡು । [9]ನಿತ್ತರಿ[9]ಸುವರೆ ಬಾಲಕರು
ಸತ್ತುಹೋಗದೆ ಸುಮ್ಮನಿಹರೆ ಯತಿಗಳ[10]ಗೆ । ಎ[10]ತ್ತಣ ಕಳವು ತಾನೆಂದ ೨೪

ಬಲ್ಲವರು ಬಲ್ಲರಲ್ಲದೆ ಮುನಿಗುಣಗ[11]ಳ[11] । ಎಲ್ಲರಜಿ[3]ವರೆ ತಾವೀಗ
ಪುಲ್ಲಸರನ ಗೆಲಿದವರಿಗೆ ಕಳವುಂಟೆ । ಬಲ್ಲವರ[12]ಲ್ಲ ನೀವೆಂದ[12] ೨೫

ಧರೆಯೊಳು ಧರ್ಮವ ಮಾಡುವರಿಗೆ ಈಗ । ನೆರವಾಗಬೇಕು ನೀವಿಂತು
ಒರೆವುದುಚಿತವೆಯೆಂದೆಲ್ಲರ ಬೀಳ್ಕೊಟ್ಟು । ಇರುತಿರ್ದ ಗುರುಭಕ್ತಿಯಿಂದ ೨೬

ಈ ಪರಿಯೊಳು ಮಾಯ[13]ದ[13] ತಪಸಿಯು ಕಣ್ಣ । ಆ ಪೊತ್ತು ಬಿಡಲಿಲ್ಲವೆಂದು
ಏಪೇಳ್ವೆ ತಪದ ನಿಗ್ರಹವನು ಕರ್ಮದ । ತಾಪ ಬಿಡದು ಎಂದು ನರಳ್ವ ೨೭

ಎಲ್ಲ ಕಾಷ್ಠದೊಳಿರ್ದ ಅಗ್ನಿ ಅರಣ್ಯವ । ನಿಲ್ಲದೆ ದಹಿಸುವಂದದೊಳು
ಖುಲ್ಲರು ಎದೆಯೊಳಗಿಟ್ಟ ಕೇಡನು ಈಗ । ಎಲ್ಲರ ಕೆಡಿಸದೆ ಇಹರೆ ೨೮

---

1 ಖ (ಗ) 2 ವೆ (ಕ) 3 ಯಿಾ (ಕ) 4 ಜ (ಕ) 5 ಮಹ (ಕ) 6 ತ (ಕ)
7 ದ್ದ (ಗ) 8 ಯಿ (ಗ) 9 ದಕ್ಕಿಸು (ಕ) 10 ಗೆ (ಕ) 11 ವಮ (ಗ)
12 ರುಂಟೆನೀವಿದಮ (ಕ) 13 ಕದ (ಕ)

ಈ ರೀತಿ ಮಾಯದ ತಪಸಿ ವಾಜಿಯ ಒಯ್ವ । ದಾರಿಗಾಣದೆ ಚಿಂತಿಸುತ್ತ
ಕಾರಣಪುರುಷಗೆ ಕೇಡನು ಬಯಸುತ್ತ । ಧೀರಕುಂಡನು ಇರುತಿರ್ದ ೨೯

ಒಂದುದಿವಸ ವೃಷಭದಾಸ ನಿದ್ರೆ । ಯಿಂದ ಮೈಮರೆದಿರಲಾಗ
ಬಾಮ ಮಾಯಾವಿಮುನಿ ಇದು ವೇಳ್ಯ ನನಗೆಂದು । ಕುಂದದೆ ಪೊಕ್ಕ ಲಾಯವನು ೩೦

ಶೃಂಗಾರ[1]ವನು[1] ಮಾಡಿ ತೇಜಿಯ ನಡುರಾತ್ರಿ । ಅಂಗಣದೊಳಗದ ನಿಲ್ಲಿಸಿ
ಹಿಂಗದೆ ಅದರ ಬೆನ್ನೇರಿಲು ನಿಮಿಷಕೆ । ಲಂಘಿಸೆ ಗಗನಮಂಡಲಕೆ ೩೧

ಪೊಡವಿಯೊಳಗೆ ಪಂಚೇಂದ್ರಿ[ಯ]ಜೀವಂಗಳು । ಒಡೆಯನ ವಚನಸಂಜ್ಞೆಯನು
ನುಡಿ ನಡೆಯೆಲ್ಲವ ಬಲ್ಲುದರಿಂದಲಿ । ಕೆಡಹಿ ಕಳ್ಳನ ಭೂತಳಕೆ ೩೨

ಮಾಣದೆ ಗಗನದಿಂದಲಿ ಬಂದು ಭೂಮಿಗೆ । ಗೋಣು ಮುರಿದು ಸತ್ತು ತನ್ನ
ಪ್ರಾಣವನೇಳನೆ ನರಕಕ್ಕೆ ಒಯ್ದನು । ಜಾಣರಿದಕೆ ಎಳಸುವರೆ ೩೩

ಮತ್ತಾ ಕಳ್ಳನ ಕೆಡಹಿದ ವಾಜಿ ತಾನದು । ನಿತ್ಯ ಪೋಗುವ ಪಥವಿಡಿದು
ಅತ್ತಲು ವಿಜಯಾರ್ಧ ಗಿರಿಗಾಗಿ ಪರಿದಿ[2]ಲು । ಇತ್ತ ಕೌಶಂಬಿಯ ಪುರದಿ ೩೪

ಉತ್ತಮ ವೃಷಭದಾಸನು ಉದಯದೊಳೆದ್ದು । ಚಿತ್ತಶುದ್ಧದಿ ಪೋಗಿ ನೋಡೆ
ಉತ್ತಮವಾಜಿ ಲಾಯದೊಳಿಲ್ಲದಿರೆ ಮೂರ್ಛೆ । ಹತ್ತಿ ಬಿದ್ದನು ಧರೆಯೊಳಗೆ ೩೫

ಏನ ಹೇಳುವೆ ಕಳ್ಳ ಸತ್ತುಬಿದ್ದಿ[3]ರೆ ಮತ್ತೆ । ತಾನು ವಿಸ್ಮಯಚಿತ್ತನಾಗಿ
ಭೂನಾಥನಿಂದಾಜ್ಞೆ ಬರುವುದೆನುತಲಾ । ತಾ ನೆನೆವ ತ[4]ಲಿ[5]ರ್ದ ಜನರ ೩೬

ಬಂಧುಗಳೆಲ್ಲ ಪೇಳಲು ಕೇಳದೆ ನಾನು । ಮಂದಮತಿಯೊಳಿರ್ದು ನೃಪನ
ಬಂಧನಗಳಿಗೊಳಗಾದೆನು ನನ್ನಯ । ಹಿಂದಣ ಪಾಪವಿದ್ಯೆಸೆ ೩೭

ಆ ಸಮಯದಿ ಹಯ ಪೋದ ಸುದ್ಧಿಯನೆಲ್ಲ । ಭೂಸುದತೀಶ ಸುದಂಡ
ಓಸರಿಸದೆ ಕೇಳಿ ವೈಶ್ಯನ ಮೇಲೆ ತಾ । ರೋಷವ ತಾಳ್ದನೀ ತೆರದಿ ೩೮

---

[1] ಪ (ಗ) [2] ಜಿತಾ (ಗ) [3] ದ್ದ (ಕ) [4] ತ (ಕ) [5] ದ (ಕ)

ಬಡವಗೆ ಭಾಗ್ಯ ಬಂದರೆ ಅರ್ಥಮದದಿಂದ । ಕೆಡದವರಾರು ಲೋಕದೊಳು
ಬಿಡದೆ ಆ ಪಾಪಿಯು ಹಿಡಿತಂದೀಕ್ಷಣ । ಕಡಿಕಂ[1]ಡ[1] ಮಾ[2]ಡಬೇಕೆ[2]ಂದ ೩೯

ಕಾಲ ಕರೆದು ಒಡ[3]ಲ ಶೀಳ[3] ಪಾಪಿಯು । ಇಲ್ಲಿಗೆ ಹಿಡಿದೆಳತನ್ನಿ
ಎಲ್ಲರು ಮೆಚ್ಚುವಂದದಿ ಆಜ್ಞೆಯಿಕ್ಕೆನಾ। ಕೊಲ್ಲದೆ ಬಿಡುವೆನೆ ಅವನ ೪೦

ಪಾಪವೆ ಪುರುಷರೂಪಾಂತುದೊಯೆಂಬಂತೆ । ಭೂ[4]ಪ[4] ಸವಿಾಪದೊಳಿರ್ದ
ಕಾಪುರು[5]ಷರು[5] ಖಡ್ಗ ಪಿಡಿದು ಬಂದರು ಯಮ । ಭೂಪನ ದೂತರೆಂಬಂತೆ ೪೧

ದೀರ್ಘದೇಹವು ತು[6]ಂಬಿ[6]ವರ್ಣ ಮುಂಗಾ[7]ರಿಯು[7] । ಕಾರ್ಗಾಲದೊಡ್ಡೋಯೆಂಬಂತೆ
ಅರ್ಗಳವಲ್ಲದ ಮನುಜರು ಬಂದರು । ಭೋರ್ಗರೆವುತ ಸಿಡಿಲಂತೆ ೪೨

ಎಲ್ಲಿರ್ದಪ[8]ನೋ[8] ಕುಂಟನ ತೋರಿ ನೀವೆಂದು । ಎಲ್ಲರ ಕೊಲ್ಲುವಂಪದೊಳು
ಪೊಲ್ಲದ ಮನುಜರು ಬಂದರು ಚಂದ್ರನ । ಕೊಲ್ಲುವ ರಾಹುವಿನಂತೆ ೪೩

ರಾಜದ್ರೋಹವ ಮಾಡಿ ಪಾಜೆಗೆಟ್ಟವನನು । ರಾಜಬೀದಿಗೆ ಹಿಡಿತಂದು
ರಾಜಾಧಿರಾಜರು ನೋಡುವಂದದಿ ಈಗ । ತೇಜಗೆಡಿಸಿ ಮತ್ತವನ ೪೪

ಹೊಡೆದು ತಲೆಯ [9]ಸಿಡಿ[9]ಬಡಿದು ಅವನ ಮೈಯ । ಕಡಿಕಂಡ [10]ಮಾಡಬೇಕೆಂದು[10]
ಪೊಡವಿಪಾಲನ [11]ಪಾಪ[11] ರೂಪಾಗಿ ಬಂದಂತೆ । ಕಡುಪಾಪಿಗಳು ಬಂದರಾಗ ೪೫

ಅತ್ತಲು ವೃಷಭದಾಸನು [12]ತನ್ನ[12] ಮನದೊಳು । ಉತ್ತಮಜಿನರ ಪಾದವನು
ಮತ್ತೆ ತನ್ನೆದೆಯೊಳಗಿಟ್ಟು ಬಸದಿಯೊಳು । ಚಿತ್ತದೊಳಿಂ[13]ತೆ[13]ಣಿಸಿದನು ೪೬

ಈಗಲೆನಗೆ ಬಂದುಪಸರ್ಗ ಪರಿಹರ । ವಾಗುವ ಪರಿಯುಂಟೆನಗೆ
ಆಗದು ಚತುರ್ವಿಧ ಆಹಾರ [14]ನಾನೀಗ[14] । ನೀಗುವೆ ನನ್ನಯ ತನುವ ೪೭

ಸಾರಸಮ್ಯಗ್ದರ್ಶನಭೂಷಣ ಧರೆಯೊಳು । ಕಾರಣಪುರುಷನು ಇವ[15]ನೆ[15]
ಬಾರದ ಬವಣೆ ಬಂದಿತುಯೆಂದು ಜನರೆಲ್ಲ । ಭೋರೆಂದಳಲುತ್ತಲಿಹರು ೪೮

---

1 ಡವ (ಗ) 2 ದೆ (ಗ) 3 ಕಟ್ಟಿ ಆ (ಗ) 4 ಪತಿಯ (ಗ) 5 ಷ (ಗ)
6 ಬಿಯ (ಕ) 7 ರ (ಕ) 8 ನ (ಗ) 9 ಸೀಳಿ (ಕಜ) 10 ವ ಮಾಡುವೆನೆಂದು (ಕಜ)
11 ಕೋಪ (ಗ) 12 ತಾನು (ಗ) 13 ತೆಂದ (ಗ) 14 ನವಗೆಂದು (ಕ) 15 ನು (ಕ)

ಪಾಪದ ಕಾಲವಲ್ಲದೆ ಈಗ ಧರ್ಮವ । ವಿಪ್ರೋತ್ತ್ಮ ಮಾಡುವ ಜನಕೆ
ತಾಪ ತಾ ಬಂದೊದಗುವುದು ಸಜ್ಜನರಿಗೆ । ಪಾಪದ ಫಲವನೇನೆಂಬೆ ೪೯

ಈ ತೆಱದಿಂದಲಿ ಜನ[1]ರೆ[1]ಲ್ಲ ಮಱುಗುತ್ತ । ಭೂತಳದೊಳಗೆ ಇಂತಪ್ಪ
ಪಾತಕ[2]ವಾ[2]ತ್ರಗೆ ಬಂದುದು ಕಲಿಕಾಲ । ರೀತಿಯುಲ್ಲವೆ ಎಂದರೆಲ್ಲ ೫೦

ಪೂರ್ವಜನ್ಮದಲಿ ತಾನೆಸಗಿದ ಪಾಪವ । ಉರ್ವಿಯೊಳು ಬಿಡಿಸುವರುಂಟೆ
ಸಾರ್ವಭೌಮರು ಪೂರ್ವಕರ್ಮದಿಂ ಕೆಟ್ಟರು । ಸರ್ವಜ್ಞನೇ [3]ಗತಿಯೆಂದ[3] ೫೧

ಆ ಪುರದೊಳಗಿರ್ಪ ಪರದರೆಲ್ಲರು ತಾವು । ಆಪತ್ತು ತ[4]ಮಗೆ[4] ಬಂದಂತೆ
ತಾಪದಿ ಅಳಲುತ್ತ ರಾಜವೀದಿಯೊಳೆಲ್ಲ । ವ್ಯಾಪಿಸಿಕೊಂಡಿದ್ದರಾಗ ೫೨

ಈ ರೀತಿ ಬೀ[5]ದಿ[5]ಯೊಳೆಲ್ಲ ಜನಂಗಳು । ನೀರ ಕಱೆವುತ ಕಣ್ಗಳೊ[6]ಳು[6]
ಕಾರಣಪುರುಷನ ಕರ್ಮ[7]ವ[7]ಶಕೆ ಮ । ತ್ಯಾರಿದ್ದರೇನ ಮಾಡುವರು ೫೩

ಕರ್ಮವಶದಿ ಬಂದ ಕಷ್ಟವ ನೀಗಲು । ಉರ್ವಿಯೊಳು ಬಿಡಿಸುವರುಂಟೆ
ಪೂರ್ವಜನ್ಮದ ಪಾಪ ಒದಗಿತು ಇವಗೆಂದು । ಸರ್ವರು ಅಳಲುತ್ತಲಿಹರು ೫೪

ಕೇರಿಕೇರಿಯೊಳೆಲ್ಲ ಭೋರೆ[8]ಂದು ಅ[8]ಳಲುತ್ತ । ಧಾರಿಣಿಯೊ[9]ಳು ಬಿಳ್ದು[9]ರುಳ್ವ
ನಾರೀಜನಂಗ[10]ಳ[10] ನಿಕರವಿದ್ದುದು ಮತ್ತೆ । ವಾರಿಜಭವನ ಶಪಿಸುತ ೫೫

ಉತ್ತ[11]ಮ[11]ರಿಗೆ ಇಂತಪ್ಪ ದುಃ[12]ಖವು ಬ[12]ರೆ । ಮತ್ತೆ ಹರಣದಾಸೆ ಉಂಟೆ
ಚಿತ್ತದೊಳಗೆ ಜಿನಪತಿಗೆ ಶರಣುಯೆಂದು । ಸತ್ತುಹೋಗದೆ ಸುಮ್ಮನಿಹರೆ ೫೬

ಪುರಜನ ಪರಿಜನ ಬಂಧುಜನಂಗಳು । [13]ನೆರೆದು[13] ಬೀದಿಯೊಳು ಮಱುಗುತಲಿ
ಪುರಕೆ ಬಂದಿತೊ ಮಾರೀಹಬ್ಬವೆನುತಲವರು । ಇರದಾಡಿಕೊಂಡಳುತಿಹರು ೫೭

ಪಟ್ಟಣದೊಳಗೆಲ್ಲ ಕೇರಿಕೇರಿಗಳೊಳು । ಕೆಟ್ಟೆಕೆಟ್ಟೆವೆಂದು ಜನರು
ಕುಟ್ಟಿಕೊಳ್ಳುತ ತಮ್ಮ ಹಣೆಯೊಳು ಬೆರಳ್ಗಳ । ಚಿಟ್ಟುಚಿಟ್ಟುಕಾಯೆಂದು
ಮೊಱೆಯಿಡೆ ೫೮

---

[1] ವೆ (ಕ) [2] ಧಾ (ಗ) [3] ಶರಣೆನಗೆ (ಕ) [4] ನ (ಶ) [5] ದಿಬೀದಿ (ಗ) [6] ಳಗೆ (ಶ)
[7] ವಾ (ಗ) [8] ನ (ಗ) [9] ಳ್ಬಿದ್ದ (ಗ) [10] ಳು (ಶ) [11] ಮಜನ (ಶ)
[12] ಖ ಬಾದ (ಕ) ಖವು ಬಂ (ಗ) [13] ನಡು (ಗ)

ಈ ಪರಿಯೊಳು ಪರದನ ಪೂರ್ವಜನ್ಮದ । ಪಾಪವೆ ರೂಪನಾಂತಂತೆ
ಭೂಪ ಖಡ್ಗವ ಪಿಡಿಯುತಲಿರ್ದ ರೌದ್ರದಿ । ಕೋಪದಾರ್ಭಟೆಯೇನೆಂಬೆ ೫೯

ಅರಸಿನ ದೂತರು ಆರ್ಭಟಿಸುತಲೀಗ । ಹೊರಡೆಲೊ ಪಾಪಿ ದೇಗುಲವ
ಅರಸು ಮುನಿದ ಮೇಲೆ ಅರಗಳಿಗೆಯು ನಾವು । ಇ[1]ರೆ[1] ನಮಗಾಜ್ಞೆ ಬರುವುದು ೬೦

ಈ ಪರಿಯೊಳಗಾ [2]ಪ್ರ[2]ರದ ಜನಂಗಳು । ಪಾಪವೆ ರೂಪಾದಂತೆ
ಭೂಪ ಖಡ್ಗವ ಪಿಡಿದಿರ್ದನು ಯಮನಂತೆ । ಕೋಪದಾರ್ಭಟೆಯನೇನೆಂಬೆ ೬೧

ಬಸದಿಗೆ ಪೋದ ಭಟರ ಯಕ್ಷದೇವಿಯರು । ಮಿಸುಕಲೀಯದೆ ಸ್ತಂಭಿಸಿದರು
ಹಸಗೆಟ್ಟು ಪೊಳಗೆ ಬಯ್ಯುತಲಿರ್ದರು । ಮುಸುಕಿದ ಬಹುಕೋಪದಿಂದ ೬೨

ತಡವೇಕೆ ಕಳ್ಳನ ಹಿಡಿತನ್ನಿ ನೀವೆಂದು । ಬಿಡದೆ ಕಿಂ[3]ಕರರು[3] ಗರ್ಜಿಸುತ
ಪೊಡವಿಪಾಲ[4]ಕ[4] ಖಡ್ಗವಿಡಿದು ಚಿಮ್ಮುತಲಿರ್ದ । ಕಡುಕೋಪದಿ ಯಮನಂತೆ ೬೩

ಅತ್ತಲು ವಿಜಯಾರ್ಧ ಶಿಖರಿಯೊಳಿರು[5]ಹ[5] । ಚಿತ್ರಜಾರಿಯು ಜಿನಗೃಹವು
ನಿತ್ಯವೈಭವದಿಂದಲಿರು[6]ರೆ[6] ಅದಱ ನಾ । ಬಿತ್ತರಿಸುವರೆ ಬಂದಪುದೆ ೬೪

ಕಂದರ್ಪವಿಜಯನ ತೀರ್ಥವಂದನೆಗಾಗಿ । ಬಂದರು ದಿವ್ಯಯೋಗಿಗಳು
ವಂದಿಸಿ ಜಿನರನು ಬಂದಾಗ ಬಸದಿಯ । ಮುಂದೆ ನಿಂದಿರೆ ಸೂರ್ಯೋದಯದಿ ೬೫

ಮತ್ತೆ ಚಿಂತಾಗತಿಯೆಂಬ ಖೇಚರ ತಾನು । ಉತ್ತಮ ಜಿನರ ವಂದನೆಗೆ
ಚಿತ್ತಶುದ್ಧದಿ ಬಂದು ವಂದಿಸಿ ಜಿನರಿಗೆ । ಮತ್ತೆ ಜಗಿದ ಮುನಿಪತಿಗೆ ೬೬

ಉತ್ತಮಗುಣ ಪಾಜಿ ಕೆಡಹಿ ತಾ । ನಿತ್ಯ ಬರುವ ಪಥವಿಡಿದು
ಚಿತ್ತಶುದ್ಧದಿ ವಿಜಯಾ[7]ರ್ಧದ[7] ಬಸದಿಯು । ಒತ್ತಿಗೆ ಸಾರ್ದುದೇನೆಂಬೆ ೬೭

ಅಕ್ಷಿಪರ್ವ ಅಕೃತ್ರಿಮ ಚೈತ್ಯಾ[8]ಲಯ[8]ವ ತಾನು । ಉಲ್ಲಾಸದಿಂ ಬಲವಂದು
ಸಲ್ಲೀಲೆಯಿಂದ ವಂದಿಸಿ ನಿಂದಿರಲದ । ನೆಲ್ಲವ ಕಂಡನಾ ಖಚರ ೬೮

---

[1] ರ (ಗ) [2] ಪ (ಗ) [3] ಕ (ಕ) [4] ನು (ಗ) [5] ರ್ದ (ಕ) [6] ಹ (ಕ) [7] ಧ ರ್ (ಗ) [8] ಲ್ಯ (ಗ)

ಧರ್ಮದಿಂದಲಿ ಬಂ[1]ದ ಉಪಸರ್ಗ[1] ಪರಿಹರ । ಧರ್ಮದಿಂದಲಿ ಕರ್ಮ ಲಯವು
ಧರ್ಮ[2]ದಿಂದಲಿ ಸ್ವರ್ಗಾಪವರ್ಗವಹು[2]ದು । ಧರ್ಮದಿಂ[3]ದಾಗದುದೇನು[3] ೯

ಈ ರೀತಿ ಭಾವಿಸಿ ವೃಷಭದಾಸನು ತಾನು । ಮಾರವಿಜಯಾಗಿತ್ತು ಮನಸ
ಧಾರಿಣೀಪತಿಗೆ ಕಾಯವನೊಪ್ಪಿಸಿ ತಾನು । ಧೀರ ಯೋಗದೊಳಿರುತಿರ್ದ ೧೦

ಯೋಗದೊಳಗೆ [4]ಇ[4]ದ್ದ ಭೋಗದಾಸೆಗಳುಂಟೆ । ರೋಗಿಗೆ ರಾಗ [5]ತಾ[5] ಹಿತವೆ
ನೀಗುವೆ ಕಾಯ[ವ]ನಿಂಬುಪಸರ್ಗವು । ಆಗಲು ಅದ[6]ಕೆ ಯಾಂಜುವ[6]ನೆ ೧೧

ಕಾಯಸುಖವ ಬೇಕಾಗಿ ಈ ಲೋಕದ । ಆಯತಾಕ್ಷಿಯರಾಷ್ಟಭೋಗ
ಮಾಯ ಮತ್ಸರ ಲೋಭ ಪ್ರಾಣೋಪಹಾರವು । ಕಾಯದಾ[7]ಸೆಯು[7] ಉಳ್ಳ ಜನಕೆ ೧೨

ಅಷ್ಟಭೋಗ[8]ವು ಅಷ್ಟೈ[8]ಶ್ವರ್ಯ ಬಾವಿಸೆ । ಇ[9]ಷ್ಟ[9]ಭೋಗಗಳಾದಿಯಾದ
ಸೃಷ್ಟಿವಸ್ತುಗಳೆಲ್ಲ ಈ ಕಾಯಸುಖಕಾಗಿ ಬಾಯ । ನಿಷ್ಠವೆಂದವಗುಂಟೆ ಬಾಧೆ ೧೩

ತನುವಿನಾಸೆಯು ಎಳ್ಳನಿತಿಲ್ಲದೆ ತಾನು । ಮನದೊಳು ಜಿನರ ಪಾದವನು
ಘನಪುಣ್ಯಪುರುಷ ತಾ [10]ಭಾವಿ[10]ಸುತಿರ್ದನು । ಮುನಿ ಮುಕ್ತಿಪಥವ ನೋಳ್ಪಂತೆ ೧೪

ಆ ಸಮಯದೊಳಾಕಾಶದಿಂದಿಳಿತಪ್ಪ । ಭಾಸುರಗುಣಗಣನಿಳಯು
ವಾಸವನಿಭ ಚಿಂತಾಗತಿ ಜಿನಧರ್ಮ[11]ವ[11] । ರಾಶಿವರ್ಧನಚಂದ್ರಮನು ೧೫

ರಾಜೀವಸಖನ ರಥಕೆ ಕಟ್ಟಿರುತಿಪ್ಪ । ತೇಜಿಗಳೊಳಗೊಂ[12]ದ[12] ಸುರಪ
ಓಜೆಯಿಂದಲಿಯೇಜಿ ಧರೆಗಿಳಿದಂತೆ । ರಾಜ ಚಿಂತಾಗತಿ ಬಂದ ೧೬

ತೇಜಿಯನಿಳಿದು ಖೇಚರ ಭಕ್ತಿಯಿಂ ಜಿನ । ರಾ[13]ಜ[13]ನ ಭವನವ ಮೂರಮೆ
ರಾಜೀವಸಖ [14]ಕನಕಾಚಲವ[14] ಸುತ್ತುವಪ್ಪೋಲು । ಓಜೆಯಿಂದಲಿ ಬಲಗೊಂಡು ೧೭

ಬಸದಿಯೊಳಗೆ ಬಂದು ಪಣೆಗೆ ಕೈಗಳ ತಂದು । ಕುಸುಮಾಸ್ತ್ರವಿಜಯ[15]ನಿಗೆ[15] ಬಗಿ
ಹಸನಾಗಿ ಮುನಿಗಳ ನಿಕರಕ್ಕೆ ವಂದಿಸಿ । ಜಸವೆತ್ತು ಕುಳಿತನಾ ಖಚರ ೧೮

---

1 ದುಪಸರ್ಗಗಳ (ಕ) 2 ವೆ ಸ್ವರ್ಗಾಪವರ್ಗವನೀವು (ಗ) 3 ದಲಿ ಕರ್ಮಲ ಯಾವು (ಕ) 4 ಬಿ (ಗ)
5 ದಾ (ಕಚ) 6 ಕಂಜುವೆ (ಕ) 7 ಸೆ (ಕ) 8 ಉುಟೈ (ಕ) 9 ಷ್ಟ (ಕ) 10 ಸುಖಿ (ಕ)
11 ದವಾ (ಕ) 12 ದು (ಗ) 13 ಜಿ (ಕ) 14 ಸೂಕಾಂಚನ (ಕ) 15 ಯಾಗೆ ಎ (ಗ)

ಮಾನವಮದನ ಮಹಾವೀರ ಧೀರನೆ । ಸಾರಹೃದಯನೆ ಸಮ್ಯಕ್ತ್ವ
ವಾರಿಧಿಚಂದ್ರಮ ನಿನ್ನ ಅಭೀಷ್ಟ ಕೈ । ಸೇರಿತು ಕಣ್ದೆರೆಯೆಂದ ೧೯

ನಿನ್ನುಪಸರ್ಗವು ಪರಿಹರವಾಯಿತು । ನಿನ್ನ ಭಕ್ತಿಗೆ ಇದು ಫಲವೆ
ಇನ್ನು ನೀ ಮುಂದಣ ಭವದೊಳು ಮುಕ್ತಿಯ । ಕನ್ನೆಯನೊಲಿಸುವೆಯೆಂದ ೨೦

ಆ ವೇಳೆಯೊಳು ವೃಷಭದಾಸನು ತಾನು । ಭಾವಜಾರಿಯ ತನ್ನ ಮನದಿ
ಭಾವಿಸಿ ಕಣ್ದೆರೆವಭವಗೊಂದಿಸಿದನು । ದೇವೇಂದ್ರನಂತೆ ಭಕ್ತಿಯೊಳು ೨೧

ಬೇಗ ಸುದಂಡರಾಜನು ಬಂದು ಕಂಡನು । ಆಕಾಶದಿಂ ಪಯ ಬಾದು
ಬಾಗಿಲ ಮುಂದೆ ನಿಂದಿರೆ ಮನದೊಳು ತಾನು । ರಾಗವ ತಾಳ್ದನೇನೆಂಬೆ ೨೨

ವಾರಿಧಿಯೊಳು ವಡ[1]ಬಾ[1]ನಳ ಪುಟ್ಟಿ ತಾ । ನೀ[2]ರ ಸ್ವಲ್ಪ[2]ವ ಹೀರಿ ಮತ್ತೆ
ನೀರೊಳು ನಾಶವಾದಂತೆ ನೃಪನ ದ್ವೇಷ । ಹಾರಿತು ಪಯವ ಕಾಣುತವೆ ೨೩

ಉರಗನ ಬಾಧೆಯ ಕಳೆದ ಚಂದ್ರಮನಂತೆ । ಪುರದೊಳಿರುವ ಜನರೆಲ್ಲ
ದುರಿತಾರ್ಣವದೊಳು ಬಿದ್ದರಿಗೆ ಛತ್ರವು ಬಂದ । ಪರಿ[3]ಯಾದುದಾ[3] ಪುರಜನವು ೨೪

ಆ ಪುರದೊಳಗಣ ಜನರು [4]ಸುದಂಡ । ಭೂ[ಪ][4]ನ *ಕೋಪದಿಂ ಸತ್ತು
ಪಾಪವ ಕಳೆದು ಪುಟ್ಟಿದೆವೆಂದು ಖೇಚರ । ಭೂಪನಡಿಗೆ ಎರಗಿದರು* ೨೫

ಕೋಪವ ಬಿಟ್ಟು ಭೂಪ[5]ತಿ[5] ಬಸದಿಗೆ ಬಂದು । ತಾಪ್ರೊಡವಟ್ಟು ಜಿನರಿಗೆ
ತಾಪಸನಿಕರಕ್ಕೆ ವಂದಿಸಿ ಖಚರನೊಳು । ಭೂಪ [6]ನುಡಿದನಿಂತೆಂದ[6] ೨೬

ನನ್ನಯ ಸುಖಕಾಗಿ ಎಲ್ಲರ ನೋ[7]ಯಿಸಿ[7] । ಬನ್ನಬಡಿಸಿ[8]ವೆನು[8] ಈಗ
ಮುನ್ನ ನಾ ಮಾಡಿದ ಪಾಪದ ಫಲವಿದು । ನನ್ನಂದ ದ್ರೋಹಿಗಳುಂಟೆ ೨೭

ಲೋಕದೊಳೆಲ್ಲರು ತಮ್ಮಯ ಸುಖಕಾಗಿ । ಬೇಕಾದ ವಸ್ತುವ ಬಯಸಿ
ನಾಕ ನರೋರಗಪತಿಗಳು ಕೆಟ್ಟರು । ನೀ ಕೇಡನೆಣಿಸುವುದಜೀದೆ ೨೮

---

[1] ಬ (ಗ) [2] ರುಸ್ವರ (ಕ) [3] ಯಾ (ಗ) [4] ಸು (ಕ) ಸುದಂಡ ಭೂಪಾಲ (ಗ)
[5] ನು (ಗ) [6] ನಿಂತೆಂದನು (ಗ) [7] ಯ್ಸ (ಗ) [8] ದೆ (ಗ) * ಈ ಭಾಗ (ಕ) ಪ್ರತಿಯಲ್ಲಿಲ್ಲ

ಧೀರವೃಷಭದಾಸ[1]ನಾ[1] ಪಾಪ ಈಗಲು । ಧಾರಿಣೀಪತಿ ನಿನ್ನ ಸೇರಿ
ಘೋರೋಪಸರ್ಗವ ಮಾಡಿಸಿತಲ್ಲದೆ । ದೂರು ನಿನ್ನದು ಎಂದ ಖಚರ ೨೯

ಎಲ್ಲರು ಮಾಡಿದ ಪಾಪ ಎಂಬರೆ ನಾನು । ಕೊಲ್ಲಬೇಕೆಂದು ಪರದಗೆ
ಸಲ್ಲದಾಜ್ಞೆಯನಿಕ್ಕಿ ಕೊಲ್ಲದೆನ್ನಯ ಪಾಪ । ವಲ್ಲವೆ ಈಗ ಭಾವಿಸಲು ೩೦

ಹುಲಿಯ ಬಾಯೊಳಗಿರ್ದ ಹುಲ್ಲೆಯ ಮಱಿ ತಾನು । ಮಲಮಲನುಱುಗುತ್ತಲಿರ್ದ
ಹುಲಿಯ ಬಾಯನು ಕಟ್ಟಿಬಾನಂತೆ ಪುರಜನ । ನಲವಿಂದ ಬಸದಿಗೆಯ್ದಿದರು ೩೧

ಪರಮಸಮ್ಯಕ್ದೃಷ್ಟಿ ಪರಹಿತಚರಿತ್ರ[2]ನ[2] । ಧರೆಯೆಲ್ಲ ನೋಡುತಂದದೊಳು
ಮಱೆ[3]ದೆ[3]ನು ಘೋರೋಪಸರ್ಗನಿಕ್ಕಿದೆ । ದುರಿತ ತಪ್ಪದು ಮುಂದೆ ನನಗೆ ೩೨

ತೇಜಿಯನೇಱುವ ಸುಖಕಾಗಿ ಎಲ್ಲರ । ತೇಜಗೆಡಿಸಿ ಕೊಲ್ಲುವುದು
[4]ಓಜೆಯ[4] ಬಲ್ಲವರಿವಕೆಳಸುವ[5]ರುಂ[5]ಟೆ । ಈ ಜಗದೊಳು ರಾಜದ್ರೋಹಿ ೩೩

ಒಬ್ಬರ ಕೇಡಮಾಡುವರೆಂದು ಪರರ ಮೇಲೆ । ಅಬ್ಬರಿಸಲು ತಾನು ಮುನ್ನ
ಕೊಬ್ಬಿಲಿ ಮಾಡಿದ ಪಾಪ ಬೆನ್ನಲಿ ಬಂದು । ಹಬ್ಬಿತು ಕೇಳೆಲೆ ನೃಪತಿ ೩೪

ಸುಖದುಃಖವೆರಡು ಪುದ್ಗಲಜೀವಗಳಿಗೆಲ್ಲ । ವಿಕಳಕರ್ಮದ ಶಕ್ತಿಯಲ್ತೆ
ಅಖಿಳಾಗ[6]ಮದ[6] ಕೋವಿದರು ನಾವೀಗಲು । ಸುಖದು[7]ಖ[7] ಸಮಗಾಣ್ಬರೈಸೆ ೩೫

ಸುಖದುಃಖ ಸಮನೆಂದು ಭಾವಿಸೆ ಸ್ವರ್ಗದ । ಸುಖದೊಳೋಲಾಡಿ ಅಂತ್ಯದೊಳು
ಸಕಲ [8]ದೇ[8]ಶಾಧೀಶರಾಗಿ ಪುಟ್ಟುವರೆಂದು । ಸಕಲ ಸಜ್ಜನರು ಲಾಲಿಪುದು ೩೬

ಇಂ[9]ತೆಂದ[9] ಖೇಚರನೃಪತಿಯು ಹರುಷವ ಭೂ । ಕಾಂತಗೆ ಕೊಟ್ಟು ಲೀಲೆಯೊಳು
[10]ಸಂತೋಷ[10]ವಡಿಸಿ ವೃಷಭದಾಸನು ತಾನು । ಇಂತೆಂದು ಸ್ತುತಿಸಿದನಾಗ ೩೭

ಶ್ರೀಪಾಲದ್ಯಸು[11]ವರ್ಣ[11]ಭದ್ರನು ಘೋ । ರೋಪಸರ್ಗವನೆಲ್ಲ ಜಯಿಸಿ
ಪಾಪವ ಕೆಡಿಸಿ ಮುಕ್ತಿಗೆ ಪೋ[12]ದ[12] ಕಥೆಯನು । ವಿಪ್ರೋತ್ತಮ ನೀ ಕೇಳ್ವುದೈಸೆ ೩೮

---

1 ನು (ಗ) 2 ಗ (ಗ) 3 ವೆ (ಕ) 4 ವಾಜಿಯ (ಗ) 5 ದಂ (ಕ) 6 ಮ (ಕಚ)
7 ಖವೆರಡು (ಗ) 8 ದಿ (ಕ) 9 ತು (ಕ) 10 ಶಾಂತ (ಗ) 11 ರ್ಣ (ಗ) 12 ಪ (ಕಗ)

ಪಾಂಡವರೈವರ್ಗೆ ಕೌರವರುಪಸರ್ಗ । ಮಾಡಲು ಅದನೆಲ್ಲ ಜಯಿಸಿ
ನಾವೆಲ್ಲರರಿವಂತೆ ಅಪವರ್ಗಪದವಿಯ । ಕೂಡಿದರೆಂಬುದನರಿಯ ೩೯

ಸಾವಿರಾಳಿಯು ಪಟ್ಟ ಶಿಲೆ ತಾಳಿದರೆ ಮುಂದೆ । ದೇವರೆನಿಸಿ ಮೆಱೆವಂತೆ
ಈ ವಸುಧೆಯೊಳುಪಸರ್ಗವ ಜಯಿಸಲು । ದೇವರಾಗುವರು ತ್ರಿಜಗಕೆ ೪೦

ಪಂಚಕಲ್ಯಾಣದೊಡೆಯರೆಲ್ಲ ಉಪಸರ್ಗ । ಚಂಚಲವಿಲ್ಲದೆ ಜಯಿಸಿ
ಪಂಚಬಾಣನ ಗೆಲ್ದು ಮುಕ್ತಿಯ ಸಾರ್ದರು[1] । ಸಿದ್ಧಾಂತದಿಂದಿದುತಿರ್ದುದನರಿಯ ೪೧

ಎಂದಿಂತು ಫಲಬಗೆ ನೀತಿಗಳನು ಪೇಳಿ । ಕಂದರ್ಪರೂಪ ಖೇಚರನು
ಮಂದರಧೀರ ವೃಷಭದಾ[2]ಸನಿಗೆ ಭಕ್ತಿ । ಯಿಂದ ವಂದಿಸಿದ ಲೀಲೆಯೊಳು ೪೨

ಧಾರಿಣೀಪತಿ ಬಂದು ವೃಷಭದಾಸನದೊಂದು । ಧೀರತನಕೆ ಮೆಚ್ಚಿ ಬಳಿಕ
ಸಾರಸುವಸ್ತ್ರಾಭರಣವ [3]ತಾನಿತ್ತು । ನೀರ ತಂದನು ಕಣ್ಣನೊಳಗೆ ೪೩

ನಿನ್ನಯ ಹೃದಯಕೆ ಚಿಂತೆ[4]ಯನೆಸಗಿದೆ । ನಿನ್ನ[5] ಸದ್ಗುಣವನರಿಯದವೆ
ಭಿನ್ನವಚನಗಳ ನುಡಿದವ ಪಾಪವು । ನನ್ನದೈ ನೀ ನೋಯಬೇಡ[6] ೪೪

ರಾಜರು ಚಾಡಿಯ ಕೇಳಿ ಲೋಕದೊಳೆಲ್ಲ । ಓಜೆಗೆಟ್ಟರು ಸಜ್ಜನರು
ತೇಜಗೆಡಿಸಿ ಕೇಡ ಮಾಡದೆಯಿರ್ಪರೆ । ಮಾಜಲೇಕಿಮ್ಮಯ ಗುಣವ ೪೫

ಕಳ್ಳರ ಕೈಯಿಂದ ಕದ್ದು ತರಿಸುವದು । ಎಲ್ಲರ ಮೇಲೆ ಹಾದರವ
ಇಲ್ಲದೆ ಹೊರಿಸಿ ದಂ[7]ಡವ ಕೊಂಬ ಪಾಪಿಗ । ಳಲ್ಲವೆ ನೃಪರು ಲೋಕದೊಳು ೪೬

ಈ ಪರಿಯೊಳು ನೃಪ ತಮ್ಮ[8]ವಗುಣಗಳ । ಸ್ಥಾಪಿಸಿ ಪೇಳಿ ವರದನ
ತಾಪವನಿಳುಹಿ ವಂದನೆಗೈದ[9]ನಿಲ್ಲಿಗೆ । ಪಾಪ [10]ಹೋಯಿತು[10] ನನಗೆಂದ ೪೭

ಮೇರುಸುಧೀರನೆ ವಾರಿಧಿಗಂಭೀರ । ಸಾರಸದ್ಗುಣ ಗಣನಿಳಯ
ಧಾರಿಣಿಯೊಳು ಬಂಧುಜನಕೆ ಚಿಂತಾಮಣಿ । ಆರು ನಿನ್ನಂತೆ ಲೋಕದೊಳು ೪೮

---

1 ದರ್ (ಗ) 2 ಸ (ಗ) 3 ಐ (ಗ) 4 ಯಿನ್ನಾಕೆ (ಗ) 5 ನ್ನಯ (ಗ) 6 ಡೆಂದ (ಗ)
7 ಡ (ಕ) 8 ಯಾಯ (ಕ) 9 ನೆ (ಕ) 10 ವು (ಕ) ವು ಹೋಯಿತು (ಗ)

ಇಂತಿವು ಮೊದಲಾದ ನೀತಿಯ ನುಡಿದು ಭೂ । ಕಾಂತ ಹರುಷದಿ ಶೆಟ್ಟಿಯನು
ಸಂತೋಷಪಡಿಸಿ ಸುದಂಡಗೆ ಖೇಚರ ತಾ । ನಿಂತೆಂದು ಪೇಳ್ದ ನೀತಿಯನು ೪೯

ಅರಿಯದೆ ಬಾಲಕಾಲದೊಳು ಮಾಡಿದ ಪಾಪ । ಅರಿತಕಾಲಕ್ಕೆ ಪೋಗುವುದು
ಅರಿತು ಮಾಡಿದ ಪಾಪ ಮುಂದಣ ಜನ್ಮಕ್ಕೆ । ನರಕದುಃಖವನುಣ್ಣಿಸುವದು ೫೦

ಇರೆ ಬಂದುದಲ್ಲ ಈ ಕಾಯ ನೃಪತಿ[1]ಯಿನ್ನು[1] । ಧ[2]ರೆಯು[2] ಸತ್ಯದೊಳಾಳು ಬಳಿಕ
ಕರುಣವಿರಲಿ ಭವ್ಯಜನರೊಳು ನಿಚ್ಚಲು । ಭರಿತನಾಗಿರು ಧರ್ಮದೊಳಗೆ ೫೧

ಸಮ್ಯಕ್ದೃಷ್ಟಿಗ[3]ಳ್ಕೊ[3]ಂಡು ಜಿ[4]ನ[4]ವರ ಮೇಲೆ ಸ । ದೃಷ್ಟಿಯಿಂದಲವರಿಗೆ
ಇಷ್ಟಾರ್ಥಗ[5]ಳನ[5]ಿತ್ತು ರಕ್ಷಿಸುವರೆ ನಿನ್ನ । ಶ್ರೇಷ್ಠನೆಂಬರು ಬುಧಜನರು ೫೨

ಭಾವಿಸು ಹನ್ನೆರಡನುಪ್ರೇಕ್ಷೆಗಳ ನೀನು । ಜೀವಾದಿ ಸಪ್ತತತ್ತ್ವವನು
ದೇವಲೋಕದ ಸುಖದೊಳಗಿರ್ದ ಮುಂದಕ್ಕೆ । ದೇವರಾಗುವರು ತ್ರಿಜಗಕೆ ೫೩

ದರುಶನ ಜ್ಞಾನ ಚಾರಿತ್ರಂಗಳಿವು ಮೂರು । ಧರೆಯೊಳು ಧರ್ಮಕೆ ಬೀಜ
ಗುರುಪಂಚಪದಗಳ ಸ್ಮರಣೆಯಿಂದಲಿ ಮುಕ್ತಿ । ದೊರಕುವದೈ ಕೇಳು ನೃಪತಿ ೫೪

ಷೋಡಶಭಾವನೆಗಳ ಬೇಗ ಭಾವಿಸು । ಮಾಡಿಸು ಚೈತ್ಯಾ[6]ಲಯ[6]ವ
ಬೇಡಿದ ದಾನವ ಉತ್ತಮಪಾತ್ರಕ್ಕೆ । ಮಾಡು ನಾಲ್ಕನೆ ಭಕ್ತಿವೆರಸು ೫೫

ಮೂರು ಮೂಢಗಳೆಂ[7]ಟು[7] ಶಂಕೆಯನಾಯತ । ವಾರು ಮದಗಳೆಂಟು ಸಹಿತ
ಧಾರಿಣಿಯೊಳಗಿಪ್ಪತ್ತೈದು ಮಲಂಗಳ । ದೂರಿಸಿದವ ಸಮ್ಯಕ್ದೃಷ್ಟಿ ೫೬

ದಾನ ಪೂಜೆಯು ಶೀ[8]ಲ ಉಪವಾಸಗಳು ನಾಲ್ಕು । ಮಾನವರಿಗೆ ಮುಕ್ತಿಪಥವು
ಸಾನುರಾಗದಿ ನೀನೆಸಗೆ ಮುಕ್ತಿಯ ಸುಖ । ತಾನೊದಗುವುದು ಭೂಪಾಲ ೫೭

ಸಕಲ ಜೀವದ ಮೇಲೆ ದಯವಿರಬೇಕು ತಾ । ನಖಿಳ ಸುಖವ ಭಾವಿಸುವಗೆ
ಸ[9]ಕಲದೇಶಾಧೀಶರಾಗುವುದು ಮತ್ತೆ । ಸಕಲರಿಗಿದುವೆ ಸ[10]ದ್ಧ[10]ರ್ಮ ೫೮

---

[1] ಬೀಡು (ಕ) [2] ಲಿ (ಗ) [3] ಳಕಂ (ಗ.ಕ) [4] ನುಅ (ಗ) [5] ಳ (ಗ) [6] ಲ್ಯ (ಕ)
[7] ಬಹಾ (ಕ) [8] ಲು (ಕ) [9] ಕ (ಕ) [10] ಧ (ಗ)

ಧರ್ಮದಿಂದಲಿ ಸರ್ವಭೋಗೋಪಭೋಗವು । ಧರ್ಮದಿಂದಲಿ ಕರ್ಮ[illegible]
ಧರ್ಮದಿಂ ಸ್ವರ್ಗಾಪವರ್ಗವ ಪಡೆವರು । ಧರ್ಮವ ಮಾಡು[1]ವು[1]ದಾ[illegible]ರು ೫೯

ವಾರಿಧಿಗಂಭೀರ ವೃಷಭದಾಸ[2]ನು ತಾನು[2] । ಕಾರುಣ್ಯಪುರುಷ ನೀನೈಸೆ
[3]ಚಾರಣ[3]ಮುನಿಗಳು ತೇಜಿಯನಿನ್ನೊ[4]ಯ್ದು । ಸೇರಿಸೆಂದರು ಭೂಪಾಲನಿಗೆ ೬೦

ಅವಜಿಂದ ತೇಜಿಯು ನಾ ತಂದು ನೃಪತಿಗೆ । ಮುದದಿಂದಲಿ[5]ತ್ತ[5] ವೃತ್ತವನು
ವಿಘ್ನವಜಿ[6]ಯಿಂ[6]ದೆ ಮಾಡಿದು[7]ಪಸರ್ಗ ಹಿಂಗಿತು । ವದನಸ್ವರೂಪ [illegible] ೬೧

ಸಕಲತೀರ್ಥಕರು ಕರ್ಮಕ್ಷಯ ಮಾಡಿದ । ಸಕಲಾದ್ರಿಗಳಿಗೆ ನೀ ಪೋಗಿ
ಸಕಲ ಪುಣ್ಯವ ನೀನು ಸಂಪಾದಿಸಲು ಮುಂದೆ । ಸಕಲ ಸುಖವು ನಿನಗಹುದು ೬೨

ಇಂತಿವು ಮೊದಲಾದ[8] ನೀತಿಯ ನುಡಿದು ಭೂ । ಕಾಂತ ಸುದಂಡ ಪರಮನ
[9]ಕಾಂತ[9]ಪಡಿಸಿ ಸುಖಿಯಿರೆ ನೃಪ[10]ತಿಗೆ[10] ಮತ್ತೆ । ಇಂತೆಂ[11]ದ[11] ಖಚರ
ಬುದ್ಧಿಯನು ೬೩

ಮತ್ತು ಕ[12]ರ್ಮಕ್ಷ[12]ಯಗಳನೆಲ್ಲ ಮಾಡಿದ । ಚಿತ್ರಜಾರಿಯ ಭವನಗಳ
ನಿತ್ಯವಂದನೆಗಳ ಮಾಡು ನೀ ಮೋಕ್ಷಕೆ । ಪತ್ತಿಸುವುದು ಕ್ರಮದಿಂದ ೬೪

ಪ್ರೀತಿಯಿಂದಲಿ ಚಿಂತಾಗತಿ ನೃಪತಿಗೆ । ನೀತಿಮಾರ್ಗವನೆಲ್ಲ ತೋಜಿ[3]
ವೀತರಾಗನಿಗೆಜಿಗಿಯು ಮುನಿಗೊಂದಿಸಿ । ಧಾತವೇಚರ [13]ಪೋದನತ್ತ[13] ೬೫

ಮಾರಸನ್ನಿಭರೂಪ ವಾರಿಧಿಗಂಭೀರ । ಧಾರಿಣಿಯೊಳು ಮೇರುಧೀರ
ಸಾರಸದ್ಗುಣಮಣಿ ಕುಲದೀಪಭೂಷಣ । ಧೀರ ವೃಷಭದಾಸನೆಸೆದ ೬೬

ಧರೆ ಗಿರಿ ಶರಧಿಯು ಪೊತ್ತಿರುವಾತನ । ಶಿರದ ಮೇಲಿರುವಾತ್ಮಜನ
ದುರದೊಳೋಡಿಸಿ ಮುಕ್ತಿಸಿರಿಯೊಳು ಸುಖಿಯಿರ್ದ । [14]ಪರಮನ ವಂದಿಸುವೆ[14] ೬೭

ಇದ ಬರದೋದಿ ಕೇಳಿದರಿಗೆಯಾರೋಗ್ಯ । ಇದ ಕೇಳಿದರಿ[15]ಗೆ[15] ಸೌಭಾಗ್ಯ
ಇದ ಚಿತ್ರದೊಳು ನೆಲೆಗೊಳಿಸೆ ಸ್ವರ್ಗ[16]ಕೆ[16] ಯೋಗ್ಯ । ಇದು ಮುಕ್ತಿಸತಿಯ
ಸೌಭಾಗ್ಯ ೬೮

---

1 ವ (ಗ) 2 ನು (ಕ) 3 ಕಾರುಣ್ಯ ಪುಣ್ಯ (ಕ) 4 ನೊ (ಕ) 5 ತ್ತು (ಗ)
6 ದ ಉ (ಗ) 7 ಮ (ಗ) 8 ಗ (ಕ) 9 ಸಂತೋಷ (ಕ) 10 ತಿ (ಕ) 11 ದನಾ (ಕ)
12 ರ್ಮ (ಕ) 13 ಪೂಜಿಮಂಟ್ಟ (ಗ) 14 ಪಾದಕೊಂದಿಸುವೆನು (ಗ) 15 ಗೆ ಸಕಲ (ಗ)
16 ಕಯಿದು (ಕ)

# ಹದಿನೇಳನೆಯ ಸಂಧಿ

ನಲವಿನಿಂದಿರುವನು ಕೊಲಲೆಂದು ಬಿಲ್ಲಿಗೆ । ಅಲರಬಾಣವ ಹೂಡಿ ಮತ್ತೆ
ಕಲಹಕೆ ನಿಂದಿರುವನ ಗೆಲ್ದ ಭವ[1]ನ[1] । ಜಲಜಾಂಘ್ರಿಯುಗಲಕೊಂದಿಪೆನು ೧

ಭೂಮಿಯು...ಸರಿನ ದೇವನಾತ್ಮಜನ ಸು । ಪ್ರೇಮನ ಮಗನ ಪಾರ್ಥಿಸಿದ
ಸ್ವಾಮಿಯ ಪಾದಪಯೋರುಹಯುಗಲಕ್ಕೆ । ಧಾಮಭಕ್ತಿಯೊಳೊಂದಿಸುವೆನು* ೨

ಶ್ರೀಮದಮರಪತಿಮಕುಟಗಂಜಿತರತ್ನ । ಧಾಮಕಿರಣಚರಣಾಬ್ಜ
ಸೋಮಾರ್ಕಶತಕೋಟಿತೇಜಸುಪಾರಿಶ್ವ । ಸ್ವಾಮಿ ಕೊ[2]ಡೆ[2]ನಗೆ ಸನ್ಮತಿಯ ೩

ಪ್ರೀತಿಯಿಂದಲಿ ಚಿಂತಾಗತಿ ನೃಪತಿಗೆ । ರೀತಿ ನೀತಿಗ[3]ಳನು[3] ಪೇಳಿ
ವೀತರಾಗನಿಗೆರಗಿ ಮುನಿಗೊಂದಿಸಿ । ನೀತಿಖೇಚರ ಪೋದನಿತ್ತ ೪

ಜಿನಪಾದಭಕ್ತನು ವನಧಿಗಂಭೀರನು । ಮನಸಿಜರೂಪನುದಾರ
ದಿನಕರತೇಜ ಸದ್ಗುಣಮಣಿಭೂಷಣ । ವಿನಯ ಜಿನಾಬ್ಧಿಚಂದ್ರಮನು ೫

ಧೀರವೃಷಭದಾಸನದೊಂದು ಭಕ್ತಿ[4]ಯ[4] । ಧಾರಿಣೀಜನರು ಕೊಂಡಾಡಿ
ಸಾರ ಸಮ್ಯಕ್ತ್ವವ ಧರಿಸಿ ಮಿತ್ಯತ್ವದ । ದಾರಿಯ ತೊಲ[5]ಗಿ[5]ದರಾಗ ೬

ಧರ್ಮವೃಕ್ಷಕೆ ದಯಾ ಬೀಜವು ಭಾವಿಸೆ । ಧರ್ಮದಿಂದಲಿ ಕರ್ಮಲಯವು
ನಿರ್ಮಲಧ್ಯಾನದಿ ನಿಚ್ಚ ಸೆಗಳೆ ಮುಕ್ತಿ । ಹರ್ಮ್ಯದೊಳಗೆ ಬೆಳೆ[6]ಗುವ[6]ರು ೭

ಭೂಪ ಸುದಂತ ಸಮ್ಯಕ್ತ್ವವ ಧರಿಸಿ ತಾ । ಪಾಪಕೃತ್ಯವನೆಲ್ಲ ಬಿಟ್ಟು
ಕೋಪವ ತೊಲಗಿಸಿ ಧರೆಯನಿಂತಾಳ್ದನು । ಏಪೇಳ್ವೆ ನೃಪನ ಸತ್ಯವನು ೮

---

[1] ರೆ (ಗ) [2] ಡಾಯ (ಗ) [3] ಳಂ (ಜ) [4] ಗೆ (ಗ) [5] ಗಿಸಿ (ಕ) [6] ಗಿದ (ಕ)

* ಈ ಪದ್ಯ (ಗಜ) ಪ್ರತಿಗಳಲ್ಲಿಲ್ಲ.

ನಾಡಿಗೆಲ್ಲ[1]ಕೆ[1] [ತಾನು][2] ಕೇಡನು ಎಣಿ[3]ಸ[3]ನೆ । ಬೇಡಿದವರಿಗೀಷ್ಟ[4]ವಿತ್ತು
ಮಾಡಿಸುವನು ಜಿನಗೃಹದಿ ಪ್ರತಿಷ್ಠೆಯ । ನೋಡಿ ಸಂತೋಷಪವನೆಯ್ದ್ವಾ ೯

ದಂಡದೋಷಗಳಿಲ್ಲ ಬಂಡಾತನಗಳಿಲ್ಲ । ಲಂಡರು [5]ತ ನಾ[5]ಡೊಳಿಲ್ಲ
[6]ಕೊಂಡೆ[6] ಹೇಳುವರಿಲ್ಲ ಕೋಟಿಗಳಿಲ್ಲ ಭೂ । ಮಂಡಲೇಶ್ವರನ ದೇಶದೊಳು ೧೦

ಕೊಲೆ ಹುಸಿ ಕಳವು ಪಾದರ ಬೇಂಟೆ ತಾನಿಲ್ಲ । ಹಲವು ಪಾತಕ ದುಃಖವಿಲ್ಲ
ಬಾ[7]ಲು[7]ದಂಡ ದೋಷ ಬಂಧನವಿಲ್ಲ ನಾಡೊಳು । [8]ನಲವಿನಿಂದಿ[8]ಹುದು ನಾಡೆಲ್ಲ ೧೧

ಇಂತು ಸತ್ಯದೊಳು ರಾಜ್ಯವನಾಳುತ್ತಿರುತ ಭೂ । ಕಾಂತನೊಂದಾನೊಂದು ದಿವಸ
ಸಂತೋಷದಿಂದೊಡ್ಡೋಲಗಗೊಟ್ಟಿರ್ದ । ಎಂತೆಂಬೆ ನೃಪನ ಸಂಪದವ ೧೨

ಕಂಠಮಾಲೆಯು ಹಾಕಿ ಕಮಲಾಕ್ಷಿಯರು ತಾ । ವೆಂಟು ಚಾಮರವ ಢಾಳಿಸುತ
ಬಂಟರು ಓಲಗದೊಳು ತುಂಬಿದ್ದರು । ಎಂಟುದೆಸೆಯೊಳೆತೆವಿಡದೆ ೧೩

ನವರತ್ನಖಚಿತಸಿಂಹಾಸನದೊಳು ನೃಪ । ದಿವಿಜೇಂದ್ರನಂತೆ ಕುಳ್ಳಿರ್ದ
ಭುವನಾಧಿಪತಿಗಳಿಕ್ಕೆಲದಲಿ ಕುಳ್ಳಿರೆ । ಸವಿನುಡಿಗಳ ಸೊಬಗಿಂದ ೧೪

ವಿದ್ವಾಂಸ ಕವಿಗಳು ಗಾಯಕ ಪರಿಹಾಸ್ಯ । ಸದ್ಧರ್ಮ ಪೇಳ್ವ ಪುರಾಣ
ಉದ್ಧತಯುತಿಹಾಸಸಹಿತ ಸಪ್ತಾಂಗದಿ । ಹೊದ್ದಿರುತಿಹನು ಭೂಪಾಲ ೧೫

ಕವಿ ಗಮಕಿ[9]ಯು[9] ವಾದಿ ವಾಗ್ಮಿಕರು ಮತ್ತೆ । ವಿವಿಧ ವಿದ್ಯಾಪರಿಣತರು
ಅವನೀಶನೆಡಬಲದಲ್ಲಿ ಸ[10]ಖ[10]ರಾಸತು । ನಿವಹವಿದ್ದುದು ಲೀಲೆಯೊಳು ೧೬

ಬೆಳ್ಳಿಲೆಗಳಿಗೆಯನೆಳೆವಣ್ಗಳಿಯ ತಾ । ನುಲ್ಲಾಸದಿಂದ ಕೈಕೊಳುತ
ಸಲ್ಲೀಲೆಯಿಂದ ಮೂಡೆಯನೊರಗಿರ್ದ ಭೂ । ವಲ್ಲಭರಾಜ ವೋಡಿಯೊಳು ೧೭

ಮಾಂಡಲಿಕರು ಮನ್ನೆಯರು ಸಾಮಂತರು । ದಂಡನಾಯಕರು ರಾವುತರು
ಗಂಡುಗ[11]ಲಿಯು[11] ಭಟನಿವಹವಿದ್ದುದು ಭೂ । ಮಂಡಲೇಶ್ವರನ ಓಲಗದಿ ೧೮

---

1 ಠಿಗೆ (ಕ) ನು (ಗ) 2 ನಾ (ಕಗ) ನಾನು (ಚ) 3 ಸಿ (ಗ) 4 ಷ್ಟಾರ್ಥ (ಗ) 5 ನಾ (ಗ)
6 ಕುಂದ (ಕ) 7 ಲ (ಗ) 8 ದೆಲಷಂದವಿ (ಗ) 9 ಯರು (ಕಚ) 10 ಕಲ (ಗ) 11 ಲಿ (ಗ)

ಚಪ್ಪನ್ನ ದೇಶದ ರಾಯ[1]ರಾ[1] ನೃಪತಿಗೆ । ಕಪ್ಪಕಾ[2]ಣಿಕೆ[2]ಯನಟ್ಟಿದೊಡೆ
ಒಪ್ಪಿ[3]ಕೊಂಡ[3]ವಗೆ ಉಡುಗೊರೆ[4]ಗಳನಿತ್ತು । ಅಪ್ಪಣೆಕೊಟ್ಟು ಬೀಳ್ಕೊಡುವ ೧೯

ವಾರನಾರಿಯರು ಓಲೈಸುತಲಿರ್ದರು । ಭೂರಮಣೀಶನೆಡಬಲದಿ
ನಾನಾದೇಶದ ರಾಯರ ಸಚಿವರು ಬಂದು । ಊರ ಬಾಗಿಲೊಳು ನಿಂದಿರಲು ೨೦

ಚಪ್ಪನದೇಶದರಸುಗಳ ಸಚಿವರು । ಅಪ್ಪಣೆಯಿಲ್ಲದೆ ಇರ್ದು
ಇಪ್ಪತ್ತು ದಿವಸಕೆ ಅಪ್ಪಣೆ ಆಗಲು । ಕಪ್ಪವ ನೃಪಗೊಪ್ಪಿಸುವರು ೨೧

ಹಡಪ ಪಾವುಗೆ ಕುಂಚ ಕಾಳಂಜಿ ದರ್ಪಣ । ಎಡಬಲದಲಿ ಪಿಡಿದಿ[5]ರುವ[5]
ಮಡದಿಯರಿರ್ದರು ಸ್ವರ್ಗದೊಳಿರುತಿಹ । ಕಡುಜಾಣೆಯ[6]ರನು[6] ಸೋಲಿಸುತ ೨೨

ಚವುಷಷ್ಟಿವಿದ್ಯಾಪ್ರವೀಣರು ಲಾಲಿಪ । ಚವುಷಷ್ಟಿ ಕಲೆಯ ಬಲ್ಲವರು
ಕುವಲಯಮಿತ್ರನ ತೇಜಕೆ ಮಿಗಿಲೆನಿ । ಸುವ ವಿಭುಗಳಿದ್ದರು ಸಭೆಯೊಳಗೆ ೨೩

ದಳಪತಿ ಮಂತ್ರಿ ಪುರೋಹಿತ ಶಾಸ್ತ್ರಗ । ಳರಿಯ ಕುಮಾರ ಬಂಧುಗಳು
ಕೆಳೆಯರು ವೈದ್ಯ ವಾಣಿಜ್ಯ ಜೋಯಿಸರೆಲ್ಲ । ಬಳಸಿರುತಿಹರು ಭೂಪತಿಯ ೨೪

ಆನೆ ಕುದುರೆ ಖಡ್ಗ ಸ್ತ್ರೀರತ್ನ ಭೂಷಣ । ಭೂನಾಥನಿಗೆ ಕಾಣ್ಕೆಯಿತ್ತು
ಏನೆಂಬೆ ಸಾಷ್ಟಾಂಗವೆರಗಿದ ನೃಪರನು । ಮಾನವಪತಿ ಮನ್ನಿ[7]ಸುವ[7]ನು ೨೫

ದೇಶ ದುರ್ಗವು ಮಂತ್ರಿ ಕೋಶ ಭಂಡಾರವು । ದೇಶದೊಳಿಲ್ಲವೆಂದೆನಿಸಿ
ಓಸರಿಸದೆ ಸಪ್ತಾಂಗರಾಜ್ಯದಿ ಕೂಡಿ । ಭೂಸುದತೀಶನೊಪ್ಪಿದನು ೨೬

ಎಪ್ಪತ್ತೆರಡುನಿಯೋಗದವರುಯೆಲ್ಲ । ತಪ್ಪ[8]ದೋಲೈಸಲು[8] ನೃಪನ
ಇಪ್ಪನು ಇಭವೈರಿಪೀಠದೊಳಿಂದ್ರ ತಾ । ನೊಪ್ಪದೊಳಿಹನು ಭೂಪೇಂದ್ರ ೨೭

ಇಂ[9]ತು[9] ಸಪ್ತಾಂಗದಿಂದೊಡಗೂಡಿ ಭೂಪತಿ । ಅಂತರವಿಲ್ಲದೆ ತಾನು
ಸಂತೋಷದಿಂದ ಸರ್ವರು ತಾವು ಓಲೈಸೆ । ಎಂತೆಂಬೆ ನೃಪನ ಸಂ[10]ಪದ[10]ವ ೨೮

---

1 ರು (ಗ:ಚ) 2 ಣ್ಯ (ಕ) 3 ಒಕೊಂಡರು (ಗ) 4 ಳು (ಕ) 5 ಹರು (ಗ) 6 ರ (ಗ)
7 ಸಿದ (ಕ) 8 ದೆ ಓಲೈಸೆ (ಗ) 9 ಅ (ಗ) 10 ಭ್ರಮ (ಗ)

ಈ ಪರಿಯೊಳು ನೃಪನೋಲಗದೊ[1]ಳಗಿ[1]ರೆ । [2]ಎಡೆಯಿಂದೆ ಕ್ಷೌರಿಕನೊರ್ವ[2]
ರೂಪ ನೋಡಲಿಯೆಂದು ದರ್ಪಣದೋಳ್ತೋರಿದ । ಭೂಪ ಕಂಡನು ಕೆನ್ನೆರೆಯು

ಜವ್ವನವಂ[3]ಬಾಡಲವನು[3] ಖೇದಿಪ । ಸವನಿತ್ಯ[4]ವಾ[4]ಯೆಂದು ತಿಳಿದು
ಭುವನಾಧಿಪತಿ ಭೋಗವಾಂಛೆಯ ತೊ[5]ರೆ[5]ದು ತಾ[5] । ವಿವರಿಸಿದನು ಮನದೊಳಗೆ ೩೦

ಹೆಂಡಿರು ಮಕ್ಕಳು ಧನ ಧಾನ್ಯ ಮಿತ್ರರು । ಹಿಂದು[6]ಮುಂದಿ ಬಂಧುಗಳು[6] ತಾವು
ಕಂಟಕತೆಗೆ ತಾವು ಕರ್ತ[7]ರಾ[7]ಗಿರುವರು ಯಮ । ದಂತ ತಾನೊಬ್ಬ ಕಾಲದೊಳು ೩೧

ಫಲವಾದ ಮರಕೆ ಪಕ್ಷಿಗಳು ಬಂದೆಲ್ಲವು । ಫಲವ ಭುಂಜಿಸಿ ಫಲ ತೀರೆ
ಪಲವುದೇಶಕೆ ಪೋಗುವಂತೆ ಸರ್ವರು ತಾವು । ತೊಲಗಿಹೋಪರು ಕಂಟಕತೆಗೆ ೩೨

ಕೆಲಕಾಲ ಸಂಸಾರದೊಳಗಿರ್ದು ಪಾಪವ । ನಲವಿನಿಂದಲಿ ಮಾಡಿ ಮತ್ತೆ
ಹಲವು ದುಃಖ ನೀಗೋದಕ್ಕೆ ಬಿದ್ದು ಕೆಸುವರು । ಫಲವಿಲ್ಲವೆಂದು ಚಿಂತಿಸಿದ ೩೩

ಅಲ್ಪಭೋಗದೊಳಿದ್ದು ದುಷ್ಟಕರ್ಮವ ಮಾಡಿ । ನಿಷ್ಠೆ ನೇಮಂಗಳನರಿಯದೆ
ಅಷ್ಟೈಶ್ವರ್ಯದೊಳಿರ್ದು ಧರ್ಮಂಗಳ । ನಷ್ಟರಾಳ್ವರು ಪಾಪಿಜನರು ೩೪

ಮಿಂಚಿನಂತೆಸೆವ ರೂಪ[8]ವಡೆದ[8] ಪಂಚೇಂದ್ರಿಗೆ । ಚಂಚಲವಾದಿ ಕನ್ಯೆ[9]ಯರ[9]
ವಂ[10]ಚನೆ[10] ಚಿತ್ರದೊಳಿಟ್ಟು ಕೊಡುವ ಕೋಟಿ । ಪಂಚಿನನೋಟ ಚಂದವು ೩೫

ಸೋಮವದನೆಯರು ವೃದ್ಧಗೆ ತಮ್ಮಯ । ಕಾಮಕೇಳಿ[11]ಯನು[11] ತೋರುವರೆ
ಪ್ರೇಮ[12]ದಿ[12] ತಮ್ಮ ಹಿರಿಗೆಯ ಪುರುಷನೊಳು । ಕಾಮಿಸಿ ಕಲೆ[13]ಯೊಳ್[13]
ಕೊಡುವರು ೩೬

ಸಂಸಾರದೊಳಗಿರ್ದು ಸಕಲದೋಷಂಗಳ । ಸಂಶಯವಿಲ್ಲದೆ ಮಾಡೆ
ಹಿಂಸೆಸಹಿತ ಎಲ್ಲರೊಳಗಿರ್ದು ಧರ್ಮ[14]ವಿ । ಧ್ವಂಸರಹರು[14] ಮೋಹಜನರು ೩೭

ಇಂತು ನಿರ್ವೇಗಪರಾಯಣ ತಾನಾಗಿ । ಸಂತೋಷದಿಂದಲಾ ನೃಪ[15]ನು[15]
ಅಂತರಂಗದಿ ಪರಮಾತ್ಮಧ್ಯಾನಂಗಳ । ಚಿಂತಿಸುತಿರ್ದ[16]ನೀ ತೆರದಿ[16] ೩೮

---

1 ಳಾಯಿ (ಗ) 2 ನಾದಿಗನೊರ್ವನು (ಗ) 3 ಬಳ (ಕ) ಬಡಲವ (ಗ) 4 ದಳು (ಗ) 5 ದು (ಗ)
6 ಬಂಧುಗಳ್ ಮುಂದಿ (ಕಚ) 7 ಯಸಾ (ಕಚ) 8 ಪಡೆದಿಹಿ (ಕ) ಪಡೆದ (ಚ) 9 ರು (ಕಚ)
10 ಚಾ (ಗ) 11 ಯ (ಕ) 12 ವ (ಕಚ) 13 ಳು (ಚ) 14 ವನೆನೆಯು (ಗ)
15 ತಿ (ಗ) 16 ಚಿತ್ತದೊಳು (ಗ)

ಭಾವಿಸಿದನು ಈರೆಂಟು ಭಾವನೆಗಳ । ಭಾವಿಸಿದನು ತತ್ತ್ವವೇಳ
ಭಾವಿಸಿದನು ಪರಾಜನುಪ್ರೇಕ್ಷೆಯ । ಭಾವಜನಿಭರೂಪಯುತನು ೩೯

ಸಿರಿ ಸಂಪತ್ತಿಂಪು ಸೋದರರೆಲ್ಲ ಮಂಜಿನ । ನೆರವಿ ಸ್ತ್ರೀಯರು ದೇಶ ಕೋಶ
ಮರುತನಿದಿರು [ಭಾವಿಸಲು ರೂಪ ಯೌವನ । ಸುರಧನು ಮಿಂಚು][1] ಬಂಧುಗಳು ೪೦

ಹಿಂದೆ ಅನಂತಭವದಿ ತೊಳಲುತ ಬಂ[2]ದೆ[2] । ಸಂದಿ[3]ಗಳಿ[3]ಲ್ಲ [4]ತ್ರಿ[4]ರತ್ನ
ವಂದಿಸಿದರೆ ಮುಂದೆ ಮುಕ್ತಿಯ ಮಾರ್ಗವ । ಹೊಂದಿ ಸುಖದೊಳು ಬಾಳುವೆನು ೪೧

ದರುಸನ ಜ್ಞಾನ ಚಾರಿತ್ರಂಗಳಿವು ಮೂಜು । ಧರೆಗೆಲ್ಲ ಧರ್ಮಕೆ ಬೀಡ
ದೊರಕದೆ ಭವಭವದೊಳು ತೊಳಲುತ ಬಂದು । ಕುಜಿಯದೆ ಯಮಕೊಲೆದಿಂದು ೪೨

ಬಂದ [5]ಅ[5]ನಂತಭವಂಗಳೊಳ್ ತೊಳಲುತ್ತ । ಚಂದ್ರಮುಖಿಯ ಸ್ನೇಹವೆಂಬ
ಅಂಧಕಾರದಿ ಸಿಲ್ಕಿ ಭವನಿಧಿಯೊಳು ಬಿದ್ದು । ಕುಂ[6]ದಾದು[6]ದೆನ್ನಯ ವಿಭವ ೪೩

ಈ ಪರಿಯೊಳು ಸುದಂಡ ಭೂಪಾಲನು ನಾ । ನಾ ಪರಿಯೊಳು ಯೋಚಿಸುತ್ತ
ಸ್ಥಾಪಿಸಿದನು ತನ್ನ ಚಿತ್ತದೊಳು ಜಿನರನು । ವಿಪೇಳ್ವ ನೃಪನ ಶ್ರದ್ಧೆಯನು ೪೪

ಮೂಜು ಮೂಢಗಳೆಂಟು ಶಂಕೆಯನಾಯತ । ವಾಜು ಮದಗಳೆಂಟು ಸಹಿತ
ದೂರಿಸಿ ಕಳೆದವ ಸಮ್ಯಕ್ತ್ವದೃಷ್ಟಿಗಳಿಂದು । ತೋಜ[?] ಪೇಳ[7]ವೆ[7]ನು ಲೋಕದೊಳು ೪೫

[8]ಕಲಕ[8]ಲಸಂಸಾರದೊಳಗಿರ್ದು ಕಷ್ಟದೊಳು । ಗೆಲುವಿಂದ ತಪವ ತಾಳಿದೊಡೆ
ಹಲವು ಪಾತಕಗಳ ಕಿಡಿಸಿ ಮುಕ್ತ್ಯಂಗನೆ । [9]ಗೊ[9]ಲುವಿಂದ ವಲ್ಲಭರಹರು ೪೬

ತಪಸಿಂದಲ್ಲದೆ ಕರ್ಮ ಕೆಡದೆಂದು । ಪಪ್ಪು[10]ವಿನಾ[10]ಸೆಯ ತಾನು ತೊಜಿದು
ಚಪಲಚಿತ್ತವ ಬಿಟ್ಟು ಪೇಯಸ್ತ್ರೀಯರ ಮೋಹ । ನಿಃಫಲವೆಂದ[11]ವ[11] ಯೊಂದಿ ೪೭

ಸತಿ ಸುತ ಮಿತ್ರ ಬಾಂಧವರು ಮಾತಾ ಪಿತೃ । ಹಿತಮನುಜರು ದೇಶ ಕೋಶ
ಅತಿರೂಪು ಜವ್ವನ ಯಂತ್ರ ಮಂತ್ರಗಳಿಲ್ಲ । ಗತಿಗೆ ಬಾರವು ತನ್ನೊಡನೆ ೪೮

---

1 ರೂಪುಯೌವನ ಸುರಧನು ಮಿಂಚು ಭಾವಿಸಲು (ಕಗಚ) 2 ದ (ಕ) 3 ಶಿ (ತ) 4 ಸ್ತ್ರೀ (ಕ)
5 ಅ (ಗ) 6 ದ (ಗ) 7 ಪ (ಗ) 8 ಕಾಲಕಾ (ಗ) 9 ಗೆ (ಕ) 10 ನಾ (ಗ) 11 ಜಿಂದನವ (ಕ)

ಈ ಪರಿಯಲಿ ನಿಜಗುಣವನು ಮನದಲ್ಲಿ । ಸ್ಥಾಪಿಸಿಯಿರುತಿರಲ[1]ತ್ತ
ವಿಪೇಳ್ವೆ ವೃಷಭದಾಸನದೊಂದು ಗುಣಗಳ । ನಾ ಪೇಳ್ವೆ[2] ಬ[3]ಲ್ಲವ[3]ರೊಳು ೪೯

ಏಕಚಿತ್ತದಿ ತಪಮಾಡಿದಲ್ಲದೆ ಕರ್ಮ । ತಾ ಕೆಡದೆಂದು ಚಿಂತಿಸುತ
ಲೋಕದಾಸೆಯ ಬಿಟ್ಟು ಏಕಚಿತ್ತದೊಳಿರೆ । ಬೇಕಾದ ಸುಖವ ಭಾವಿಸುತ ೫೦

ಸಂಸಾರವೆಂಬ ಶರಧಿಯೊಳು ತೊಳಲುತ್ತ । ಹಿಂಸೆಗೆ ಒಳಗಾಗಿ ನಾನು
ಹಂಸನ ಕಾಣದೆ ಹಲವು ಮನದೊಳಿನ್ನು । ಸಂಶಯದೊಳು ಬಳಲಿದೆನು ೫೧

ಇಂತು ನಿರ್ವೇಗಪರಾಯ[4]ಣ ತಾನಾಗಿ । ಕಂತುಹರ[5]ನ ಪಾದಾಂಬುಜವ
ಅಂತರಂಗದೊಳಿಟ್ಟು ಆತ್ಮತತ್ತ್ವಂಗಳ । ಭಾವಿಸುತಿರ್ದನವರೊಳು ೫೨

ಆ ಪ್ರ[6]ರದೊಳಗಾ ಧರ್ಮಾರ್ಥ ಸಮ್ಯಕ್ತ್ವ[7] । ವ್ಯಾಪಿಸೆ ಹೃದಯದೊಳವರು
ಕೋಪವ ಬಿಟ್ಟು ಭೂಪಾಲನೊಡನೆ ದೀಕ್ಷೆ । ಸ್ಥಾಪಿಸಬೇಕೆಂದರಾಗ ೫೩

ಪರಮಪಾವನಮೂರ್ತಿ ಪಾವನಚರಿತನು । ಕರುಣಾಸಾಗರಚಂದ್ರಮನು
ದುರಿತತಿಮಿ[8]ರಭಾನು[8]ವೆನಿ[9]ಸಿದ[9] ಪರದನ । ನೆರವಿಯೊಳು ಪೋಗಲೆಂದೆನಿ ೫೪

ಸಕಲ ಪರಿಗ್ರಹಂಗಳ ಬಿಟ್ಟಿಲ್ಲ[10]ರು[10] । ಅಖಿಳೇಂದ್ರಿಯಂಗಳ ತೊರೆದು
ಸಕಲಸುಖ[11]ವನೀ[11]ವ ದೀಕ್ಷೆಯ ನೃಪನಸಾರ್ದು । ಏಕಚಿತ್ತ ಮಾಡಿವರೆಲ್ಲ ೫೫

ಈ ವೇಳೆಯೊಳು ಪೋಗಿ ಭಾವಶುದ್ಧದಿ ತಾವು । ಭೂವರನೊಡನೆಯ್ದಿ ಬಳಿಕ
ಪಾವನದೀಕ್ಷೆಯ [12]ಧರಿಸಬೇ[12]ಕೆಂದೆಲ್ಲ । ಭಾವಶುದ್ಧದಿ ಬಂದರಾಗ ೫೬

ಅರಿರಾಯವಾರ್ಧಿವಡಬಾನಳರಿಪುರಾಯ । ಹರಿಣ ಶಾರ್ದೂಲ ಮಾರ್ಮಲೆತ
ಧರಣೀಶ ಗಿರಿವಜ್ರದಂಡ ಶಸ್ತ್ರಾಟವಿ । ತರಿವ ಕುಠಾರನೆಂದೆನಿಪ ೫೭

ಧರೆಯೊಳಗುಳ್ಳ ಭೂಪಾಲಚೂಡಾಮಣಿ । ಕಿರಣರಂಜಿತ ಚರಣಾಬ್ಜ
ಪರಮಪಾವನ ಬುಧಭೂಜನಕೆ ಚಿಂತಾಮಣಿ । ಅರಸು ಸುದಂಡನೊಪ್ಪಿದನು ೫೮

---

1 ಲಿ (ಗ) 2 [illegible] (ಕ) 3 ಲ್ಲಿ (ಕ) 4 ಣ (ಕ) 5 ವನ (ಕಚ) 6 ಪು (ಕ) 7 ಕ್ತ್ವವ (ಕ)
8 ರ (ಕ) 9 ಸಿ (ಕ) 10 ರ (ಕ) 11 ನಿ (ಗ) 12 ಬೇ (ಗ)

ವರದಶಿರೋಮಣಿ ಪಾವನಚರಿತನು । ದುರಿತತಿಮಿರಭಾಸ್ಕರನು
ಕರುಣಾಸಾಗರಚಂದ್ರಮ ಕಾಮರೂಪನು । ವರಸು[1]ತಗಿ[1]ತ್ತು [2]ರಾಜ್ಯ[2]ವನು ೫೯

ಉನ್ನತಗುಣಮಣಿ ವೃಷಭದಾಸನು ತಾನು । ಸನ್ಮತದಿಂ ಜಿನಗೃಹಕೆ
ರನ್ನಮೂಲಜನು ಪಡೆವ[3]ನು ತಾನೆ[3]ನುತಲಿ ಸಂ । ಪನ್ನ ನಡೆದ ಹರುಷದಲಿ ೬೦

ಸಂದಿಭಟ್ಟಾಚಾರಕರ ಪಾದಪದ್ಮವ । ಬಂದು ಸಾರ್ದನು ಹರುಷದೊಳು
ಬಂದಾಗಳೆಲ್ಲರು ಭಾವಜವಿಜಯಗಾ । ನಂದದಿಂದಲಿ ವಂದಿಸಿದರು ೬೧

ರಾಜ ಸುದಂಡ ರಾಜ್ಯವ ಸುತಗೊಪ್ಪಿಸಿ । ತೇಜಪಟ್ಟವ ಕಟ್ಟಿ ಬಳಿಕ
ಓಜೆಯ ಪೇಳಿ ಕೈಮುಗಿದು ಬಳಿಕ ಜಿನ । ರಾಜನಾಲಯವ ಸೇರಿದನು ೬೨

ಸುರ[4]ದೇವನು[4] ತಾನು ಸ್ತುತಿಸುತ ಜಿನರನು । ವರ[5]ಮ[5]ಸಖರು ಸಹವಾಗಿ
ದರುಶನ ಜ್ಞಾನ ಚಾರಿ[6]ತ್ರವ[6] ಪಾಲಿಪ । ಗುರುಸನ್ನಿಧಿಯನು ಸಾರಿದನು ೬೩

ಅ[7]ಕ್ಷ[7]ಯಸುಖವ ಪಡೆಯಲೆಂದು ಹರುಷದಿ । ದೀಕ್ಷೆಗೊಂಬಾಪೇಕ್ಷೆಯಿಂದ
ತತ್ಕ್ಷಣದೊಳು ಇಕ್ಷುಬಾಣನ ಗೆಲಿದವಗೆ । ರಕ್ಷಿಸೆನುತ ಎರಗಿದರು ೬೪

ಧರಣೀಶನೊಡನೆ ಸಾವಿರದೈನೂರ್ವರು । ಅರಸುಮಕ್ಕಳು ಮಂತ್ರಿವೆರ[8]ಸು[8]
ವರದಶಿರೋಮಣಿ ವೃಷಭದಾಸನು ತಾನು । ಪರಮನ ಗೃಹಕೆಯ್ದಿದ[9]ನು[9] ೬೫

ಮತ್ತೆ ಸಮುದ್ರದತ್ತನು ಸುರದೇವನು । ನಿತ್ಯಸುಖವ ತಾವು ಬಯಸಿ
ಚಿತ್ತಜಾರಿಯ ಭವನಕೆ ಅಯಿನೂರ್ವರು । ಮಿ[10]ತ್ರರು[10]ಸಹ ಬಂದರಾಗ ೬೬

ಏಕಚಿತ್ತದಿ ಸರ್ವಜಿನರಭಿಷೇಕಕೆ । ಬೇಕಾದವರ ಕೂಡಿಕೊಂಡು
ಜೋಕೆಯಿಂ ಜಿನರಿಗೆ ಪೂಜೆಯನೆಸಗಿ ಅ । ನೇಕ ಸುಖವನೀವುದೆಂದು ೬೭

ಬಿಟ್ಟರು ದಶವಿಧ ಪರಿಗ್ರಹಂಗಳನೆಲ್ಲ । ಬಿಟ್ಟರು ಸಪ್ತವ್ಯಸನವ
ಬಿಟ್ಟರು ಮೂರು ಮೂಢಗಳೆಂಟು ಮ[11]ಲ[11]ಂಗಳ । ತೊ[12]ಟ್ಟರು[12] ತ್ರಿರತ್ನಗಳನು ೬೮

---

1 ತಂಗಿತ್ತ (ರ) 2 ಭಾಗ್ಯ (ಗ) 3 ನೀಗಲಿ (ಗ) 4 ಧೀನುವ (ಕಗ) 5 ಮುನ (ಕಚ) 6 ತ್ರ (ಗ)
7 ಕ್ಷ (ರ) 8 ಸಿ (ಗ) 9 ರು (ಗ) 10 ತ್ರಗ 11 ದಾ (ಗ) 12 ಟ್ಟ (ಗ)

ಭಾವಿಸಿದನು ಜಿನರಾಜನ ಭಾವನೆಗಳ । ಭಾವಿಸಿ ಪ್ರೇಕ್ಷೆ ಯನ್ನೆರಡ
ಭಾವಿಸಿದರು ಪರಮಾತ್ಮ ಧ್ಯಾನಂಗಳ । ಭಾವಶುದ್ಧದಿ ಭವ್ಯ[1]ಜ[1]ನರು ೬೯

ಪರಮನ ಸ್ತುತಿಗಳ ಮಾಡುತ್ತ ನಿಂದಿರೆ । ಒರೆದರು ನಂದಿಯೋಗಿಗಳು
ಪರ[2]ದನು[2] ಪಸೆಯೊಳು ದಕ್ಷಿಣಪಾದವನಿಟ್ಟು ಕು । [3]ಳ್ಳಿರಿಜನಲಾಗ ಕುಳಿತರು[3] ೭೦

ಅಕ್ಷಯಸುಖವ ಪಾಲಿಸಲೆಂದು ತ್ರೈಲೋಕ್ಯ । ರಕ್ಷಾಮಣಿ ಪಾದಾಂಬುಜವ
ತತ್ಕ್ಷಣದೊಳು ಮುನಿಪತಿಯುರ ನೆನವುತ್ತ । ರಕ್ಷಿಸೆಂದರು ದೀಕ್ಷೆಕ್ರಮವ ೭೧

ಎಲ್ಲರು ಪಸೆಯೊಳು ನೂತನ ವಸ್ತ್ರ[4]ದಿ । ಸಲ್ಲೀಲೆ ಮಿಗೆ ಹರುಷದೊಳು
ಮೆಲ್ಲನೆ ದಕ್ಷಿಣಪಾದಪದ್ಮಾಸನ । ದಲ್ಲಿ ಕುಳಿತರುತ್ಸಹದಿ ೭೨

ಫಲಪುಷ್ಪಾಕ್ಷತೆಗಳ ಹಸ್ತಾಬ್ಜದೊ[5]ಳಗಿ[5]ಟ್ಟು । ಗೆಲವಿಂದ ಸ್ವಸ್ತಿಕ ಬರೆದು
ನಲವಿಂದ ವ್ರತಗಳ ಪೇಳ್ದರು ಮುನಿಗಳು । ಒಲಿದು ದೀಕ್ಷೆಯ ಕ್ರಮಗಳನು ೭೩

ಸುತ್ತೋಪದಿ[6]ವ ತ್ರಿ[6]ರತ್ನವ ಧರಿ[7]ದ[7] । ಕಂತುವೈರಿಯ ಪಾದಾಬ್ಜವನು
ಅಂತರಂಗದೊಳಿಟ್ಟು ಭಾವಿಸೆ ಅಘತತಿ । ಸಂತಾನ ಕೆಟ್ಟುಪೋಗುವುದು ೭೪

ಕಾಯಶುದ್ಧಿಗೆ ಕಮಂಡಲಬೋಧಾರ್ಥ । ಪ್ರಿಯದಿ ಶ್ರುತವಿತ್ತು ದಯಕೆ
ಮಯೂರಪಿಂಛವ ಪಾಲಿ[8]ಸೆ[8]ಯೆಂದಾ ಮುನಿ । ರಾಯ ಪೇಳ್ದನು ವ್ರತಗಳನು ೭೫

ಏಕಭುಕ್ತವು ನಿಮಗೆ [9]ವ್ರ[9]ತವಿರಲೆಂದು । ಏಕಠಾಣವು ಮೌನಸಹಿತ
ಜೋಕೆಯಿಂ ಬ್ರಹ್ಮವ್ರತವ ನಡಸಲು ಮುಂದೆ ಅ । ನೇಕ ಸುಖವು ನಿಮಗಹುದು ೭೬

ನೀತಿಯ ಭವ್ಯರ್ಗೆ ಪೇಳಲವರ ಕರ್ಮ । ವ್ರಾತವ ಕೆಡಿಸಿ ಧಾತ್ರಿಯೊಳು
ನೂತನತೀರ್ಥ ವಂದನೆಗಳ ಮಾಡೆಂದು । ಜಾತರೂಪನು ಬೆಸಸಿದನು ೭೭

ಧರಣೀಶನರಸಿ ವಿಜಯದೇವಿ ಪರದನ । ವರವಧು ಪದ್ಮಾವತಿಯು
ಸುರದೇವನಂ[10]ಗ[10]ನೆ ಲಕ್ಷ್ಮೀಮತೀ ಸಹ । ಹರುಷದಿಂದಲಿ ಬಂದು ಬಳಿಕ ೭೮

---

[1] ಜಿ (ಕ) [2] ದ (ಗ) [3] ಳಿತರುಫಲ್ಗುಂ ಕುಸವದಿಂ (ಗ) [4] ಸ್ತ್ರ (ಗ) [5] ಳಂಯಿ (ಕ)
[6] ಧಾತ್ರೀ (ಕ) [7] ದ (ಗ) [8] ಪ (ಕಚ) [9] ಮಾವ್ರ (ಕಚ) [10] ದ (ಕ)

ಶ್ರೀಮತಿ ಕಂತಿಕೆಯರ ಕೈಯ ದೀಕ್ಷೆಯ । ಪ್ರೇಮ[1]ದಿಂ[1] ಧರಿಸಿ ಮತ್ತವರು
ಈ ಮಹಿ[2]ಯೊಳಗು[2]ಳ್ಳ ಚೈತ್ಯಾಲಯಂಗಳ । ಧಾಮಭಕ್ತಿಯೊಳೊಂದಿಸಿದರು ೭೯

ಮತ್ತಾ ಪುರದೊಳಗುಳ್ಳ ಭವ್ಯರು ತಾವು । ಚಿತ್ತಶುದ್ಧದಿ ವ್ರತಗಳನು
ನಿತ್ಯ ನಡೆಸಿ ಕರ್ಮಕ್ಷಯ ಮಾಡಿಯೆಲ್ಲರು । ಉತ್ತಮಗತಿಯನೆ[3]ಯ್ದಿದ[3]ರು ೮೦

ಈ ಪರಿಯೊಳು ತಪಗ[4]ಳ[4] ಮಾಡಿ ಸರ್ವರು । ಪಾಪವ ಕೆಡಿಸಿ ಅಂತ್ಯದೊಳು
ಏಪೇಳ್ವೆ ಆತ್ಮಧ್ಯಾನದೊಳಿರ್ದು ಸರ್ವರು । ಓಪರಾದರು ಮುಕ್ತಿಸತಿಗೆ ೮೧

ವಸ್ತ್ರಾಭರಣಗ[5]ಳನೆ[5]ಲ್ಲವ ಕಳೆದು ಸ । ಮಸ್ತ ಪರಿಗ್ರಹ ಬಿಟ್ಟು
ವಿಸ್ತರಿಸುವರಳವಲ್ಲ ತಪ[6]ದ[6] ಪ್ರ । ಶಸ್ತವನೇನ [7]ಬಣ್ಣಿಸುವೆ[7] ೮೨

ಆ ಯೋಗಿ[8]ಗಳದೊ[8]ಂದು ಯೋಗಲಕ್ಷಣಗಳ । ಆ[9]ಯ[9]ವ ಬಲ್ಲವರಾರು
ಕಾಯಜವಿಜಯನ ಭಾವ[10]ದಿ ಭಜಿಸುತ್ತ[10] । ಸಯ್ಯಮಿಗಳು ರಂಜಿಸಿದರು ೮೩

ದುರಿತಾಂಧಕಾರಕ್ಕೆ ತರಣಿಯೆಂದೆನಿಪರು । ಸ್ಮರಿತಾತ್ಮಧ್ಯಾನಪರಿಣತರು
ಧರಿವಲ್ಲೂಕನಿಕರರಿಪುವೆನಿಸಿದ । ದುರಿತವಿಧ್ವಂಸಿಗಳಿಹರು ೮೪

ಕರ್ಮಕಾಳೋರಗ ಖಗರಾಜನೆನಿಸಿದ । ಕರ್ಮಾಬ್ಧಿ ಕುಂಭ[11]ಸಂ[11]ಯುತರು
ಕರ್ಮಾರಣ್ಯವನೆಲ್ಲ[12]ವಂ[12] ದಹಿಸಿದ ಮಹಾ । ಕರ್ಮದೂರರು ಇರುತಿಹರು ೮೫

ಧರ್ಮಸುಧಾಬ್ಧಿವರ್ಧನಚಾರುಚಂದ್ರ[13]ರು[13] । ಧರ್ಮಕುಮುದವಿ[14]ಕಸಿ[14]ತರು
ಧರ್ಮಭಾವನೆಗಳ ಭಾವಿಸಿದಾತ್ಮ[15]ಸ[15] । ದ್ಧರ್ಮೋಪದೇಶಕರಿಹರು ೮೬

ಕಲುಷಾದ್ರಿಗಳಿಗೆಲ್ಲ ಕುಲಿಶಯೆಂದೆನಿಸುವ । ಕಲುಃಕಾಮೋಘಮಾರುತರು
ಕಲುಷಮಾರ್ಗವ ಬಿಟ್ಟು ರಾಜವಿಜಯರು । ಕಲುಷವ ಕೆಡಿಸುತಲಿಹರು ೮೭

ಏಪೇಳ್ವೆ ಈ ರೀತಿಯೊಳು ತಪಗಳ ಮಾಡಿ । ಪಾಪವ ಕೆಡಿಸಿ ಅಂತ್ಯದೊಳು
ಏ[16]ಪೇಳ್ವೆ ಶು[16]ಷ್ಪ ಸಮ್ಯಕ್ತ್ವದಿಂದಲಿ ತಾ[17]ವು[17] । ಓಪರಾದರು ಮುಕ್ತಿಸತಿಗೆ ೮೮

---

1 ದಿ (ಗ) 2 ಮೆಯೊಳು (ಕ) 3 ಯ್ದುವ (ಗ) 4 ಸ (ಕ) 5 ಳೆ (ಕ) 6 ದಾ (ಕ) ದ್ರ (ಗ)
7 ಪೇಳುವೆ (ಗಚ) 8 ಯೊಳಗೊಂ (ಕ) 9 ಯಂ (ಕಗ) 10 ದಿ (ಕ) 11 ಸಂಭವ (ಕಗ)
12 ಡಂ (ಕಗ) 13 ಮರು (ಗ) 14 ಲಾಶಿ (ಕ) 15 ನಾ (ಗ) 16 ಪೂ (ಕ) 17 ತು (ಕ)

ಇಂತಿದನೆಲ್ಲವ ಕಂಡು ವಿದ್ಯುಲ್ಲತೆ । ಕಾಂತ ನಿನಗೆ ಸಮ್ಯಕ್ತ್ವ
ಅಂತರಂಗದಿ ಜನಿಸಿತುಯೆಂದು ಪೇಳಲು । ಸಂತೋಷವಾಯ್ತು ಸರ್ವರಿಗೆ ೮೯

ಪರಮಪಾವನಮೂರ್ತಿ ಪಾವನಚರಿತನು । ಕರುಣಾವಾರಾಶಿ[1] ಚಂದ್ರಮ[1] ನು
ದುರಿತವಿದೂರ [2]ಶ್ರೀ[2]ಹರ್ದಾಸನೊಪ್ಪಿ[3]ದ[3] । ತರುಣೀಜನಕೆ ಮನಸಿಜನು ೯೦

ಕಾಯುವರ್ಧನಕಾಂತೆ ಮಾಡಿದೆ ಅವ[4]ನಿ[4]ದ । ದಾಯಗೆಟ್ಟಳಿದು ಪೋಪವನ
ತೋಯು ಅಗ್ರಜನ ಮಾತೆಯು ವಿಂದಭವನಾಂಘ್ರಿ । ತೋಯಜಗಳಿಗೆ ವಂದಿಪೆನು ೯೧

ಮತ್ತೆ ಸತಿಯು ತಾನು ಪೊತ್ತಿರ[5]ವಾತನ[5] । ಪೆತ್ತವನಣುಗನ ತಾಯು
ಹೊತ್ತಂದು ನೆತ್ತಿಗೆರೆ[6]ಯಲು[6] ವಿಂದಭವಗೆ । ಚಿತ್ತಶುದ್ಧದಿ ವಂದಿಸುವೆನು ೯೨

ಇದು ಭವ್ಯಜನಚಿತ್ತಕುವಲಯಚಂದ್ರ[7]ಮ[7] । ತ್ತಿದು ಸಜ್ಜನರ ಕರ್ಣಾಭರಣ
ವಿದು ಸಮ್ಯಕ್ತ್ವವ ಪುಟ್ಟಿಪ ವಿತರಣ । ಇ[8]ದನು[8] ಕೇಳ್ವ[9]ರ[9] ಪಾಪ ಹರಣ ೯೩

ಇದ ಬರೆದೋದಿ ಕೇಳ್ದ[10]ವರಿ[10]ಗೆ ಆರೋಗ್ಯ । ಇದ ಭಾವಿಪ[11]ರಿಗೆ[11] ಸೌಭಾಗ್ಯ
ಇ[12]ದ[12] ಚಿತ್ತದೊಳು ನೆಲೆಗೊಳಿಸೆ ಸ್ವರ್ಗಕೆ ಯೋಗ್ಯ । ಇದು ಮುಕ್ತಿಸತಿಯ
ಸೌಭಾಗ್ಯ ೯೪

---

1 ವರ್ಧನ (ಕ) 2 ನಂ (ಗ) 3 ದನು (ಗ) 4 ರಿ (ಕ) 5 ವನವಗೆ (ಚ) 6 ಯೆ (ಗಚ)
7 ಮಂಮ (ಕ) 8 ದ (ಕ) 9 ವರ (ಕ) 10 ರಿ (ಗ) 11 ಗೆ (ಕಚ) 12 ದು (ಬ)
13 ಗೆ ಸೋದವೆಯಬ (ಗ)

# ಹದಿನೆಂಟನೆಯ ಸಂಧಿ

ಇಂದುವಿನಳಿಯನ ತಂದೆಯು ವೈದ್ಯನ । ಮುಂದುದಿಸಿದ[1]ನ[1] ಅಗ್ರಜನ
ತಂದೆಯು ತಾ ಮುಂದೆ ಗೆಲಿ[2]ವನ[2] ಪಾದಾರ । ವಿಂದಗಳಿಗೆ ವಂದಿಸುವೆನು ೧

ಮದನಸ್ವರೂಪ ಮಂಗಲಮೂರ್ತಿ ಸುಜನರ । ಹೃದಯವಾರಿಧಿಗೆ ಚಂದ್ರಮ[3]ನು[3]
ಸದಮಲಗುಣ[4]ಮಣಿ[4] ಅರ್ಹದ್ದಾಸನು ಇರ್ದ । ಸುದತೀಜನಕೆ ಚಿತ್ತಜನು ೨

ಇಳೆಗಧಿಪತಿ ಮಂತ್ರಿ ಕಥೆಗೇಳಿ ಈರ್ವರು । ಬೆಳಗಪ್ಪ ಜಾವದಿ ತಮ್ಮ
ನಿಳಯಕೆ ಪೋಗಿ ನಿದ್ರೆಯೊಳಿರುತಿರ್ದ ಮಂ । ಗಲವ ಕೇಳುತಲೆದ್ದ ನೃಪತಿ ೩

ಇಂದ್ರನ ದೆಸೆಯೊಳು ಕೆಂಪುದೋರಿತು ಪೂ । ರ್ಣೇಂದು ಸಾರಿದ ಪಡುಗ[5]ಡಲ[5]
[6]ಕಂ[6]ದಿ ಕೈರವ ಮೊಗಮುಚ್ಚಿದವಾಗಳೆ । ಬಂದರ್ಕನುದಯ ವೇಳೆಯೊಳು ೪

ಇಂದು ಈ ಸತಿ[8]ಪತಿ ದೀಕ್ಷೆಗೊಳ್ಳುವ[7] । ಚಂದವ ನೋಡುವೆನೆಂದು
ಬಂದರ್ಕನುದಯಾದ್ರಿಯೇಱಲು ನಕ್ಷತ್ರ । ವೃಂದ [8]ಕುಂ[8]ದಿತು ನಿಮಿಷದೊಳು ೫

ಉದಿತೋದಯನ ಮನದಂಧಕಾರವು ಈಗ । ಹರಿವಂತೆ ತಮದೊಡ್ಡು ತೊಲಗೆ
ಕೊರಲೆತ್ತಿ ಕುಕ್ಕುಟ ಕೂಯೆಂದು ಕೂಗುತ್ತ । ಒರಲುತ್ತಿರ್ದವು ಅರ್ಕೋದಯಕೆ ೬

[9]ಆ ಕ[9]ತ್ತಲೆಯನು [10]ನುಂಗಿ[10] ಅಕ್ರಿಸಲಾಱದೆ । ಕ[11]ಕ್ಕ[11]ದಂದದಿ ಕಾಡಿಗೆಯ
ಗಕ್ಕ[12]ನೆ[12] ತೊಲಗಿಸಿ ಜ್ಯೋತಿಗಳಿ[13]ಲ್ಲವು[13] । ಅರ್ಕೋದಯಕೆ ಸಂದಿದವು ೭

ಭೂಗಧಿಪತಿಯ [14]ನೀನೇ[14]ಳೆಂದು ಪೇಳ್ವಂತೆ । ಕೂಗಿದವಾಗ ಕೋಗಿಲೆಯು
ರಾಗದಿ [15]ಪ[15]ಕ್ಕವ ಒದರುತ್ತ ಗೂಡಿಂದ । ಬೇಗ ಪೋದವು ಖಗನಿಕರ ೮

---

1 ನ (ಕ) 2 ದ (ಗ) 3 ನ (ಕ) 4 ನಿಧಿ (ಗ) 5 ಡೆಯ (ಕ) 6 ಕುಂ (ಕ)
7 ಪುರುಷರು ದೀಕ್ಷೆಗೊಂಬುದ (ಕ) 8 ಕಂ (ಗ) 9 ಕ (ಗ) 10 ಅ (ಕ) 11 ಕ್ಕರ (ಕ)
12 ನೆ ಗಕ್ಕನೆ (ಗ) 13 ಲ್ಲ (ಗ) 14 ನೇ (ಕ) 15 ಪೊ (ಕ)

ಕುಂಭಿನೀಪತಿ ಹೃದಂಬುಜವಿಕಸಿತ । ವೆಂಬಂತೆ ಕೊಳದೊಳಗೆಲ್ಲ
ಅಂಬುಜ ವಿಕಸಿತವಾಗಲು ಅಳಿನಿ[1]ಕು[1] । ರುಂಬ ಎಜಗೆ ಆಕೋರ್ಇದಯಕೆ · ೯

ಮತ್ತೆ ಮಜ್ಜನವನು ಮಾಡಿ ಭೂಪಾಲನು । ನಿತ್ಯಕರ್ಮ[2]ವನು[2] ತ್ವ[3]ಸೆ[3]ಸಗಿ
ಮತ್ತಭವಗೆ ವಂದಿಸಿ ಮುನಿನಿಕರಕ್ಕೆ । ನಿತ್ಯವ್ರತವ ಕೊಂಡು ಎಜಗಿ ೧೦

ಹರುಷದಿ ನೃಪತಿ ಹಜಾರಕ್ಕೆ ತಾ ಬಂದು । ಕರೆಸೆ ಮಂತ್ರಿಯು ಬಂದು ಕುಳಿ[4]ತ[4]
ಚರರ ಕರೆದು ನೃಪ ಇಂತೆಂದು [5]ಒರೆವ[5]ನು । ಇರುಳು ಹಳಿದು ಮೆಚ್ಚದಿರ್ದ ೧೧

ಅರುಹದ್ದಾಸನ ಕಿರಿಯ ವಲ್ಲಭೆ ರಾತ್ರಿ । ತರುಣಿಯರೊರೆ[6]ದ[6] ಸತ್ಯತೆಯ
ದುರುಳೆ ಹಳಿದಾ[7]ಳ[7]ವಳೆಳೆತನ್ನಿಯೆಂದಾಗ । ಚರರೊಳು ಪೇಳೆ ಮಂತ್ರೀಶ ೧೨

ವರದಶ ಕುಲವಧುಗಳನು [8]ಹಜಾರಕ್ಕೆ[8] । ತರುವುದುಚಿತವಲ್ಲ ನಾವು
ವರದನ ಮನೆಗೆಯ್ದಿ ಕೇಳ್ವೊಡ [9]ಲಂಡೆಯು[9] । ವಾಯ ಕಾಣಲುಬಹುದರಸ ೧೩

ಈ ಪರಿ ಭೂಪಗೆ ಪೇಳೆ ಮಂತ್ರೀಶನು । ಭೂಪನವನು ಸಹ ಬಂದು
ಕೋಪವ ತೊಲಗಿಸಿ ಮನೆಗೆಯ್ದಿ ಭೂಪಗೆ । ತಾ ಪೊಡಮಟ್ಟನಾ ವರದ ೧೪

ಉತ್ತಮನರ್ಹದ್ದಾಸನು ಭೂಪೇಂದ್ರಗೆ । ಮುತ್ತಿನ ಗದ್ದುಗೆಯಿಡಲು
ಚಿತ್ತಜರೂಪರಿರ್ವರು ತಾವು ಕುಳಿತಾಗ । ಮತ್ತೆ ಪೇಳ್ದರು ವರದನಿಗೆ ೧೫

ಕರೆಸು ನಿನ್ನಯ ಕಿರಿ[10]ಯ[10] ವ[10]ಲ್ಲಭೆ ರಾತ್ರಿಯೊಳು । ತರುಣಿಯರೊರೆದ ಸತ್ಯಕಥೆಯ
ಹರುಷವ ಮಾಡದೆ ಹಳಿದು ನಿಂದಿಸಿಬಿ[11]ಟ್ಟ[11] । ತೆಜನ ಕೇಳಲುಬೇಕು ಕರೆಸು ೧೬

ರತಿರೂಪೆ ಕುಂದಲತೆಯು ಮುದದಿಂದಲಿ । ಪತಿ ಕರೆಯಲು ಬಂ[12]ದು ಬಳಿ[12]
ಕ್ಷಿತಿಪತಿಗೊಂದಿಸಿ ಪತಿಯೆಡಗಡೆಯೊಳು । ವ್ರತಶೀಲೆ ಕುಳಿತಳುತ್ಸವದಿ ೧೭

ಮೆಲ್ಲನೆ ಕೇಳ್ದನು ಭೂಪಾಲ ಸತಿಯರು । ಎಲ್ಲರು ಕಂಡು ಪೇಳ್ದುದನು
ಸಲ್ಲದ ಕಥೆಯೆಂದ ಬಗೆಯೇನು ಈಗಲು । ಸೊಲ್ಲಿಸವೇಕೆವೊಲ್ಮೀಗ ೧೮

---

[1] ಕ (ಗ) [2] ವ (ಕ) [3] ಸು ಎ (ಕ) [4] ತು (ಕ) [5] ಪೇಳ್ದ (ಗ) [6] ವ (ಕ)
[7] ಳಾ (ಗ) [8] ಕರ (ಕ) [9] ಡೆಮುಬಂಡಿ (ಕ) [10] ಯೊ (ಕ) [11] ಟ್ಟು (ಕ) [12] ದಳಾಗ (ಕ)

ಮಿತ್ರಶ್ರೀ ನಾಗಶ್ರೀ ಗಂಧಶ್ರೀ ವಿಷ್ಣುಶ್ರೀ । ಸತ್ಯದನಿಧಿ ಪದ್ಮಲತೆಯು
ನಿತ್ಯಶೀಲದ ವಿದ್ಯುಲ್ಲತೆ ಕನಕ[1]ಶ್ರೀಯು[1] । ಮತ್ತೆ ಪೇಳಿ[2]ದುದು[2] ಮಿಥ್ಯವಹುದೆ ೧೯

ಜಿನದತ್ತೆ ಸೋ[3]ಮೆ[3] ವೃಷಭದಾಸ ಮುಂಡಿಕೆ । ಘನಶೀಲವತಿ ಪದ್ಮಾ[4]ವತಿ[4]ಯು
ಘನಶೀಲನುಮಯುನು । ವಿಶ್ವಭೂತಿ ಮಹಾ । ಘನತೆಗೆ ಪುಸಿಯೆನ್ನಬಹುದೆ ೨೦

ಹರುಷದಿ ಜಿನದತ್ತ ಪೇಳ್ದ ಮಂತ್ರ[5]ದಿ[5] ಚೋರ । ಸುರಪದವಿಯು ಪಡೆದುದನು
ಧರೆಯೊಳ್ಲ ಬಲ್ಲುದ ಪುಸಿಯೆಂದ ಬಗೆಯೇನು । ಅಜಿಯಬೇಕೆನೆ ಪೇಳ್ದಳಿಂತು ೨೧

ಎಲ್ಲಗ ಮನದಿ ಸಮ್ಯಕ್ತ್ವ ಜನಿಸಿತೆಂದು । ವಲ್ಲಭನೊಳು ಉಸುರಲ್ಕೆ
ಸಲ್ಲದೆನುತ ನಾನು ಪೇಳಿದ ಬಗೆಯ [6]ಭೂ[6] । ವಲ್ಲಭ ಕೇಳು ಪೇಳುವೆನು ೨೨

ಹಿಂದಕ್ಕೆ ದೀಕ್ಷೆಯ ಕೊಂಡು ಮೋಕ್ಷಕೆ ಪೋದವ । [7]ರಂ[7]ದವ ಕಂಡು ತಾವೀಗ
ಬಂದು ಸಂಸಾರದಿ [8]ಪೊ[8]ಕ್ಕಿದ್ದು ಸಮ್ಯಕ್ತ್ವ । ಬಂದುದೆ[9]ದೊಡೆ[9] ನಿಜವುಂಟೆ ೨೩

ಹಿಂದಕ್ಕೆ ಸಮ್ಯಕ್ತ್ವ ನೃಪರೆಲ್ಲ ಮೋಕ್ಷಕ್ಕೆ । ಸಂದುದ ಕಣ್ಣಾರೆ ಕಂಡು
ಮುಂ[10]ದಕ್ಕೆ[10] ಇವರು ಸಂಸಾರಾಬ್ಧಿಯೊ[11]ಳು ಬಿ[11]ದ್ದು । ಹೊಂದುವರೆಂತು
ಸದ್ಗತಿಯ ೨೪

ಭೂಪೇಂದ್ರ ಕೇಳಿವರೆಲ್ಲರು ಸಂಸಾರ । ತಾಪದೊಳಿರ್ದು ತಾ ಮುಂದೆ
ಪಾಪವ ಕೆಡಿಸುವ ಬಗೆ ಯಾವುದೆಂದಾಗ । ಚಾಪಲನೇತ್ರೆ [12]ಕೇ[12]ಳಿದಳು ೨೫

ಉತ್ತಮಗತಿಗೈ[13]ದುವ[13] ಪಥವೇನೆಂದು । ಮತ್ತು ತಾ ಕೇಳ್ದ ಭೂಪೇಂದ್ರ
ಉತ್ತಮಗುಣದ ಭೂಪಣೆ ಕುಂದಲತೆ [14]ತಾ[14]ನು । ಚಿತ್ತಶುದ್ಧದಿ ಪೇಳ್ದಳಿಂತು ೨೬

ಹೊಜಿಗಣ ಹತ್ತು ಒಳಗೆ ಹದಿನಾಲ್ಕಿವು । ಪರಿಗ್ರಹಂಗಳ ಬಿಟ್ಟು ಬಳಿಕ
ಅರುಹನ ದೀಕ್ಷೆಯ ಧರಿಸವಲ್ಲದೆ ಕರ್ಮ । ಪರಿದುಹೋಗದು ಕೇಳರಸ ೨೭

ಮೂಜು ಮೂಢಗಳೆಂಟು ಶಂಕೆ ಅನಾಯತ । ಆಜು ಮದಗಳೆಂಟು ಸಹಿತ
ದೂರಿಸಿದವನೆ ಸಮ್ಯಕ್ದೃಷ್ಟಿ ಕೇಳೆಂದು । ಪಾರಿಜಮು[15]ಖಿಯು[15] ಪೇಳಿದಳು ೨೮

---

1 ಶ್ರೀ (ಗ) 2 ದು (ಕ) 3 ಮೊ (ಗ) 4 ಶ್ರೀ (ಗ) 5 ದ (ಗ) 6 ನು (ಕ)
7 ಅಂ (ಕ) 8 ಸಿ (ಗ) 9 ದರೆ (ಗ) 10 ದೆ (ಗ) 11 ಳಗಿ (ಗ) 12 ಪೆ (ಕ)
13 ದು (ಕ) 14 ಯು (ಕ) 15 ಖಿ (ಗ)

ದರುಶನ ಜ್ಞಾನ ಚಾರಿತ್ರಂಗಳಿವು ಮೂಱು । [1]ಸ್ಥಿರ[1]ಸುಖಲತೆಗಿ[2]ವು[2] ಬೀಜ
ಮಱೆ[3]ಯದೆ ದಶಧರ್ಮ ಭಾವನೆ ತುದಿಸಾಱು । ಸ್ಮರಿಸು ಹನ್ನೆರಡು ಪ್ರೇಕ್ಷೆಗಳ ೧೯

ನಾನಾ ವ್ರತಂಗಳ ನೆಗೞ್ದಡೆ ಸದ್ಗತಿ । ತಾನೊದಗುವುದು ಭೂಪೇಂದ್ರ
ಹೀನಸಂಸಾರದೊಳಿರುತಿರೆ ಕರ್ಮವು । ಹಾನಿಯಾಗು[3]ವುದ[3] ಲೋಕದೊಳು ೨೦

ದಾನ [4]ಪೂಜೆಯು ಶೀಲೋ[4]ಪವಾಸದಿಂದಲಿ । ತಾನೊದಗುವುದು ಸದ್ಗತಿಯು
ಸಾನುರಾಗದಿ ತಪ ಮಾಡಿದಲ್ಲದೆ ಕ[5]ರ್ಮ[5] । ಹಾನಿಯಾಗದು ಕೇಳು ನೃಪತಿ ೨೧

ಕೊಲೆ ಹುಸಿ ಕಳವು ಪಾದ[6]ರ ಅ[6]ತಿಕಾಂಕ್ಷೆಯು । ಬಲುವೆಸನಗಳೇೞ ತೊಱೆ[3]ದು
ನಲವಿಂದ ಪಂಚೇಂದ್ರಿಯ ವಿಷಯಸುಖಂಗಳ । ತೊಲಗಿಸಬೇಕು ಕೇಳರಸ ೨೨

ನೀರಬೊಬ್ಬುಳಿಕೆ ಕಾಮನಬಿಲ್ಲು ಮುಗಿಲೊಡ್ಡು । ನಾರಿಯು ಮಾನ ಸಂತೆನೆರವಿ
ದೂರದೊಳು ಪೊಳೆವ [7]ಬಯ[7]ಲ್ದೊರೆ ಇಂದ್ರನ । ಜಾಲವು ಜನರ ಸಂಪದವು ೨೩

ಸಿರಿ ಸಂಜೆಗೆಂಪು ಮಿಂಚಿನವಾಲೆ ಮಂಜಿನ । ನೆರವಿ ಬಿಸಿಲಹಯ ಮತ್ತೆ
ಶರಧಿಯ ತೆರೆನೊರೆಯೆಂದು ಯೌವನ ರೂಪು । ಸ್ಥಿರವಿಲ್ಲ ಮನುಜರ್ಗೆ ನೃಪತಿ ೨೪

ಇಂದು ಸುಖದೊಳಿರೆ ಯಮ ಬಂದು ತತ್ಕ್ಷಣ । ಕೊಂಡೊಯ್ಯೆ ಬಿಡಿಸುವರುಂಟೆ
ಬಂದೀಗ ಜಿನಧರ್ಮದೊಳು ಪುಣ್ಯಮಾಡದೆ । ಮುಂದೆ [8]ಸುಖವು ಫಲಿಸು[8]ವುದೆ ೨೫

ಹಿಂದೆ ಬರುವ ನೀರ ನಿಲಿಸಿ ಮಡುವಿನೊಳು । ಮುಂದಿರ್ದ ಜಲವ ಕಳೆಯಲು
ಅಂದೊಳಗಿರ್ದ [9]ವಸ್ತುವ[9] ಕಾಣ್ಬಂತೆ ತಾ । ಹಿಂದಣ ಕರ್ಮ ಕೆಡುವುದು ೨೬

ಬಂದು ಅನೇಕ ಜನ್ಮದಿ ಪುಟ್ಟಿ ತೊಳಲುತ್ತ । ಇಂದಿನವರೆ[10]ಗು[10] ಧರ್ಮವನು
ಒಂದನು ಅಱಿಯದ ಕಾರಣ ಸಂಸಾರ । ಗೊಂದಣದೊಳಗೆ ಸಿಕ್ಕಿದೆವು ೨೭

ಎಂಬತ್ತನಾಲ್ಕು ಲಕ್ಷಕಧಿಕವಾಗಿ । ಬೆಂಬಿಡದೆ ಹುಟ್ಟಿಬಂದು
ಹಂಬಲಿಸುತ ಭವಭವದೊಳು ಹಡಗಿನ । ಕಂಬದ ಕಾಕನಂದದೊಳು ೨೮

---

1 ಸಿರಿ (ಕ) 2 ದು (ಗ) 3 ದೀ (ಗ) 4 ಶೀಲವು ಪೂಜೆ ಉ (ಗ) 5 ವರ್ಮವೂ (ಕ)
6 ರ (ಗ) 7 ಬ (ಕ) 8 ಪುಣ್ಯವು ದೊರಕು (ಗ) 9 ವ (ಕ) 10 ಗೆ (ಗ)

ಎಲ್ಲರು ಬಲ್ಲರೆ ಕರ್ಮಂಗಳುಪಶಮ । ವಿಲ್ಲದವರಿಗುಂಟೆ ಭಕ್ತಿ
ಫುಲ್ಲಾಸ್ತ್ರವಿಜಯನ ಭಜಿಸಲು ಕರ್ಮವು । ನಿಲ್ಲದೋಡುವುದು ನಿಮಿಷದಿ ೩೯

ಅರ್ಥವು ಗೃಹದೊಳ[1]ಗಿರು[1]ವುದು ಮಿತ್ರರು । ಮತ್ತುಳಿ[2]ವ[2]ರು ಸತಿಸುತರು
ಮೂರ್ತಿ ಬೆಂಕಿಯೊಳುರಿವುದು ಪುಣ್ಯ ಪಾಪವು । ಪತ್ತಿಬಹುದು ತನ್ನೊಡನೆ ೪೦

ಇಂತು ಅ[3]ಧೃಪ[3]ವ ಪೇಳಲು ಕೇಳಿ ಸರ್ವರು । ಅಂತರಂಗದಿ ಹೇಯ ಪುಟ್ಟಿ
ಕಂತುಹರನ ಪಾದಾಂಬು[4]ಜವನು[4] ಭಜಿಸಲು । ಪಿಂತಣ [5]ಅಘ[5] ಲಯವಹುದು ೪೧

ನಿರ್ಮಲ ಜಿನದೀಕ್ಷೆ [6]ಧರಿಸಿ[6] ತೀರ್ಥಂಕರ । ಕರ್ಮಕ್ಷಯದ ಭೂಮಿಗಳನು
ಧರ್ಮತೀರ್ಥಗಳ ವಂದಿಸಿದೊಡೆ ಕರ್ಮವು । ನಿ[7]ರ್ಮೂಲ[7]ವಾಗಿ ಹೋಗುವುದು ೪೨

ತಪದಿಂದಲ್ಲದೆ ಧ್ಯಾನ ಪುಟ್ಟಲ[8]ಮ್ಮ[8]ದು ಮತ್ತೆ । ಉಪಶಮದಿಂ ಕರ್ಮ ಕೆಡುಗು
ತಪಗಳೀರಾರರೊಳ್ ನೆಗಳ್ದಡೆ ನಾಳೆ ತಾ । ಅಪರಿಮಿತದ ಸುಖವಹುದು ೪೩

ಅರ್ಥವ ಗಳಿಸಿ ಧರ್ಮವ ಮಾಡಲರಿಯದೆ । ವ್ಯರ್ಥಕೆ ಕೆಡಿಸುವರೀಗ
ಪಾತ್ರವರಿದು ದಾನವಿತ್ತಡೆ ಮುಂದಕ್ಕೆ । ಸ್ವಾರ್ಥವಾಗುವುದರ್ಥಫಲವು ೪೪

ಸತ್ಪಾತ್ರ ದಾನವಿತ್ತವರೆಲ್ಲ ಮುಂದಕ್ಕೆ । ಉತ್ತಮಗತಿಯ ಸಾರುವರು
ವ್ಯರ್ಥಕೆ ಅರ್ಥವ [9]ಗಳಿ[9]ಸಿ ಪಾಪಿಗಳು ಮುಂದೆ । ಸತ್ತು ನರಕವನೆ[10]ಯ್ದುವ[10]ರು ೪೫

ಹಿಡಿದ ಸುವ್ರತವ ನಡೆಸಿ ಕಡೆಯೊಳು ಮುಕ್ತಿ । ಮಡದಿಗೊಲ್ಲಭರು ತಾವಹರು
ಎಡೆಯೊಳು ವ್ರತವ ಬಿಟ್ಟಡೆ ಭವಭವವೆಂಬ । ಕಡಲೊಳು ಬಿ[11]ದ್ದು[11] ಕೆಡುವರು ೪೬

ವ್ಯವ[12]ಹಾ[12]ರ ನಿಶ್ಚಯ ಮಾರ್ಗವರಿದು ಮತ್ತೆ । ಭವಹರ ಜಿನರಂಘ್ರಿಯುಗವ
ದಿವರಾತ್ರೆ ಪಠಿಸಲು ಭವ್ಯರ ಪಾಪದ । ನಿವಹ ನಿರ್ನಾಶನವಹುದು ೪೭

ಇಂತೆಂದು ಕುಂದಲತೆಯು ಪೇಳೆ ಭೂ[13]ಪಾಲ[13] । ಸಂತೋಷದಿಂ ಕೇಳಿ ತನ್ನ
ಅಂತರಂಗದಿ ವೈರಾಗ್ಯಭಾವನೆ ಪುಟ್ಟಿ । ಇಂತೆಣಿಸಿದ ತನ್ನ ಮನದಿ ೪೮

---

1 ಮುಳಿ (ಕ) 2 ದ (ಕ) 3 ವೃಷ (ಗ) 4 ಜ (ಕ) 5 ಲಗು (ಕ) 6 ಪಡೆದು (ಕ)
7 ರ್ಮೂಲ್ಯ (ಗ) 8 ಅರು (ಗ) 9 ಕೆಡ (ಗ) 10 ಯ್ದಿದ (ಕ) 11 ದ್ದಗೆ (ಕ)
12 ಹ (ಗ) 13 ಪತಿ (ಗ)

ಅಂದು ನೃಪತಿ ಅರಮನೆಗೆಯ್ದಿ ಮಂತ್ರಿಯೊ । [1]ಳೊಂದಾಗಿ ಯೋಚಿಸಿ ಬಳಿಕ
ಕಂದಗೆ ಪಟ್ಟವ ಕಟ್ಟ[2]ಬೇಕೆಂದಾಗ । ಒಂದು ಶುಭಮುಹೂರ್ತ ತಿಳಿದು ೪೯

ಒಂದುದಿವಸ ನೃಪ ಓಲಗದೊಳಗಿರ್ದು[3] । ಬಂಧುವರ್ಗವ[4]ನೆಲ್ಲ ಕರೆಸಿ
ಚೆಂದಾಗಿ ಯೋಚಿಸಿ ಉಪವರ್ಗನು ತನ್ನಯ । ನಂದನ ಪಿತೃಮೋಕ್ಷನಿಗೆ ೫೦

ಕಂದ ನೀ ರಾಜ್ಯವನಾಳ್ವುದು ನಾನೀಗ । ಮುಂದಣ ಸುಗತಿಯನೀವ
ಕಂದರ್ಪವಿಜಯನ ದೀಕ್ಷೆಗೆಯ್ವೆನೆಂದು । ತಂದೆ ಪೇಳ್ದನು ತನ್ನ ಸುತಗೆ ೫೧

ನಾನು ರಾಜ್ಯವನೊಲ್ಲೆ ನಿಮ್ಮ ಕೂಡನೆ ಬಹೆನು । ಹೀನಸಂಸಾರ ದುಃಖವನು
ಜ್ಞಾನರಾಗದೊಳು ದಾಂಟುವೆನೆಂದ[5] ಸುತನೊಳು । ತಾನಿಂತು ಪೇಳ್ದ ರಾಜೇಂದ್ರ ೫೨

ಹಿಂದೆ ನಮ್ಮನ್ವಯದರಸುಗಳೆಲ್ಲರು । ನಂದನರಿಗೆ ಕೊಟ್ಟು ರಾಜ್ಯವನು
ಕುಂದದೆ ದೀ[6]ಕ್ಷೆಯ[7]ಪಡೆದು ಮೋಕ್ಷಕೆ ಪೋದ । ರೆಂದವ [8]ನೀನು ಕೇಳ್ದು[8]ದೆಯು ೫೩

ಕಂದ ಕೇಳು ನಮ್ಮ ವಂಶದ ನೃಪರೆಲ್ಲ । ತಂದೆ ಪೇಳ್ದಂತೆ ರಾಜ್ಯವನು
ಚೆಂದದಿಂದಾಳ್ದು ಅಂತ್ಯದಿ ದೀಕ್ಷೆಗೊಂಡರು[9] । ಕಂದ ಕೇಳಿದು ಕ್ಷಾತ್ರಧರ್ಮ ೫೪

ಈ ಪರಿಯೊಳು ತನ್ನ ಸುತೆಗೆ ಬುದ್ಧಿಯ ಪೇಳಿ । ಭೂಪ ಸುತ[10]ನ ಒಡಂಬಡಿಸಿ[10]
ರೂಪಮನ್ಮಥ ಉದಿತೋದಯ ಮಗನಿಗೆ । ತಾ ಪಟ್ಟಗಟ್ಟುವೆನೆಂದು ೫೫

ಶುಭದಿನ ಲಗ್ನವನಾರೈದು ಹಜಾರದೊಳು । ವಿಭವದಿ ಸುತಗೆ ಪಟ್ಟವನು
ಪ್ರಭುಗಳು ಸ[11]ಹ ಕಟ್ಟೆ ತಾ ಕ್ರಿಯ[11] ಮುಗಿದಾಗ । ಅಭವನಾಲಯಕೆ ನಡೆದರು ೫೬

ತನ್ನ ಒಡನೆ [12]ಜ[12]ನ[13]ಸಾ[13]ಸಿರದವರುಗಳು ಮ । [14]ಹೋ[14]ನ್ನತ ಹರುಷದಿ [15]ಬರಲು[16]
ರನ್ನ ಮೂಜನು ಪಾಲಿಸೆಂದು ಮುನೀಶನ । ಚೆನ್ನಡಿಗಳಿಗೆರಗಿದರು ೫೭

ಅರುಹದ್ದಾಸನು ತನ್ನ ಸುತನಿಗೆ ಬುದ್ಧಿಯ । ಒರೆದು ಒಪ್ಪಿಸಿ ಸೌಭಾಗ್ಯವನು
ಹರುಷದಿ ಪರಮನ ಗೃಹಕೆ ಭಕ್ತಿಯೊಳಂದು । ತೆರಳಿದನತಿ ತ್ವರಿತದೊಳು ೫೮

---

1 ಳು ಒಂ (ಕ) 2 ಟ್ಟುವ (ಗ) 3 ರ್ದ (ಗ) 4 ವೆಲ್ಲ (ಕ) 5 ದು (ಕ)
6 ಕ್ಷೆ (ಗ) 7 ದು (ಗ) 8 ಕೇಳ್ದ ನೀನ (ಗ) 9 ಬ (ಕ) 10 ಗೆ ಬುದ್ಧಿ ಪೇಳಿ (ಕ)
11 ಹಿತರಿ ಕಟ್ಟಿತಾ ಕ್ರಿ (ಗ) 12 ಅಂ (ಕ) 13 ವಿಶದ (ಕ) 14 ಮಹ (
15 ಪರಮನ ಗೃಹಕೆ (ಕ) 16 ರ್ಜ (ಗ)

ಓಸರಿಸದೆ ಆ ಪುರವೆಂಬ ಸರಸಿಯೊಳು । ಸಾಸಿ[1]ರೆ[1]ಸಳ ಕಂಜದಂತೆ
ವಾಸವಾರ್ಚಿತ ಸುಪಾರ್ಶ್ವ ಜಿನೇಶನ । ವಾಸವೊಪ್ಪಿತು ಶೋಭೆಯಿಂದ ೧೯

ಮತ್ತೆ ಆ ಬಸದಿಯ ಸುತ್ತಲು ಭವ್ಯರ । ಉತ್ತಮಭವನಗಳಿಹವು
ಚಿತ್ರಜವಿಜಯಗೆ ನಿತ್ಯಮಂಗಲಪೂಜೆ । ಚಿತ್ತಶುದ್ಧಿ ಮಾಡುತಿಹರು ೨೦

ಆ ಪುರದೊಳಗಣ ಭವ್ಯರ ಗುಣಗಳ । ನಾ ಪೇಳ್ವುದಕೆ ಬಂದಪುದೆ
ಏಪೊತ್ತು ಅಭಿಷೇಕ [2]ನೋಂಪಿ[2]ಗಳನು ಮಾಡಿ । ಪಾಪವ [3]ಕೆಡಿಸು[3]ತ್ತಲಿಹರು ೨೧

ಅಷ್ಟಭೋಗವು ಅ[4]ಷ್ಟೈ[4]ಶ್ವರ್ಯದಿಂದಲಿ । ಶ್ರೇಷ್ಠರೆನಿಸಿ ಭವ್ಯಜನರು
ಅಷ್ಟನೆ ನೆಲೆಯೊಳು ನೆಲಸಿದ ದೇವನ । ಇಷ್ಟಾರ್ಥ ಬೇಡುತ್ತಲಿಹರು ೨೨

ಆ ಪುರದೊಳಗಣ ಭವ್ಯರೊಳುತ್ತಮ । ರೂಪುಕಂದರ್ಪಸನ್ನಿಭ[5]ನು[5]
ಪಾಪಭೀತ[6]ನು[6] ಪರಹಿತಗುಣಚರಿತ[7]ನು[7] । ದೀಪನು ನಿಜಕುಲಗೃಹಕೆ ೨೩

ಅಘಹರನಂಘ್ರಿಯಂಬುಜಕೆ ಷಟ್ಚರಣ[8]ನು[8] । ಸುಗುಣಗಣಾಬ್ಧಿ ಚಂದ್ರಮನು
ಬಗೆಬಗೆ ನೋಂಪಿ ಪೂಜೆಗಳನು ಮಾಡುತ್ತ । ಮಿಗೆ ಹರುಷದೊಳಿರುತಿಹ[9]ನು[9] ೨೪

ಅಘವನಿನಿಸು ಪೊರ್ದಲೀಯದ ಗುಣಮ[ಣಿ । ಚಿಗಬೊಮ್ಮಶೆಟ್ಟಿ ಒಪ್ಪಿದ][10]ನು
ಜಗದೊಳಗೆಲ್ಲ ಭವ್ಯರಿಗುಪದೇಶವ । ಮಿಗೆ ಹರುಷದಿ [11]ಪೇಳ್[11]ತಿಹನು ೨೫

ಆ ಪುರುಷನ ಅರ್ಧಾಂಗಿ ಕೆಂಚಮ್ಮನು । ನೂತನರತಿದೇವಿಯಂತೆ
ನೀತಿವ್ರತಂಗಳೊಳು ಸೀತೆ ದ್ರೌಪತಿಯಂತೆ । [12]ಖ್ಯಾತೆ[12] ವಿರಾಜಿಸುತಿಹ[13]ಳು[13] ೨೬

ಆ ದಂಪತಿಗಳ ಗರ್ಭದಿ ಜನಿಸಿದ । ಮದನಸ್ವರೂಪಸಂಯುತನು
ಮೇದಿನಿಯೊಳು ಭವ್ಯಜನರಿಗುಪಾಧ್ಯಾಯ । ಓದಿ ಪೇಳು[14]ತ[14] ಧರ್ಮಕಥೆಯ ೨೭

ಬಾಲಕಾಲದಿ ಭಾರತೀ[15]ವ[15]ರದಿಂದಲಿ । ಮೇಲುಕವಿತೆ[16]ಗಳ ಪೇಳ್ವ[16]
ಲೀಲೆಯಿಂದಿರುತಿ[17]ರ್ದ [17]ಹೆಂಗಳ ಮೋಹದ । ಜಾಲ[18]ಕ್ಕೆ ತಾ[18] ಸಿಲ್ಕದಿರ್ದ ೨೮

---

1 ರದೆ (ಕ) 2 ಪೂಜೆ (ಗ) 3 ನೀಗು (ಗ) 4 ಷ್ಟಐ (ಕಚ) 5 ರು (ಕ) 6 ರು (ಕ)
7 ರು (ಕ) 8 ವ (ಕ) 9 ರು (ಕ) 10 ಣಮ...ಬಣಜಿಗಶೆಟ್ಟಿವಪ್ಪಿ (ಕ) ಣಿ ಬಣಜಿಗ ಬೊಮ್ಮ (ಗ) ಮಣಮಣಿ ಚಿಗಬೊಮ್ಮ (ಚ) 11 ಪೋಗು (ಕ) 12 ವಿಖ್ಯಾತೆ (ಕ) ಖ್ಯಾತಿ (ಗ)
13 ರು (ಕ) 14 ವ (ಕ) 15 ವಾ (ಕ) 16 ಳು ಪುಟ್ಟಿ (ಗ) 17 ರೆ (ಗ) 18 ಕ್ಕೈ (ಕ)

ಈ ಪರಿ ಐವತ್ತೈದು ವರುಷವಿರ್ದು । ಪಾಪವ ಕೆಡಿಸಲೆಂದೆನುತ
ಶ್ರೀಪತಿಸುತನ ಗೆಲಿದ ಜಿನದೇವನ । ಸ್ಥಾಪಿಸಿದನು ಹೃದಯದೊಳು ೭೯

ಇಂತಿರುತಿರ್ದೊಂದು ದಿನದೊಳು ಬಸದಿಗೆ । ಅಂತರಿಸದೆ ಬಂದು ಬಳಿಕ
ಕಂತುವಿಜಯ ಸುಪಾರಿಶ್ವಜಿ[1]ನೇಶ[1]ಗೆ । ಸಂತೋಷದಿಂದೆಱಗಿದನು ೮೦

ಸೇನಗಣಾಂಬರಭಾನುವೆಂದೆನಿ[2]ಸಿದ[2] । ಜ್ಞಾ[3]ನಿ[3] ಲಕ್ಷ್ಮೀಸೇನಮುನಿಗೆ
ಸಾನುರಾಗದಿ ವಂದಿಸಿಯೆನ್ನ ಅಘತತಿ । ಹಾನಿಯಪ್ಪಂತು ಮಾಡೆಂದು ೮೧

ದರುಶನ ಜ್ಞಾನ ಚಾರಿತ್ರಂಗಳಿವು ಮೂ[4]ಱು[4] । ಧರಿಸಿದಲ್ಲದೆ ಕರ್ಮ ಕೆಡದು
ಪರಮಸುಖವನೀವ ಪಂ[5]ಚಾಣುವ್ರ[5]ತಗಳ । ಒರೆದು ಕೊಟ್ಟರು ದೀಕ್ಷೆಯನು ೮೨

ಏನೆಂಬೆ ಪಾರಿಶ್ವನಾಥನ ಬಸದಿಯೊ[6]ಳು । ನಾ[6]ನು ದೀಕ್ಷೆಯ ಪಡೆ[7]ದುದಱಿಂ[7]
ಸಾನುರಾಗ[8]ದಲಿ[8] ಪಾರಿಶ್ವವರ್ಣಿಗಳೆಂದು । ತಾನಾದುದಂದಭಿದಾನ ೮೩

ಈ ಪರಿಯೊಳು ದೀಕ್ಷೆಯನಾಂತು ಸಮ್ಯಕ್ತ್ವ । ವ್ಯಾಪಿ[9]ಸೆ[9] ಮನದೊಳು ಮತ್ತೆ
ಪೇಳ್ವೆ ಸಮ್ಯಕ್ತ್ವಕೌಮುದೀ ಚರಿತೆಯ । ನಾ ಪೇಳ್ವೆ ಕನ್ನಡದಿಂದ ೮೪

ಕ್ಷರಲಕ್ಷಣವಱಿಯದೆನಗೆ ಮತ್ತೆ । ಲಕ್ಷಣವೆನಗೆ ಗೋಚರವೆ
ಕ್ಷೀಕರಿಸಿ ಕೇಳಿಯದರ ತಪ್ಪನು ತಿದ್ದಿ । ರಕ್ಷಿಪುದೆನ್ನ ಬಲ್ಲವರು ೮೫

ಮತಿಗೆ ತಕ್ಕನಿತು ಜಿನರ ಸ್ತುತಿ ಪೇಳ್ದೊಡೆ । ಹಿತವಾಗುವುದು ಸಜ್ಜನರಿಗೆ
ಮತಿಹೀನ ಹಳಿಯೆ ರತ್ನಕೆ ಅಗ್ನಿಯಿಂದಲಿ । ಹತವುಂಟೆ [10]ನಿಂದಕ ಕೆಡುವ[10] ೮೬

ಬಲ್ಲನೀತನು ಸೊಲ್ಲಿಸಿದೊಡೆ ಹೃದಯ[11]ದಲಿ[11] । ಉಲ್ಲಾಸ ಮಾಳ್ಪರುತ್ತಮರು
ಖುಲ್ಲ [12]ಕುತ್ರ[12]ರ್ಕರೆಲ್ಲರು ನಿಂದಿಸೆ ತಾವು । ಸಲ್ಲದ ಗತಿಯನೆಯ್ದುವರು ೮೭

ಮುಂದೆ ನೀ ಪೇಳ್ದು[13]ದು[13] ಚೆಂದವಾಯಿತುಯೆಂದು । ಹಿಂದೆ ಹಳಿವರು ದುರ್ಜನರು
ಂಧಕಾರವು [14]ಉಲೂಕಗೆ[14] ಹಿತವಾದಂತೆ । ನಿಂದ[15]ಕ[15]ರು ನರಕಕೆಯ್ದುವರು ೮೮

---

[1] ನರಿ (ಗ) [2] ಸುವ (ಕ) [3] ನ (ಕ) [4] ಱು (ಕ) [5] ಚಬಾಣಾವ್ರ (ಕ) [6] ತಾ (ಗ)
[7] ದು (ಗ) [8] ದಿ (ಕ) [9] ಪಿ (ಗ) [10] ಸಜ್ಜನರಿಗೆ (ಗ) [11] ದಿ (ಕ) [12] ತ (ಗ)
[13] ದ (ಗ) [14] ಉ (ಕ) [15] ಪ (ಗ)

ಕಣಕೆ-ಸೂಳೆ ೨-೭೪

ಗೊಳ್ಳ-ಒಂದು ಬಗೆಯ ಬದನೆಕಾಯಿ ೧೦-೪೩

ಗೂಡ-ಕುಕ್ಕೆ, ಬುಟ್ಟಿ ೫-೨೫

ಗೋತ್ರಾರಿ--ದೇವೇಂದ್ರ ೧-೧

ಗೋರೋಚನ-ದನಗಳ ಹೊಟ್ಟೆಯಲ್ಲಿ ಸಿಕ್ಕುವ ಒಂದು ಬಗೆಯ ಅರಿಸಿನಬಣ್ಣದ ಔಷಧದ್ರವ್ಯ ೬-೩೨

ಘ

ಘಟ್ಟು-ಘಟ್ಟಿಸು, ಭಾರಿಸು, ಹೊಡೆ ೩-೧೦

ಚ

ಚಂಡಾಂಶು-ಸೂರ್ಯ ೭-೧೦೯

ಚಂದ್ರಗತಿ-ನಿದಾನನಡಿಗೆ ೧೨-೨೩

ಚವುಕಳಿ-ನಾಲ್ಕುಮುತ್ತುಗಳ ಕರ್ಣಾಭರಣ ೭-೫೭

ಚಿತ್ರ-ರಮಣೀಯ ೧೨-೮೫

ಚಿನಿ ಒಂದು ಬಗೆಯ ಬಣ್ಣ ೧-೯೭

ಚಿಮ್ಮುರಿ-ರುಮಾಲು ೭-೫೮

ಚೀನೀ -ರೇಷಿಮೆಬಟ್ಟೆ ೧೮-೮೯

ಚೂಟಿ-ತಂತ್ರ ೬-೪೫

ಜ

ಜಘನ್ಯ-ನೀಚ, ತುಚ್ಛ ೧೦-೧೪

ಜತನ-ಜಾಗ್ರತೆ, ಎಚ್ಚರಿಕೆ ೧೪-೩೪

ಝ

ಝಲ್ಲಿ-ಮೇಲ್ಕಟ್ಟು ೭-೫೫

ಡ

ಡೌಡೆ-ನಗಾರಿ ೭-೬೪

ತ

ತಂಡುಮಾತು-ಸುಳ್ಳು, ಎರಡುಮಾತು ೨-೯

ತಕ್ಕೈಸು-ಆಲಿಂಗಿಸು, ಮುದ್ದಾಡು ೪-೨೩

ತಟಿಸು-ಹೊಡೆ, ಬಡಿ ೬-೪೫

ತಾಮರಸ-ತಾವರೆ ೧-೩

ತಿಗುರು--ತಿಕ್ಕು, ತೀಡು ೧೩-೫೧

ದ

ದಿಂಡೆ-ಉದ್ಧತಸ್ತ್ರೀ ೨-೯

ದಿಡ್ಡಿ-ಸಣ್ಣ ಕಿಂಡಿಯ ಬಾಗಿಲು ೮-೬೮

ದೊಂಬಿ-ಸಮೂಹ ೧೫-೭೬

ಧ

ದರಿ ಗವಿ, ಗುಹೆ ೧೭-೮೪

ಧಾಮ-ಉದಾತ್ತವಾದ, ಹಿರಿದಾದ ೧-೩

ನ

ನಿರ್ಧೂತ-ಪವಿತ್ರ ೧೧-೭೧

ನೀಲ-ನೀಲರತ್ನ ೯-೪೨

ನೀಸು-ಪೂರಯಿಸು, ಕೊನೆಗಾಣಿಸು ೧೪-೭೭

ಪ

ಪುಂಜ-ರಾಶಿ ೨-೩೯

ಪಟ್ಟಿಯ-ಉದ್ದವಾದ ಕತ್ತಿ ೧೪-೭೪

ಪಟ್ಟೆಹಚ್ಚಡ-ರೇಷ್ಮೆಬಟ್ಟೆ ೭-೫೮

ಪರಜೆ-ಖಡ್ಗ ೧೦-೨೨

ಪವಣು-ಅಳತೆ, ಲೆಕ್ಕ ೯-೪೦

ಪಳಿದ್ಯ-ಊಟದ ಜತೆ ಬಳಸುವ ಒಂದು ಬಗೆಯ ವ್ಯಂಜನ ೫-೧೫

ಪಾಡಿ-ಸೈನ್ಯ ೮-೬೮

ಪೊಮ್ಮಡಿಲ್-ಬಂಗಾರದ ಗೋಡೆ ೧-೮೩

ಬ

ಬಂಡ-ವಸ್ತು ೧೨-೭೨

ಬೆಂಚೆ-ನೀರಿನ ಒರತೆ, ಕುಂಟೆ ೧೪-೧೯

ಬಾರ-ಪಗಡೆಯ ಆಟದಲ್ಲಿ ಹನ್ನೆರಡರ ಲೆಕ್ಕ ೫-೪

ಬೀಸುಜಾಲ-ಬೀಸುಬಲೆ ೨-೮೩

ಬೈತ್ರ-ಹಡಗು, ದೋಣಿ ೧-೩೯

ಬೋಸರಿಸು-ಕಪಟಪ್ರೇಮ ತೋರಿಸು ೧೧-೮೦

ಭ

ಭಟ್ಟ-ವಿದ್ವಾಂಸ, ಪಂಡಿತ ೩-೩



ಭರತ-ಕಡಲಿನ ಅಬ್ಬರ ೧೨ ೬೧

ಭಾಮಂಡಲ-ಸೂರ್ಯ ಮತ್ತು ಚಂದ್ರನ ಸುತ್ತಲು ಇರುವ ಬೆಳಕಿನ ವರ್ತುಲ ೧-೩೫

ಭೈಷಜ್ಯ-ಔಷಧಿ ೫-೪೭

ಮ

ಮಂದಾಸ-ದೊಡ್ಡ ಪೆಟ್ಟಿಗೆ ೫-೪೨

ಮಂಟಿಕೆ-ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ೧೩-೬೩

ಮಕ್ಷಿಕ-ನೊಣ ೮.೮೭

ಮತ್ತಿ-ಮೈಮೇಲಿನ ಕಪ್ಪು ಕಲೆ ೧೨-೧೦೦

ಮರಕತ-ಪಚ್ಚೆ ೧-೨

ಮಾಗಡಿ-ಒಂದು ಜಾತಿಯ ಬೇರು ೧೦-೩೮

ಮಹಿಮ-ಶ್ರೇಷ್ಠತೆ ೬-೪೫

ಮುಮುಕ್ಷು-ಮೋಕ್ಷವನ್ನು ಬಯಸುವವ ೧೦-೬೧

ಮೂಡೆ ಧಾನ್ಯಗಳನ್ನು ತುಂಬುವ ಕೊಮ್ಮ ೧೭-೧೭

ಮೆಟ್ಟಕ್ಕಿ-ಮದುಮಕ್ಕಳು ಮದುವೆಯ ಕಾಲದಲ್ಲಿ ಕಾಲಿಟ್ಟು ನಿಲ್ಲುವ ಅಕ್ಕಿ ೭ ೬೦

ಮೊಗರಂಬ-ಆನೆ ಕುದುರೆಗಳ ಮುಖವಾಡ ೧೫-೬೯

ಯ

ಯಾಜ್ಞ-ಯಾಗ ಮಾಡುವವ ೧೦-೨೪

ರ

ರಚ್ಚೆಮನುಜ--ಬಾಯಿಗೆ ಬಂದಂತೆ ಹರಟುವವ ೨೧-೪೩

ರತ್ನತ್ರಯ-ಜೈನ ತತ್ವದ ಸಮ್ಯಕ್ ಜ್ಞಾನ, ಸಮ್ಯಕ್ ದರ್ಶನ, ಸಮ್ಯಕ್ ಚಾರಿತ್ರ ೧-೯

ರಾಜಾನ್ನ-ಒಂದು ಬಗೆಯ ಬತ್ತ ೧-೬೭

ರೋಹಣ-ಸವಾರಿ, ಏರುವಿಕೆ ೧೨-೧೦೮

ಲ

ಲಂಡೆ-ಕೀಳುಹೆಂಗುಸು ೧೮-೧೩

ಲಂಬಣ-ಮೇಲ್ಕಟ್ಟು ೧೪-೪೨

ಲುಳಿರಸ-ಒಂದು ಬಗೆಯ ಕಾಲಿನ ಆಭರಣ ೭-೫೭

ವ

ವಂಕ-ಜೇನು ೧೨-೧೦೯

ವಿಂಧ್ಯಕ-ಬೇಡ ೯-೪೨

ವಪುಸ್-ದೇಹ ೧.೧

ವಾಜೆ-ನಡತೆ, ಚಾಳಿ ೧೨-೧೦೫

ವಿಚಾರಿ-ವಿವೇಕಿ, ಆಲೋಚಕ ೩-೪೦

ವಿಥವ-ಸಡಗರ, ಉತ್ಸಾಹ ೮-೩೯

ವಿಷ್ಟರ-ಸಿಂಹಾಸನ ೧.೮೮

ವೈಕುರ್ವಣೆ-ಬದಲಾವಣೆ ೫.೭೭

ವೈಯಾವೃತ್ಯ-ಮುನಿಗಳ ಮೇಲೆ ಬಂದ ಸಂಕಟವನ್ನು ಪರಿಹರಿಸುವುದು, ಎಂದರೆ ರೋಗಿಗಳು ಮುಪ್ಪಿನವರು, ಅಸಹಾಯಕರಾದ ಮುನಿಗಳ ಸೇವೆಮಾಡುವುದು. ೧೫-೧೮

ಸ

ಸಂಚಲ-ಹೊಯ್ದಾಡುವ, ನಡುಗುವ ೧೪-೧೯

ಸಕ್ಕರೆಬುರುಡೆ-ಒಂದು ಬಗೆಯ ಸಿಹಿತಿಂಡಿ ೧೦-೪೦

ಸಮವಸರಣ-ತೀರ್ಥಂಕರರ ಸಭೆ ೧-೩೦

ಸಮೆ-ಮಾಡು ೯-೧೭

ಸಪ್ತಾಂಗ-ರಾಜ್ಯದ ಏಳು ಅಂಗಗಳು : ಸ್ವಾಮಿ ಸುಹೃತ್, ಮಂತ್ರಿ, ಕೋಶ, ರಾಷ್ಟ್ರ, ದುರ್ಗ, ಸೈನ್ಯ ೧೭-೧೫

ಸಮ್ಯಕ್ತ್ವ--ಜೈನಧರ್ಮದಲ್ಲಿ ನಂಬಿಕೆ ೧-೯೮

ಸಾವಧ್ಯ-ಕೊಲೆ ೧೨-೧೭

ಸಿಂಗಾಡಿ-ಬಿಲ್ಲು (ಬಾಣ) ೪-೨೯

ಸಿಂಹವಿಷ್ಟರ-ಸಿಂಹಾಸನ ೧-೨೮

ಸುಗತ-ಬುದ್ಧದೇವ ೧೧-೬೯

ಸೂರಾಡು-ಸೂರೆಮಾಡು, ಕೊಳ್ಳೆಹೊಡೆ ೮-೩೫

ಸೌರಣೆ-ಸಜ್ಜು, ಅಣಿ ೧-೭೧

ಸೌರಭ್ಯ-ಸುವಾಸನೆ ೧-೨೯

ಸ್ತವ-ಸ್ತುತಿ, ಸ್ತೋತ್ರ ೧-೪೪

ಸ್ಯಾದ್ವಾದ-ಜೈನಧರ್ಮ ೧-೨

ಸ್ವಸ್ತಿಕ-ಮಂಗಲ ಪ್ರಸಂಗಗಳಲ್ಲಿ ಬರೆಯುವ ಒಂದು ಬಗೆಯ ಮಂಗಲಚಿಹ್ನೆ ೧೭-೭೩

ಹ

ಹತಿಸು-ಕೊಲ್ಲು, ನಾಶಮಾಡು ೬-೫

ಹವ್ಯೊರತಾತಿ-ಒಂದುಬಗೆಯ ಆಭರಣ ೭-೫೭

ಹರಳ್ಮೇಖಲೆ-ಹರಳಿನ ಒಡ್ಯಾಣ ೭-೪೭

ಹರಿತಾಂಗ-ಮನಮೋಹಕ ಶರೀರದವನು ೨-೨೯

ಹರಿಪೀಠ ಸಿಂಹಾಸನ -೨೫

ಹವಣು-ಮಿತಿ ೧೫-೯

ಹಸ-ಸೌಂದರ್ಯ, ಸ್ವಚ್ಛತೆ. ೧-೬೨

ಹಸ್ತಗಟ್ಟು-ಕಂಕಣ ೭-೬೧

ಹೀರಾವಳಿ-ಮಾಣಿಕದ ಸರ ೭-೫೭

ಹುಲ್ಲಾಳು-ಸಾಮಾನ್ಯಮನುಷ್ಯ ೩-೧೪

ಹುಲಿಮುಖ-ಕೋಟೆಯೊಳಗಿನ ಸಣ್ಣ ಸೀಳುದಾರಿ ೩-೧೦೮

ಹೆರೆನೊಸಲು-ಚಂದ್ರನಂತಿರುವ ಹಣೆ ೧-೪೧

ಹಳ್ಳ-ಹಂಟೆ ೩-೯೪

ಹೇಳಿಗೆ-ಹಾವಿನ ಪೆಟ್ಟಿಗೆ ೬-೪೩

# ಕನ್ನಡ ಅಧ್ಯಯನ ಸಂಸ್ಥೆ

## ಪ್ರಾಚ್ಯಕಾವ್ಯ ಮಾಲೆಯ ಕೆಲವು ಪ್ರಕಟಣೆಗಳು



೧. ಪದಾರ್ಥಸಾರ (೧–೨)
೨. ಸೂಪಶಾಸ್ತ್ರ
೩. ಸೊಬಗಿನ ಸೋನೆ
೪. ಬಸವರಾಜ ಚಾರಿತ್ರ (ಸಿಂಗಿರಾಜ ಪುರಾಣ)
೫. ಸನತ್ಕುಮಾರ ಚರಿತೆ
೬. ಅರಿವಿನ ಮಾರಿತಂದೆಗಳ ವಚನಗಳು
೭. ನಳಚಂಪು
೮. ವಿಷ್ಣುಪುರಾಣಂ
೯. ಕಂಠೀರವ ನರಸರಾಜವಿಜಯ
೧೦. ಸೌಂದರ್ಯಲಹರೀ
೧೧. ಆದಿಪರ್ವ
೧೨. ರಸರತ್ನಾಕರಂ
೧೩. ಕರಸ್ಥಲ ನಾಗಲಿಂಗನ ಚರಿತ್ರೆ
೧೪. ಅನಂತನಾಥ ಪುರಾಣಂ
೧೫. ಮದನ ಮೋಹಿನಿಯ ಕಥೆ
೧೬. ಸೂಕ್ತಿಸುಧಾರ್ಣವಂ
೧೭. ದೀಕ್ಷಾಬೋಧೆ
೧೮. ಗುರುಭಕ್ತಚಾರಿತ್ರ
೧೯. ಹರಿಹರನ ಐದು ರಗಳೆಗಳು
೨೦. ಅಬ್ಬಲೂರು ಚರಿತೆ
೨೧. ಕುಮಾರಕಾಳಗ
೨೨. ಕೆಳದಿನೃಪ ವಿಜಯಂ
೨೩. ಉದ್ಯೋಗಸಾರ
೨೪. ಗುರುಬೋಧಾಮೃತಂ
೨೫. ವರ್ಧಮಾನ ಪುರಾಣಂ
೨೬. ಹರಿವಂಶಾಭ್ಯುದಯಂ
೨೭. ವಿರಾಟಪರ್ವ
೨೮. ಜನವಶ್ಯ
೨೯. ದ್ವಾದಶಾನುಪ್ರೇಕ್ಷೆ
೩೦. ಹಾಲಾಸ್ಯ ಪುರಾಣಂ
೩೧. ಧರ್ಮನಾಥ ಪುರಾಣಂ
೩೨. ಸಾನಂದ ಚರಿತೆ
೩೩. ಜೀವಂಧರ ಚರಿತೆ
೩೪. ಯೋಗರತ್ನಾಕರ
೩೫. ಸಾನಂದ ಗಣೇಶ ಸಾಂಗತ್ಯ
೩೬. ಕಲ್ಯಾಣಕೀರ್ತಿಯ ಕೃತಿಗಳು
೩೭. ಪುರಾತನರ ಚರಿತೆ
೩೮. ಅರಣ್ಯಪರ್ವ
೩೯. ಬಸವೇಶ್ವರ ಪುರಾಣದ ಕಥಾಸಾಗರ
೪೦. ಜಗನ್ನಾಥ ವಿಜಯಂ
೪೧. ರುಕ್ಮಾಂಗದ ಚರಿತ್ರೆ
೪೨. ಜಾತಕ ತಿಲಕಂ
೪೩. ಶಬ್ದಮಣಿದರ್ಪಣಂ
೪೪. ಪುಣ್ಯಾಸ್ರವ
೪೫. ನೇಮಿನಾಥ ಪುರಾಣಂ
೪೬. ಶ್ರೀಪಾಲ ಚರಿತೆ
೪೭. ಸುಜ್ಞಾನ ಚಿಂತಾಮಣಿ
೪೮. ನಿಜಲಿಂಗ ಚಿಕ್ಕಯ್ಯನ ಸಾಂಗತ್ಯ
೪೯. ದಶಾವತಾರ ಚರಿತೆ
೫೦. ಯಾದವಗಿರಿ ಮಾಹಾತ್ಮ್ಯಂ
೫೧. ನನ್ನಯ್ಯಗಳ ಚಾರಿತ್ರ
೫೨. ಸುವಿಚಾರ ಚರಿತೆ ಮತ್ತು ಜ್ಞಾನಭಾಸ್ಕರ ಚರಿತೆ
೫೩. ನನ್ನಯ್ಯ ಚಾರಿತ್ರ
೫೪. ಅನುಭವ ಮುಕುರ
೫೫. ರುಕ್ಮಾಂಗದ ಚರಿತೆ
೫೬. ಪಟ್ಸ್ಥಲ ತಿಲಕ
೫೭. ಕೋಡಗದ ಮಾರಯ್ಯನ ಚರಿತ್ರೆ
೫೮. ಚಂದ್ರಪ್ರಭ ಚರಿತೆ
೫೯. ಪಶ್ಚಿಮರಂಗಕ್ಷೇತ್ರಮಾಹಾತ್ಮ್ಯಂ ಮತ್ತು ಚಿಕ್ಕದೇವರಾಜ ವಂಶಾವಳಿ
೬೦. ವೆಂಕಟಗಿರಿಮಾಹಾತ್ಮ್ಯಂ
೬೧. ಆರಾಧ್ಯಚಾರಿತ್ರ

ರಕ್ಷಾಪುಟ ಮುದ್ರಣ : ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು